# ಬಾಳ್ವೆಯೇ ಬೆಳಕು

ಶಿವರಾಮ ಕಾರಂತ

ಅಕ್ಷರ ಪ್ರಕಾಶನ ಸಾಗರ ಕರ್ನಾಟಕ ರಾಜ್ಯ

B̄ALVEȲE BELAKU : (Kannada) a dissertation about life and its beliefs by Dr. K. S. Karanth, Saligrama, S. K.; Printed at Sagara Mudrana, Sagar and Published by Akshara Prakashana Sagar (Karnataka) 577401 ; Third Impression : November 1975 1000 copies ; 129 pages ; price: Rupees Six.



ಬೆಲೆ: ಆರು ರೂಪಾಯಿ

# ಬಾಳ್ವೆಯೇ ಬೆಳಕು

## ೧ ಭೀತಿಯಿಂದ ಹುಟ್ಟಿದ ಮನೋಧರ್ಮ

**ಸಮಸ್ಯೆಯಲ್ಲ**

ಪ್ರತಿಯೊಂದು ಜೀವಿಯೂ ತನ್ನ ಬದುಕನ್ನು ಇದಿರಿಸುತ್ತದೆ. ಮಗು ಹುಟ್ಟಿ ಕಣ್ದೆರೆದು ನೋಡತೊಡಗಿತೆಂದರೆ ಬಾಳ್ವೆಯು ಅದಕ್ಕೆ ಇದಿರಾಗುತ್ತದೆ. ಮುಂದೆ ಅದು ಬೆಳೆದು ದೊಡ್ಡದಾಗಿ, ಮಣ್ಣುಗೂಡುವ ತನಕ ಅದು ಬದುಕಿನೊಡನೆ ಹೋರಾಡ ಬೇಕು. ಇದರಂತೆ ಪ್ರತಿಯೊಂದು ಜೀವಿಯಾದರೂ ಸರಿಯೆ, ತನ್ನ ಬದುಕನ್ನು ಇದಿರಿಸ ಬೇಕಾಗುವುದು. ಆದರೆ ಇಂಥ ಜೀವಕೋಟಿಗಳಲ್ಲಿ ಬಾಳ್ವೆಯೆಂಬುದನ್ನು ಒಂದು ಸಮಸ್ಯೆಯಾಗಿ ತಿಳಿಯುವುವು ಎಷ್ಟು ? ಅರಿವಿಲ್ಲದ ಮಕ್ಕಳ ಪಾಲಿಗೂ ಬದುಕು ಇದಿರಾಗಿ, ಕಣ್ಮುಂದೆ ಸಾಗುವುದರ ಅನುಭವವಾಗುತ್ತದೆ. ಆದರೆ 'ಪ್ರಪಂಚ ಎಂಬುದೇನು ?' 'ಬದುಕು ಏನು ?' 'ಬಾಳ್ವೆ ಏತಕ್ಕೆ' ಎಂಬ ವಿಚಾರಗಳನ್ನು ಮಾಡದೆಯೇ ಅವು ತಮ್ಮ ಜೀವನ ಕಳೆಯಬಹುದು. ಬರಿದೆ ಬದುಕುವುದರಿಂದಲೇ ಅವುಗಳ ಬದುಕು ಸರಿಯುತ್ತದೆ. ಬದುಕು ಏನು, ಯಾಕೆ, ಅದರ ಹಿಂದೇನಿತ್ತು, ಮುಂದೇನಿದೆ—ಎಂಬ ಪ್ರಶ್ನೆಗಳಿಗೆ ಅವುಗಳು ಕೈ ಹಾಕದೆ ಉಳಿಯುವುವು.

**ಸಮಸ್ಯೆಯಾಗಿ**

ಬಾಳ್ವೆಯು, ಇತರ ಜೀವಿಗಳ ಪಾಲಿಗೆ ಹೇಗೂ ಇರಲಿ, ಮನುಷ್ಯನ ಪಾಲಿಗೆ ಹಾಗೇನೆ ಉಳಿದಿಲ್ಲ. ಅವನು ಬೆಳೆದಂತೆ, ಅವನ ಅರಿವು ತೀಕ್ಷ್ಣವಾಗುತ್ತ ಬಂದಂತೆ, ತನ್ನ ಜೀವನವನ್ನು ಆತ—ಸಮಸ್ಯೆಯಾಗಿ ತಿಳಿಯುವುದು ಸಹಜ. ತನ್ನ ಜೀವನದಲ್ಲಿ ಸಂಧಿಸುವ ನೂರಾರು ವಿಸ್ಮಯಕಾರಕ ಘಟನೆಗಳು, ತನ್ನ ಹಿತಕ್ಕೆ ಇದಿರಾಗುವ ಹಲವೊಂದು ತಡೆ, ತೊಡರುಗಳು, ಅವನಿಗೆ 'ಬದುಕಿನ' ನೆನಪನ್ನು ಚುಚ್ಚಿಕೊಡುತ್ತವೆ. ಈ ಪ್ರಪಂಚ ಏಕೆ ಉಂಟಾಯಿತು, ತಾನು ಏಕೆ ಇದ್ದೇನೆ, ಅದರಲ್ಲಿ ತನಗೇನು ಸ್ಥಾನ, ಈ ಬಾಳ್ವೆಯು ಅರ್ಥವೇನು, ಇವುಗಳ ಕೊನೆ ಎಲ್ಲಿದೆ—ಎಂಬ ಹಲವು ಪ್ರಶ್ನೆಗಳು ಅವನ ವಿಚಾರವನ್ನು ಕೆರಳಿಸುವುವು. ಅಂಥ ಪ್ರಶ್ನೆಗಳಿಗೆ ಸುಲಭವಾದ ಪ್ರತ್ಯುತ್ತರಗಳು ದೊರೆಯದೆ, ಅವನು ತನ್ನ ಶಾಂತಿಯನ್ನು ಕೆಡಿಸಿಕೊಳ್ಳುವುದೂ ಸಹಜ. ಆದರೆ ಎಷ್ಟು ಜನರು ಇಂಥ ಪ್ರಶ್ನೆಗಳನ್ನು ಸಮನಾಗಿ ತಿಳಿಯಬಲ್ಲರು ? ತಿಳಿದು ಅವಕ್ಕೆ ಸಮಾಧಾನ ತಂದುಕೊಳ್ಳ ಬಲ್ಲರು ? ಎಷ್ಟೆಷ್ಟು ಅಧಿಕವಾಗಿ ನಾವು ಹೀಗೆ ಚಿಂತಿಸುತ್ತೇವೆಯೋ ಅಷ್ಟಷ್ಟು ಗಹನವಾಗಿ ಈ ಸಮಸ್ಯೆಗಳು ಕಂಡಾವು. ಆಗ ಮನಸ್ಸು ದಿಗಿಲುಗೊಳ್ಳುವುದು ಸಹಜ.

### ಆಹಾರದ ಸಮಸ್ಯೆ

ಸಾಮಾನ್ಯರಿಗೆ ಆಹಾರದ ಹೋರಾಟವೇ ಕಠಿಣವಾಗಿ ಕಾಣಿಸುವಾಗ, ಇತರ ಸಮಸ್ಯಾಪೂರ್ತಿಗಳು ಅನಾವಶ್ಯಕವಾಗಿಬಿಡುವುವು. ಇನ್ನು ಹಲವರಿಗೆ, ತಾವು ಒಬ್ಬಂಟಿಗರಾಗಿ ಇಂಥ ಪ್ರಶ್ನೆಗಳನ್ನು ತರ್ಕಿಸಲು ಸಾಹಸ ಬಾರದು. ಆದರೂ ಆ ಪ್ರಶ್ನೆಗಳು ತಮ್ಮನ್ನು ಅನೇಕ ಬಾರಿ ಕಾಡುತ್ತಿರುವುದರಿಂದ, ಅನ್ಯರು ಈ ವಿಷಯವಾಗಿ ಕೊಟ್ಟ ಸಮಾಧಾನಗಳನ್ನು ತಮ್ಮದಾಗಿ ತಿಳಿಯುತ್ತಾರೆ. ಹಿಂದಣ ಕಾಲದ ಒಬ್ಬ ಋಷಿಯೋ, ಪಂಡಿತನೋ, ತರ್ಕಿಯೋ—ದೊಡ್ಡವನೆಂದು ತಾನು ಒಪ್ಪಿ ಬಂದಿರುವ ಆ ಒಬ್ಬನು ಈ ವಿಷಯಗಳಲ್ಲಿ ಏನು ಹೇಳಿರುತ್ತಾನೋ, ಅದೇ ತನ್ನ ನಂಬಿಕೆಯೆಂದು ತಿಳಿಯುತ್ತಾನೆ. ರಾಜಕೀಯದಲ್ಲಿ–ಕೌನ್ಸಿಲಿನ ಪ್ರತಿನಿಧಿಗಳನ್ನು ಚುನಾವಣೆಯ ಕಾಲದಲ್ಲಿ ಕಣ್ಮುಚ್ಚಿ ಆರಿಸುವ ಮತದಾರನಂತೆ, ಈತನು ಒಪ್ಪುತ್ತಾನೆ. ವ್ಯತ್ಯಾಸವಿಷ್ಟೆ : ರಾಜಕೀಯದಲ್ಲಿ ಮುಂದಾಳನ್ನು ಮತದಾರ ಆರಿಸಿ ಅವನು ಮಾಡುವುದರ ಫಲಕ್ಕೆ ತಾನು ಭಾಜನನಾಗುತ್ತಾನೆ. ಮತ ವಿಚಾರಗಳಲ್ಲಿ, ವ್ಯಕ್ತಿ ಮುಂದಾಳಾದವರನ್ನು ಆರಿಸದೆಯೆ ಒಪ್ಪುತ್ತಾನೆ.

### ಸಾಂಪ್ರದಾಯಿಕರು

ಎಲ್ಲೆಲ್ಲಿ ಸಾಂಪ್ರದಾಯಿಕ ಮತ, ಧರ್ಮಗಳು ರೂಢವಾಗಿವೆಯೋ ಅಲ್ಲೆಲ್ಲ ಹೀಗೇನೆ ಜನತೆ—ತಾವು ಬದುಕಿ, ತಮ್ಮ ಬದುಕಿನ ಪ್ರಶ್ನೆಗಳನ್ನು ತೀರ್ಮಾನಿಸುವ ಬದಲು, ಯಾವತ್ತೋ, ಯಾರೋ, ಮಾಡಿಟ್ಟ ತೀರ್ಮಾನಗಳಿಗೆ ತಮ್ಮ ಒಪ್ಪುಗೆ ಸಲಿಸುತ್ತಾರೆ. ಅದು ಕ್ರಿಸ್ತ ಮತವಿರಲಿ, ಬೌದ್ಧ ಮತವಿರಲಿ, ಟೋಯಿಗಳ ಸಂಪ್ರದಾಯ ವಿರಲಿ, ದೈವ್ವವಾದಿತ್ವವಿರಲಿ—ಆಯಾಯ ಪಂಥದವರು ತಮ್ಮ ಪಂಥದಲ್ಲಿ ಹಿನ್ನೆಡೆದ ಗುರು, ಋಷಿ, ಜಾಣರು, ಬಾಳ್ವೆಯ ವಿಚಾರದಲ್ಲಿ ಏನೇನು ತೀರ್ಮಾನಗಳಿಗೆ ಬಂದರೋ—ಅವುಗಳಿಗೆ ತಮ್ಮ ಸಹಿ ಇಕ್ಕುತ್ತ ಬಂದಿದ್ದಾರೆ.

### ವಿವಿಧತೆ

ಹೀಗೆ 'ಹಿರಿಯರ ಮತವೇ ತಮ್ಮ ಮತ' ಎನ್ನುವ ಜೀವಗಳ ಪಾಲಿಗೆ ತರ್ಕದ ಋಣ ಜಂಜಾಟವಿಲ್ಲ; ಕೆಲಸ ಸುಲಭ; ಮಿದುಳಿಗೆ ವಿಶ್ರಾಂತಿ ದೊರೆಯಿತು. ಆದರೆ ಅವರ ಬದುಕು ಸಾರ್ಥಕವಾಯಿತೇ ಎಂಬ ಮಾತು ಬಗೆಹರಿಯಲಿಲ್ಲ. ಏಕೆಂದರೆ ಬದುಕು ಅಷ್ಟು ವಿವಿಧವಾಗಿದೆ. ಬದುಕುವ ಜೀವಿಗಳೂ ಅಷ್ಟು ವಿವಿಧ. ಅವುಗಳು ಇದಿರಿಸುವ ಸಮಸ್ಯೆಗಳೂ ಹಲವಾರು. ಇದರಿಂದ ಒಂದೊಂದು ಜೀವಿಯೇ ಇರಲಿ, ತಾನು ನಡೆಯಿಸುವ ಬದುಕು, ಮಾಡಬಹುದಾದ ಕೆಲಸ—ಇವೆಲ್ಲ ಇನ್ನೊಂದು ಜೀವಿಯ ಬದುಕು ಕೆಲಸಗಳ ಪಡಿಯಚ್ಚುಗಳಲ್ಲ. ಒಂದು ಗುಲಾಬಿ ಹೂವನ್ನು ನಾಲ್ವರು ನೋಡುತ್ತಾರೆಂದು ತಿಳಿಯುವ. ಆ ನಾಲ್ವರ ಮನಸ್ಸಿನ ಮೇಲೆ ಒಂದೇ ಬಗೆಯ ಪರಿಣಾಮವಾಗುವುದುಂಟೇ ? ಒಬ್ಬನು ಅದರ ಕೆಂಬಣ್ಣಕೆ ಮೋಹಗೊಳ್ಳಬಹುದು; ಇನ್ನೊಬ್ಬನಿಗೆ ಅದೇ ಕೆಂಬಣ್ಣ ತೀರ ಕ್ರೂರವಾಗಿ ಕಾಣಿಸಬಹುದು; ಮೂರನೆಯವನು

ಅದರ ವಾಸನೆಯನ್ನು ಮಾತ್ರ ಬಯಸಬಹುದು; ನಾಲ್ಕನೆಯವನಿಗೆ ಅದು ಯಾವ ರೀತಿಯಲ್ಲೂ ಹಿತವಾಗದಿರಬಹುದು. ಅಷ್ಟೇ ಸರಿಯೇ, ಒಂದೇ ವ್ಯಕ್ತಿಯ ಅನುಭವ ಮನಸ್ಸಿನ ಗತಿಗಳು, ನಾಲ್ಕು ಕಾಲಗಳಲ್ಲಿ ನಾಲ್ಕು ಬಗೆಯಾಗಿರುವುದುಂಟು. ಶಿಶುವಾಗಿ ರಲು ಕಂಡು ಮೆಚ್ಚಿದ ಸೊಬಗು, ಬಾಲ್ಯದಲ್ಲಿ ಬೇಡಾದೀತು; ಬಾಲ್ಯದ ಚೆಲುವು ಯೌವನದಲ್ಲಿ ನೀರಸವೆನಿಸಬಹುದು; ಯೌವನದಲ್ಲಿ ಮೋಹಗೊಂಡ ವಸ್ತುವೇ ಮುಪ್ಪಿನಲ್ಲಿ ಜಿಗುಪ್ಸೆಗೆ ಕಾರಣವಾಗಬಹುದು. ಅದರಂತೆ ದಿನದ ನೋಟವಿದೆ. ಮನಸ್ಸು ಪ್ರಸನ್ನವಾಗಿರುವಾಗ ಮನೆಯ ಮಗು ಕಿರುಚಿದರೂ ಉತ್ಸಾಹ ತಾಳುತ್ತೇವೆ. ಆದರೆ ಅದೆ ಮಗುವಿನ ನಗು, ನಮ್ಮ ನಿರುತ್ಸಾಹದ ಕಾಲದಲ್ಲಿ 'ಕರಕರೆ' ಎನಿಸಬಹುದು. ಬಾಳ್ವೆಯನ್ನು ಕುರಿತಾಗಿ ಮಾಡುವ ಮಾನವನ ಸಿದ್ಧಾಂತಗಳು, ಈ ಬಗೆಯ ಕಾಲದ, ವ್ಯಕ್ತಿಯ, ಅನುಭವಗಳ ಪರಿಮಿತಗಳ ಪ್ರಭಾವಕ್ಕೆ ಒಳಗಾದುವುಗಳು.

ಯಾವುದೋ ಕಾಲದಲ್ಲಿ, ಯಾವುದೋ ಸಂಸ್ಕೃತಿಯಲ್ಲಿ ಬೆಳೆದ ಯಾವುವೋ ವ್ಯಕ್ತಿಗಳು—ತಮ್ಮ ಅನುಭವ, ತಿಳಿವು, ಕಾಲಮಾನಗಳ ದೃಷ್ಟಿಯಿಂದ ಮಾಡಿದ ತೀರ್ಮಾನಗಳು–ಯಾವ ಕಾಲದ ಜನರಿಗೂ, ಯಾವ ಬಗೆಯ ಜನರಿಗೂ ಒಪ್ಪಿತ ವಾದಾವೆ? ನಾವು ಅಂಧಾನುಕರಣೆಯಿಂದ ಒಪ್ಪಿಬಂದರೂ ಆ ಒಪ್ಪಿಗೆಯಿಂದ ನಮ್ಮ ಅನುಭವ ಹಿಗ್ಗೀತೆ! ಒಂದು ಕಾಲ, ಒಂದು ಮನೋವೃತ್ತಿ, ಒಂದು ಅನುಭವ—ಇವುಗಳಿಂದ ಒಬ್ಬ ವ್ಯಕ್ತಿಗೆ 'ಮಾಯೆ'ಯೆನಿಸಿರಬಹುದು. ಆ ಶೋಧನೆ ಯಿಂದ ಅವನ ನಡೆವಳಿಕೆ ಅರಳಿರಬಹುದು. ಆದರೆ ಅದೇ ತೀರ್ಮಾನವು ಎಲ್ಲ ರಿಗೂ, ಎಲ್ಲ ಕಾಲಕ್ಕೂ, ಹಿತಕರವಾದೀತೆ? ಅದೇ ಆದರ್ಶವೆನಿಸೀತೆ?

**ವ್ಯಕ್ತಿ ತೀರ್ಮಾನ**

ಅಲ್ಲದೆ ಯಾವೊಬ್ಬನ ಜೀವನದ ತೀರ್ಮಾನವೂ ಇನ್ನೊಬ್ಬನ ಬದುಕಿನ ತೀರ್ಮಾನವಾಗಲಾರದು. ಬದುಕಿನ ಅನುಭವಗಳಿಗೆ ಗುರಿಯಾಗುತ್ತಿರುವ ಮನುಷ್ಯನ ಗುಣಸ್ವಭಾವಗಳು ಬೇರೆಯಾಗಿರುವಷ್ಟು ದಿನ, ಅವನವನು ಹೊಂದಬೇಕಾದ ವಿಕಾಸದ ಗತಿ, ರೀತಿಗಳು ಬೇರೆಯಾದಾವು. ಎಲ್ಲ ಬಗೆಯ ಜನಗಳಿಗೂ ಬಾಳ್ವೆಗಳಿಗೂ ಒಂದೇ ಉತ್ತರ ನ್ಯಾಯವಾಗಲಾರದು. ನಾವು ರೂಢವಾಗಿ ಬಂದಿರುವ ಮತಸಂಪ್ರದಾಯ ಗಳನ್ನು ಪರಿಶೀಲಿಸಿದರೆ, ಅವು ಜೀವಸಂಕುಲಕ್ಕೇನೆ ಏಕ ಉದ್ದೇಶವನ್ನು ಹೇಳುವಂತೆ ಕಾಣುತ್ತದೆ. ಎಲ್ಲ ಜೀವಿಗಳೂ ಕಟ್ಟಕಡೆಗೆ ಸೇರುವ ತಾವು ಒಂದೇ—ಎಂದು ಅವುಗಳ ತೀರ್ಮಾನವಿದ್ದಂತೆ ಕಾಣುತ್ತದೆ. ಈ ತೀರ್ಮಾನದ ಆವಶ್ಯಕತೆಯಾಗಲಿ, ಅದಕ್ಕೆ ಕಾರಣ ವಾದ ಅನುಮಾನಗಳಾಗಲಿ, ನನಗೆ ಸೂಚಿಸಲೊಲ್ಲವು. ಇಷ್ಟೊಂದು ವೈವಿಧ್ಯವಿರು ವುದೂ, ಜೀವಿಗಳ ಅನುಭವಗಳಲ್ಲಿ ಭಿನ್ನತೆ ಇರುವುದೂ, ಅವುಗಳ ಸ್ವಭಾವ ಲಕ್ಷಣಗಳು ಬೇರೆಯಾಗಿರುವುದೂ—ಅವು ಅವುಗಳು ಬೇರೆ ಬೇರೆಯಾಗಿ ಸಾಧಿಸಬೇಕಾದ ಕೆಲಸವಿದೆ ಯೆಂಬುದಕ್ಕೆ ಏಕೆ ಸಾಕ್ಷಿಯಿಲ್ಲ? ಪ್ರತಿಯೊಂದೂ ತಾನು ತಾನು ಮಾಡುವ ಕೆಲಸ ಬೇರೆ ಯಾಗಿದ್ದು, ಅವೆಲ್ಲವುಗಳ ಒಟ್ಟುಮೊತ್ತವು ಯಾವುದೋ ಒಂದು ದೊಡ್ಡ ಉದ್ದೇಶಕ್ಕೆ

ಕಾರಣವಾಗಿರಬಹುದೋ ಏನೋ. ಬದಲು—ಎಲ್ಲರ ಗುರಿ, ಕೆಲಸಗಳು ಒಂದೇಯಾಗಿರುವಲ್ಲಿ, ಈ ತೆರನ ವೈವಿಧ್ಯ ಬೇಕೇ ಇರಲಿಲ್ಲ. ಇದ್ದಲ್ಲಿ ಇವೆಲ್ಲ ಜೀವಶಕ್ತಿಯ ದುರ್ವ್ಯಯವೆಂದರೂ ಚಿಂತೆಯಿಲ್ಲ.

**ನಮ್ಮದು ನಮಗೆ ನೆರವು**

ಬಾಳ್ವೆಯ ಪ್ರಶ್ನೆಯು—ಒಬ್ಬರು ಬಾಳಿ, ಇನ್ನೊಬ್ಬರು ಉತ್ತರಿಸಿ, ಮೂರನೆಯವರು ಒಪ್ಪಿ ಸಾಗುವ ಪ್ರಶ್ನೆ ಎಂದೂ ಆಗಿರಲಾರದು. ಅನಿವಾರ್ಯವಾಗಿರುವ ಬಾಳಿನ ರೀತಿಯನ್ನು ಕಂಡರೆ, ಅದು ಬೆಳೆ, ಬದುಕಿ, ಅನುಭವಿಸಿ, ಹೋರಾಡಿ, ಪರಿಸ್ಥಿತಿಗಳಿಗೆ ಸಮನಾಗಿ ಹೊಂದಿಕೊಂಡು, ಪರಿಣಾಮಗೊಳ್ಳಬೇಕಾದ ಸಮಸ್ಯೆಯೆಂದು ನಮಗೆ ಅನಿಸುತ್ತದೆ. ಅವನವನ ಜೀವನಕ್ಕೆ ಅವನವನೇ ದುಡಿದು ಉತ್ತರಗಳಿಸಬೇಕು. ಅದರಿಂದ ಮಾತ್ರ ಜೀವನ ಸಾರ್ಥಕ. ಹೀಗಾಗಲು 'ಬಾಳ್ವೆ'ಯನ್ನು ನಾವು ನಿರಾಕರಿಸದೆ ಮೊದಲಿಗೆ 'ಒಪ್ಪ'ಬೇಕು. ತಮ್ಮ ಜೀವನದಿಂದಲೇ, ಜೀವನ ಏನು ?—ಎಂದು ತಿಳಿಯಲೆತ್ನಿಸಬೇಕು. ಅರಿವುಳ್ಳ ಬದುಕು, ಸಹಾನುಭೂತಿಯುಳ್ಳ ನಡತೆ, ಇವುಗಳಿಂದ ನಮ್ಮ ಬದುಕು ಅರಳಬೇಕು. ಬದಲು ಯಾವದೋ ದಿನ, ಯಾವದೋ ಜೀವ, ತನಗೆ ಹಿತವೆಂದು ನಿರ್ಣಯಿಸಿದ ತೀರ್ಮಾನವನ್ನು ನಾವು ಒಪ್ಪಿದುದರಿಂದ, ನಮ್ಮ ಬದುಕು ವಿಸ್ತರಿಸೀತು—ಎಂಬುದು ಅನುಮಾನಾಸ್ಪದ ಸಂಗತಿಯೇ ಸರಿ. ಇದರಿಂದ ಪರರ ಅನುಭವಗಳ ಪಾಠ ನಮಗೆ ಬೇಡವೆಂದು ತೀರ್ಮಾನವಲ್ಲ. ವಿಚಾರ ಸಾಮ್ಯತೆ, ಅನುಭವ ಸಾಮ್ಯತೆ, ಪರಿಸ್ಥಿತಿ ಸಾಮ್ಯತೆ—ಇವುಗಳಿಂದಲ್ಲದೆ ಪರರ ಅನುಭವಗಳು ನಮ್ಮ ಜೀವನಕ್ಕೆ ನೆರವಾಗವು. ನಮ್ಮಲ್ಲಿ ಅರಗದ ಅವು ನಮಗೆ ಹಿತಮಾಡಲಾರವು. ತಂತಮ್ಮ ಬದುಕಿನಲ್ಲಿ ಕಾಣದ ಸತ್ಯ, ಬೆಳಕುಗಳು ಪರರ ಬಾಳ್ವೆಯಿಂದ ಬಂದು ನಮಗೆ ನೆರವಾಗುವುದೆಂತು ?

**ಅರಿವಿನಿಂದ**

ಬದುಕಿನ ಉಪಯೋಗ ನಮಗೆ ದೊರೆಯಲು, ಅದರಿಂದ ಬೆಳಕು, ಸುಖಗಳು ಸಿಗಲು, ಮೊದಲು ಅರಿವಿನಿಂದ ನಾವು ಬದುಕುವುದನ್ನು ಕಲಿಯಬೇಕು. ಸಂಪ್ರದಾಯ ಶರಣತ್ವ ಈ ಮಾರ್ಗಕ್ಕೆ ತೀರ ಹೊರತಾದುದು. ಯಾವದೇ ನಡವಳಿಕೆ–ಚಟವೋ, ಚಾಳಿಯೋ ಆದರೆ, ಹೇಗೆ ನಮ್ಮ ಪರಿಶೀಲನೆಯ ಚಟುವಟಿಕೆ ನಮ್ಮಿಂದ ನಷ್ಟವಾಗುವುದೋ, ಹಾಗೇನೆ ಜೀವನ ನಡೆಯಿಸುವ ವಿಷಯದಲ್ಲಿ, ಸಂಪ್ರದಾಯಿಕವಾದ ನಡವಳಿಕೆಗಳು, ನಮ್ಮ ಶಕ್ತಿಯನ್ನು ಜಡಗೊಳಿಸುವುವು. ಎಷ್ಟೋ ಸೂಕ್ಷ್ಮಪರಿಶೀಲನೆಗಳ ಪಾಲಿಗೆ ನಾವು ಜಡರಾಗುವೆವು. ಅರಿವುಳ್ಳ ಬದುಕಿನ ಸರಣಿಯಿಂದ ಅಧಿಕ ಸಂಖ್ಯೆಯಿಂದ ನಮಗೆ ಅನುಭವಗಳ ಪರಿಚಯ ದೊರೆಯುತ್ತದೆ. ಈ ಸೂಕ್ಷ್ಮತೆ ಹೆಚ್ಚಿದಂತೆ—ಮನಸ್ಸಿಗೆ ಅನುಮಾನ, ಸಂಶಯಗಳೂ ಹೆಚ್ಚಬಹುದು. ಆದರೆ ವಿಸ್ತೃತ, ಸೂಕ್ಷ್ಮ ಬಾಳ್ವೆಗೆ ಅವುಬೇಕೇ ಬೇಕು.

ಅರಿವಿಲ್ಲದೆ ಸಾಗುವ ಜೀವಗಳು ಅನುಭವಗಳನ್ನು ನಿರಾಕರಿಸುವ ಜೀವಗಳು

ಅನುಭವಗಳು ಬಂದರೂ, ಅವುಗಳಿಂದ ಆ ಜೀವಿಗೆ ಜೆಂಬಲವಿಲ್ಲ. ದುಃಖ ಅನುಭವಿಸಲು ಮನುಷ್ಯನು ಜಡನಾಗುವುದು ಹಿತವೆಂದು ಕಂಡರೂ, ಆಗ ಸುಖದ ಅನುಭವಕ್ಕೂ ಅವನು ಜಡನಾಗುತ್ತಾನೆ.

ಅರಿವುಳ್ಳ ಜೀವನದ ವಿಚಾರವಾಗಿ ಒಂದೆರಡು ಮಾತು. ಇಲ್ಲಿ ಆ ಮಾತನ್ನು ತೀರ ಸಾಮಾನ್ಯ ಅರ್ಥದಲ್ಲೇ ತಿಳಿಯೋಣ. ನಾವು ಅನೇಕ ಬಾರಿ, ಒಂದು ಹಾದಿಯಲ್ಲಿ ಅಲೆದಾಡಿರಬಹುದು. ಬಹುವಾಗಿ ಅಚೀಚೆ ನೋಡುತ್ತ ಸರಿದರೂ—ಸುತ್ತಲಿನ ಗಿಡ ಮರಗಳು, ಏರುತಗ್ಗುಗಳು, ನಮ್ಮ ಗಮನಕ್ಕೆ ಬಂದಿರುವುದಿಲ್ಲ. ತೀರ ಒರಟಾದ ದಾರಿ, ದಾರಿಗೆ ಇದಿರಾಗಿ ತಗ್ಗುತೆವರು. ಇವೆಲ್ಲ ಬಂದು ನಮ್ಮ ಶರೀರವನ್ನು ಕುಲುಕಿಸಿದರೆ, ಆಗ ದಾರಿಯ ವಿಷಯದಲ್ಲಿ ಎಚ್ಚರಗೊಳ್ಳುತ್ತೇವೆ. ಸಾಮಾನ್ಯ ದಾರಿಯಾದರೂ ನಮ್ಮಲ್ಲಿ ಅರಿವು ತುಂಬಾ ಇದ್ದರೆ—ದಾರಿಯು ನೂರಾರು ನೋಟಗಳು ನಮಗೆ ಹೆಚ್ಚಿನ ಅನುಭವಗಳನ್ನು ಕೊಟ್ಟಾವು. ಎಷ್ಟೋ ಬಾರಿ–ದಾರಿಯು ಒಂದೇ ಗಿಡ, ಒಂದೇ ನದಿಯನ್ನು ಕಂಡು, ಅರಿವುಳ್ಳ ಮನಸ್ಸು ಕಾಲಕ್ಕೆ ಸಮನಾಗಿ ಭಿನ್ನ ಭಿನ್ನ ಪ್ರೇರಣೆಗಳನ್ನು ಹೊಂದಲು ಶಕ್ಯವಿದೆ. ಆದರೆ ಕಣ್ಣಿನ ಚುರುಕುತನ ಇಲ್ಲದವನಿಗೆ–ಅದು ಬರಿಯೊಂದು ದಾರಿ, ಇಂತಿಷ್ಟು ದೂರದ ದಾರಿ—ಎಂದಿಷ್ಟೇ ಹೊಳೆದೀತು. ಅವನ ನಿತ್ಯದ ನಡಿಗೆಗಳು ಅವನ ಪಾಲಿಗೆ ವ್ಯರ್ಥವೇ ಸರಿ. ಇದರಂತೆ ನೂರಾರು ಅನುಭವ ಗಳು ನಮ್ಮ ಎಟುಕಿಗೆ ಸಿಗುವುದು ಅರಿವಿನಿಂದ. ನೋಡುವ ಕಣ್ಣು, ಕೇಳುವ ಕಿವಿ, ಮೂಸುವ ಮೂಗು, ರಸನೆ, ತ್ವಚೆ—ಇವೆಲ್ಲವುಗಳ ಹಿಂದಿರುವ ಮನಸ್ಸು ಎಷ್ಟು ಹರಿತ ವಾಗಿ, ಹಚ್ಚಗಾಗಿ ಇರುತ್ತವೆಯೋ ಅಷ್ಟು ಹೆಚ್ಚಿನ ಅನುಭವ ಲಾಭ, ಜೀವನಕ್ಕಿದೆ.

ನಿರುಪಯೋಗಿ, ಅರ್ಥವಿಲ್ಲದ್ದು—ಎಂದು ಕಾಣುವ ಸಾವಿರಾರು ಅನುಭವಗಳು ಒಟ್ಟಿನಿಂದ, ಪರಸ್ಪರ ಸಂಬಂಧದಿಂದ ಎಷ್ಟೋ ಹಿರಿಯ ಸತ್ಯಗಳನ್ನು ನಮ್ಮ ಜೀವನಕ್ಕೆ ಸಾರಬಹುದು. ಅರಿವುಳ್ಳವನ ಮನಸ್ಸು, ಇಂದ್ರಿಯಗಳು ಪ್ರತಿಯೊಂದನ್ನೂ "ಏನು ?" "ಏಕೆ ?" "ಹೇಗೆ "?—ಎಂದು ಕೇಳಿ—ತಿಳಿಯುತ್ತದೆ. ತಿಳಿದು ಬದುಕನ್ನು ಸರಿಪಡಿಸಿ ಕೊಳ್ಳುತ್ತದೆ. ಸಂಪ್ರದಾಯ, ಅಂಧಾನುಕರಣೆ, ಮತಶ್ರದ್ಧೆ—ಈ ಎಚ್ಚರದ ಬಗೆಗೆ ತೀರಾ ವಿರುದ್ಧವಾದುವು. ಅವಕ್ಕೆ ಹೊಸ ಅನುಭವಗಳೇ ಬೇಕಿಲ್ಲ. ಹಿಂದೆ ಕಂಡುದೇ ಕಂಡುದು ; ಇನ್ನು ಕಾಣುವುದೂ ಮುಂದೆ ಕಾಣುವುದೂ ಏನಿಲ್ಲ.

**ಮೂಕವಾಗಿ**

ಆದರೆ ಎಲ್ಲ ಜೀವಿಗಳೂ ಹೇಗೆ ಸಾಗುತ್ತವೆ ? ಮನುಷ್ಯ ಕುಟುಂಬಗಳು ಹೇಗೆ ಮುಂದುವರಿಯುತ್ತವೆ—ಎಂದರೆ ಬಹುಮಟ್ಟಿಗೆ 'ಮೂಕ'ವಾಗಿಯೇ ಎನ್ನಬಹುದು. ಕಾಲದ ವಿಶಾಲಗತಿಯಲ್ಲಿ ಈ ಮೂಕ ನಡೆಗೂ ಉದ್ದೇಶವಿರಬಹುದು. ಆದರೆ, ಎಲ್ಲಿ ವ್ಯಕ್ತಿಯು ಚೇತನನಾಗಿ ಇರಬಲ್ಲನೋ, ಇರಲು ಸಾಧ್ಯವೋ, ಆಗ ಇರಬೇಡವೇ? ಇರುವುದರಿಂದ ಅವನಿಗೂ ತುಂಬ ಹಿತವಿದೆ. ಅವನು ಅಂಶವಾಗಿರುವ ಒಟ್ಟು ಬದುಕಿಗೂ ಒಂದು ಸೊಗಸಿದೆ–ಎಂಬುದನ್ನು ಮನುಷ್ಯನ ನಾಗರಿಕತೆ ಸಾರುತ್ತಿದೆ. ಆದುದರಿಂದಲೇ,

ಬಾಳ್ವೆಯನ್ನು ಆಗಿನಿಂದ ಇದಿರಿಸುವ, ಎಂಬ ಬಯಕೆ ಉಂಟಾಗುತ್ತಿರುವುದು. ಬಹು ಜನ,–ಒಟ್ಟು ಜೀವನ ಪ್ರವಾಹದಲ್ಲಿ ಸಿಲುಕಿಕೊಂಡು ಬಳಿಯುತ್ತಿರುವ ಮರದ ಕೊರಡು ಗಳಂತೆ, ಅದರಲ್ಲಿ ತೇಲಿಬಿಡುತ್ತಾರೆ. 'ಬಾಳು ಬಂದಿದೆ, ಬದುಕುವ ; ಸೂತಕ ಬಂದಿದೆ, ಅನುಭವಿಸುವ ; ಸಾವು ಬಂದಿದೆ, ಸಹಿಸುವ ;' ಹೀಗೆಂದು ಜೀವನವನ್ನು ಕಾಣುವವ ರಿದ್ದಾರೆ. ಇದು ಸಹ ಬದುಕಿನ ಒಂದು ಬಗೆಯೇ. ಇದರಿಂದ ಬದುಕು ಹಾಗೂ ಹೀಗೂ ಸಾಗುತ್ತದೆ. ಬದುಕಿನ ಸಮಸ್ಯೆ ಇದಿರಿಸಲ್ಪಡಲಿ, ಬಿಡಲಿ ; ಮೈಯು ಜರ್ಜರ ಮರಗಟ್ಟಿ, ಸಂಸಾರದಲ್ಲಿ ಸಿಗುವ ಹೂವು, ಮುಳ್ಳುಗಳೆರಡಕ್ಕೂ ಜಡವಾಗಿ ಬಿಡುತ್ತದೆ. ಈ ಮನೋ ವೃತ್ತಿಯು ಜನತೆಗೆ ಪರಂಪರೆಯ ನಂಬಿಕೆಯ ವಿಚಾರಸರಣಿಯು ತಮ್ಮದಾಗುತ್ತದೆ. ಅವನ ಸ್ವಂತ ಅನುಭವಗಳಾಗಲಿ, ಬದಲಿಸಿದ ಪರಿಸ್ಥಿತಿಗಳಾಗಲಿ, ತಮ್ಮ ಬಾಳ್ವೆಗೆ ಪುಟ ಕೊಡುವಂತಿಲ್ಲ. ಇದರಿಂದ ಒಟ್ಟು ಜೀವನದ ಮೇಲ್ಮೆಗೆ ಅವನು ಸಲ್ಲಿಸುವ ಯಾವ ಕಾಣಿಕೆಯೂ ಇಲ್ಲ. ಅವರು ಹಳೆಯದನ್ನು ಇರಗೊಡಿಸುವವರಿಷ್ಟೆ.

**ಜನಜೀವನದ ಪೂರ್ವಾಪರ**

ಪರಿಶೀಲಿಸಿದಲ್ಲಿ—ಜನಜೀವನವೆಲ್ಲ ಹೀಗೇನೇ ಬಾಳಿ, ಬದುಕಿ, ಮಾಯವಾಗಿ ಹೋಗಿದೆ. ಇಂದು ಹಿಂದಿನ ಬದುಕಿನ ಸೆರಗಿನ ಮೇಲೆ, ನಂಬಿಕೆಯ ಮೇಲೆ, ನಾವು ಬದುಕುತ್ತಿದ್ದೇವೆ. ನಾಳೆ ದಿನ ನಮ್ಮ ಬದುಕು ಮುಗಿದು, ಇನ್ನೊಂದು ಜನರ ಬಗೆ ಉದಯಿಸುತ್ತದೆ ; ಅನಂತರ ಮತ್ತಾವುವೋ ಜೀವಗಳ ನಲಿದಾಟವಾದೀತು. ಜೀವ ಜಗತ್ತು ಈ ತೆರನಾಗಿ ಅವಿರತವಾಗಿ ಹರಿಯುತ್ತಿರುವುದರಿಂದಲೇ ನಮ್ಮ ಕುತೂಹಲ, ವಿಚಾರಶಕ್ತಿಗಳು ಕೆರಳಬೇಕು. ಹೀಗೆ ಕೆರಳಿದುದರಿಂದಾಗಿ ವ್ಯಕ್ತಿ ತನ್ನನ್ನೆ ಹಲವು ವಿಧ ವಾಗಿ ಕೇಳಿಕೊಳ್ಳುತ್ತಾನೆ–ಇದೇನು ? ಇದೇಕೆ ? ನಾನಾರು ? ಎಂಬೆಲ್ಲ ಪ್ರಶ್ನೆಗಳು ಹಾಗೆ ಹೊರಟವು. ಆದರೆ ಅವೆಲ್ಲ ಪ್ರಶ್ನೆಗಳೂ ಜೀವನವೇನು—ಎಂಬುದನ್ನು ವಿಮರ್ಶಿ ಸುವ ಪ್ರಶ್ನೆಗಳಾಗಬೇಕೆಂದಿಲ್ಲ. ಬಾಳ್ವೆಗೆ ಬೆಳಕನ್ನು ತೋರಿಸಲೇಬೇಕಾದ ಪ್ರಶ್ನೆಗಳಾಗ ಬೇಕಿಲ್ಲ. ಕಾರಣ–ಮನುಷ್ಯ ಈ ತನಕ ಮಾಡುತ್ತ ಬಂದಿರುವ ಹಲವು ಪ್ರಶ್ನೆಗಳು ಎಂಥವು ? ಅವು ತನ್ನನ್ನೂ ಕುರಿತಾದುವೋ, ಜಗತ್ತನ್ನು ಬೇರೆಯಾಗಿ ತಿಳಿದುದರಿಂದ ಉಂಟಾದುವೋ, ಬಾಳ್ವೆಯ ಒಟ್ಟು ನೋಟದಿಂದ ಕೆರಳಿದುವೋ ; ಕೇವಲ ಸಿಡಿಲು, ಮಿಂಚಿನಂಥ ಒಂದು ವಿಸ್ಮಯಕಾರಕ ಘಟನೆಯಿಂದ ಹೊರಟುವೋ—ಇಲ್ಲವೆ ತನಗೆ ಇದಿರಾದ ವಿಪತ್ತಿನ ದೆಸೆಯಿಂದ ಹೊರಟುವೊ–ಇವುಗಳಲ್ಲಿ ಯಾವುವೂ ಇರಬಹುದು. ಯಾವುದರವೇಳವೂ ಇರಬಹುದು. ಅಂಥ ಪ್ರಶ್ನೆಗಳಿಗೆ ದೊರಕಿದ ಉತ್ತರಗಳ ಹಿತಾಹಿತಗಳು, ಅವನ ಪ್ರಶ್ನೆಯ ಮಿತಿಯನ್ನು ಅವಲಂಬಿಸಿ, ಅವನಿಗೆ ದೊರಕುವುವು.

**ಆಘಾತಗಳಿಂದ ತೆರೆದ ಕಣ್ಣು**

ಮನುಷ್ಯನ ಇತಿಹಾಸವನ್ನು ಪರಿಶೀಲಿಸುತ್ತ ಬಂದೆವೆಂದರೆ—ಅವನಲ್ಲಿ ಜೀವನ ವನ್ನು ಕುರಿತಾಗಿ ಒಡಮೂಡಿದ ಪ್ರಶ್ನೆಗಳೆಂಬುವು, ಬದುಕು ಕೆರಳಿದುದರಿಂದ ಹೊರಟುವು ಎಂಬುವುದಕ್ಕಿಂತ ಮಿಗಿಲಾಗಿ, ಬದುಕಿಗೆ ಬಡಿಯುವ ಆಘಾತಗಳಿಂದ

ಹುಟ್ಟಿದುವು ಎನ್ನಬಹುದು. ನಮಗೆ ಬರುವ ಹಾನಿ, ಬೇನೆ, ಸಾವು, ನೋವು—ಇವು ಗಳಿಗೆ ಅಂಜಿ ನಮ್ಮ ಜೀವನ ವಿಚಾರಕ್ಕೆ ಗುರಿಯಾಗಬಹುದು. ಅವುಗಳಿಂದ ತೀರ ತಳ ಮಳಗೊಳ್ಳಬಹುದು. ಬಡತನವೇ ಎಲ್ಲೆಲ್ಲೂ ಹಾಸಿದ್ದು, ಸಾಮಾನ್ಯ ಮನುಷ್ಯಜೀವಿಯ ಪಾಲಿಗೆ ಬದುಕಬೇಕೇಕೆ—ಎಂಬ ಸೊಲ್ಲೇ ಬಲವಾಗಿ ಹೊರಡಬಹುದು. ಹಾಗೆ ಹೊರಡುತ್ತಲೂ ಇದೆ. ಬಡತನದ ಭೂತಕ್ಕೆ ಇದಿರಾಗದ ಜೀವಿಗೆ, ಜೀವನದಲ್ಲಿ ಬದುಕು ಇಷ್ಟು ಕಷ್ಟವಾಗಿ ಕಾಣಿಸಬೇಕಿಲ್ಲ. ಬದುಕಬೇಕೇಕೆ! ಎಷ್ಟು ದಿನ ಬದುಕ ಬೇಕು ? ಮುಂದೇನು ಗತಿ—ಎಂಬವು 'ಇಂದ'ನ್ನು ಸಣ್ಣದಾಗಿಸಿಬಿಟ್ಟರೆ—ಬದುಕು ಏನು, ಹೇಗೆ ಚೆನ್ನಾಗಿ ಬದುಕುವುದು—ಎಂಬ ವಿಚಾರವೇ ಸಣ್ಣದಾಗಿ, ಬುದುಕಿಂದ ಪಾರಾಗುವ ಯೋಚನೆಯೇ ಮಹತ್ತರವಾಗುವುದು.

**ಬದುಕಿಗೆ ಪ್ರಾಮುಖ್ಯತೆಯಿಲ್ಲ**

ನಮ್ಮ ಪಾಲಿಗೆ 'ಧರ್ಮ'ವಾಗಿ ಬಂದಿರುವ ಮತ, ತತ್ವಜ್ಞಾನಗಳು ಬಹುವಾಗಿ ಈ ತೆರನಾಗಿ ಉಂಟಾದುವೆಂಬುದಕ್ಕೆ, ಅವುಗಳ ತೀರ್ಮಾನಗಳೇ ಸಾಕ್ಷಿಯಾಗಿವೆ. ಅವುಗ ಳಲ್ಲಿ ಬದುಕು ಮುಖ್ಯವಾಗಿ ಕಾಣಿಸುವ ಬದಲು, 'ಸಾವು' ಆಳತೆವಿಾರಿ ನಿಂತಿದೆ. ಬಾಳು ವುದು ಧರ್ಮವೆನಿಸುವ ಬದಲು, ಹಿಗ್ಗಿಸಿದ ಸಾವಿನಿಂದ ಉದಯಿಸಿದ "ಪರವೇ" 'ಇಹ'ಸವಿಯಿಲ್ಲದ್ದೂ, ಬಂಧನವೂ ಎನಿಸಿಬಿಟ್ಟಿದೆ. ಕಂಡ ಸ್ವಲ್ಪ ಬಾಳ್ವೆ ನೀರಸವೂ, ಅಲ್ಪವೂ ಆಗಿ, ಕಾಣದ್ದು ಸರಸವೂ ಹಿರಿದೂ ಅನಿಸಿದೆ.

**ತಿಳಿದುದಕ್ಕಿಂತ ತಿಳಿಯದ್ದು ಮೇಲಲ್ಲ**

ಬಾಳ್ವೆಯ ಪ್ರಶ್ನೆಯನ್ನು ಬಗೆಹರಿಸಲು ಹೋದ ಹಲವಾರು ಮತಧರ್ಮಗಳು, ಕೆಲಸದ ಮೊದಲಿಗೇನೆ ಮೇಲೆ ಹೇಳಿದ ರೀತಿಯಲ್ಲಿ ಎಡವಿಬಿದ್ದಂತೆ ಕಾಣುತ್ತದೆ. ಕಂಡು ತಿಳಿಯುವ ತಾವಿಗಿಂತ, ತುಳಿದು ಕಾಣಲಾರದ ತಾವಿಗೆ ಕಾಲಿಕ್ಕುವ ಓಟ ಭದ್ರ ವಾದುದೆನ್ನಲಾರೆ.

**ಬರಿಯ ಹುಟ್ಟೆಲ್ಲ, ಸಾವಲ್ಲ**

ಬದುಕನ್ನು ಎದುರಿಸುವ ವ್ಯಕ್ತಿಯು ಮೊದಲಿಗೆ ತಿಳಿಯಬೇಕಾದ ಒಂದು ಮುಖ್ಯ ಸಂಗತಿಯಿದೆ. ಜೀವನ ಎಂಬುದು—ಬರಿಯ ಹುಟ್ಟೂ ಅಲ್ಲ, ಬರಿಯ—ಸಾವೂ ಅಲ್ಲ ವೆಂಬುದು. ಇವೆರಡರಿಂದ ಅದು ಕೂಡಿರುವುದರಿಂದಲೇ, ಅವೆರಡರ ನಡುವಿರುವ ವಿಶಾಲ ವಾದ ಬದುಕು ಕ್ಷುದ್ರವಾಗಬಾರದು. ಅವು ಅವುಗಳ ಆಕಡೆ ಅವು ಅವಕ್ಕೆ ಬೇಕು. ಹುಟ್ಟೇ ಆಗಲಿ, ಸಾವೇ ಆಗಲಿ—ಸ್ವತಂತ್ರವಾದ ಹಿರಿತನವೆಲ್ಲಿ? ಅವು ಬಾಳಿನ ಅಂಗವಾಗಿರು ವುದರಿಂದಲೇ ಪ್ರಾಮುಖ್ಯತೆ. ಅವಕ್ಕೆ ಬಾಳಿಗಿರುವುದಕ್ಕಿಂತ ಅಧಿಕ ಹಿರಿಮೆ ಸಲ್ಲು ವುದೂ ತಪ್ಪು. ಬದುಕಿನ ಗುಟ್ಟನ್ನು ತಿಳಿಯಲು ಬಯಸುವ ವ್ಯಕ್ತಿ, ಬರಿಯ ಜನನ– ಮರಣದ ಚಿಂತನೆಯಿಂದ, ರಹಸ್ಯ ಅರಿಯಬಲ್ಲನು—ಎನ್ನಲು ಬರುವಂತಿಲ್ಲ. ಹುಟ್ಟು, ಬಾಳ್ವೆ, ಸಾವು, ಇವನ್ನು ಸಮತೂಕವಾಗಿ ಹಿಡಿದು, ಒಂದರ ಯೋಗ್ಯತೆಯನ್ನು ಇನ್ನೊಂದರ ಮುಂದೆ ಹಿಗ್ಗಿಸದೆ, ಕುಗ್ಗಿಸದೆ, ವಿಚಾರಮಾಡಲು ಕಲಿಯಬೇಕು. ಆಗ

ಕ್ಷಣಿಕವಾದ ಹುಟ್ಟು, ಸಾವುಗಳ ಎಡೆಯಲ್ಲಿ ತೂಗುತ್ತಿರುವ ಬಾಳ್ವೆಯು ಕ್ಷಣಿಕವಾಗಿ ಕಾಣಿಸಲಾರದು. ಅದು ಅಷ್ಟು ಅಲ್ಪವೂ ಆಗಲಾರದು. ಅಮೂಲ್ಯವೂ ಸುಖಮಯವೂ ಆದ ವಸ್ತುವಾಗಿ ಕಂಡೀತು. ಜೀವನದಲ್ಲಿ ಎಷ್ಟೋ ಎಡರುಗಳಿದ್ದರೂ, ಈಗ ಮತಧರ್ಮಗಳು ಸಾರುವಂತೆ, ವ್ಯಕ್ತಿಯು ಕಳಚಿ ತಪ್ಪಿಸಿಕೊಳ್ಳಬೇಕಾದ ಬಂಧನವಾಗಿ ಅದು ಎಂದೂ ಕಾಣಿಸದು.

**ಬೆದರಿಕೆಯ ನಾಗಾಲೋಟ**

ಬಾಳ್ವೆಯೆಂದೊಡನೆ ಏಕೆ ನಾಗಾಲೋಟ? ಬಾಳ್ವೆಯಲ್ಲಿ ದುಃಖವಿದೆ, ನೋವಿದೆ—ಎಂಬುದರಿಂದಲೇನು? ಅದಕ್ಕೆ ಮಾರುತ್ತರವಿಷ್ಟೆ — ಸವಿಯಿಲ್ಲವೇ? ಸುಖವಿಲ್ಲವೇ? ಬಾಳ್ವೆ ಅದೂ ಅಲ್ಲ, ಬರಿಯ ಇದೂ ಅಲ್ಲ. ಬೇವಿನೊಡನೆ ಬೆರೆತ ಬೆಲ್ಲವಂತೆ ಅದು ಇನ್ನೂ ಹೆಚ್ಚಿನ ರಸಗಳ ಪಾಕ. ಒಂದೊಂದೂ ಬದುಕಿನಲ್ಲಿ ಸೇರಿಮಾಡುವ ಕೆಲಸಗಳಿವೆ. ಬಡತನ, ರೋಗರುಜೆ, ಕೀಳುತನ, ಕ್ರೌರ್ಯಗಳಿಂದ ಬಾಳು ತುಂಬಿದೆ. ಅಲ್ಲವೆನ್ನುವವರಾರು? ಅದರಂತೆ ಬಾಳು, ಅಕ್ಕರೆ, ಪ್ರಣಯ, ಪ್ರೀತಿ, ಅನುತಾಪ, ಚೆಲುನೋಟ, ರಮಣೀಯ ಅನುಭವಗಳಿಂದಲೂ ತುಂಬಿವೆ. ಎಂಥ ಬಾಳ್-ಮುರುಕನಲ್ಲಿಯೂ ಬದುಕುವ ಲಾಲಸೆ ಕಾಣುವಾಗ, ಯಾವುದೋ ಸಾವಿಗಾಗಿಯೇ ಬದುಕಿನ ಹವಣಿಕೆ ಉಳಿದಿದೆ—ಎಂದು ಕಾಣುವುದಿಲ್ಲವೆ! ಪ್ರತಿಯೊಂದು ಕೀಳು, ಮೇಲು ಜೀವಿಗಳಲ್ಲೂ ಈ ಹಂಬಲವಿದೆಯಲ್ಲವೇ? ಇದನ್ನು ಕಾಣುವಷ್ಟು ದಿನ, ಸಾವಿಗಿಂತ ಕಡಿಮೆಯಲ್ಲದ ವಸ್ತು—ಬಾಳ್ವೆ, ಗಮನಾರ್ಹವಾದ ವಿಷಯ,—ಎಂದು ನಾವು ತಿಳಿಯಬೇಡವೇ?

**ಅಚಿರವೆಂದೇ**

ಬಾಳ್ವೆಯಿಂದ ನಾವೇತಕ್ಕೆ ಕಾಲ್ತೆಗೆಯಬೇಕು? ಅದು 'ಚಿರವಲ್ಲ'ವೆಂದೇ? ಅದು ದರಿಂದಲೇ ಅದು ಹುಟ್ಟಿತು. ಚಿರವಲ್ಲದ ಯಾವುದೋ ಕೆಲಸ ಅದರಿಂದ ಆಗಬೇಕಿದ್ದೀತು. ಅದಕ್ಕಾಗಿಯೇ ಅಚಿರವಾದ ಬಾಳ್ವೆ ಇದೆ, ಬದುಕುವ. ಯಾವ 'ಚಿರ' ವಸ್ತುವನ್ನು ಕಂಡು ಪರಿಚಿತರಾದವರಂತೆ 'ಅಚಿರ' ವಸ್ತುವಿನ ಭೀತಿ ತೋರಬೇಕು?

ಸಾವಿಗಿಂತ, ಪಾರಾಗುವದಕ್ಕಿಂತ ದೊಡ್ಡ ಸಂಗತಿಯು 'ಬದುಕು'ವುದು ಎಂದು ಮಾನವಕೋಟಿ ವಿಚಾರಮಾಡತೊಡಗಿದಲ್ಲಿ, ನಮ್ಮ ಬದುಕು ಇನ್ನೂ ಸುಗಮವಾದೀತು: ಸಹನೀಯವಾದೀತು. ರಸವತ್ತಾದೀತು. ಬಾಳ್ವೆಗೆ ಅಂಟಿರುವ ಹುಟ್ಟು ಸಾವುಗಳು ಬಾಳಿನ ಹೆಚ್ಚಳಕ್ಕಾಗಿಯೇ ಇವೆಯೆಂದು ನಾವೇಕೆ ತಿಳಿಯಬಾರದು? ಹೀಗೆ ಬದುಕಿನ ವಿಚಾರವಾಗಿ ಹಿಡಿದಿಡಗುತ್ತಾ ಹೋದಲ್ಲಿ ನಮ್ಮ ಬದುಕಿಗೆ ಹೊಸ ಕಳೆಯು ಪ್ರಾಪ್ತಿಸಬಹುದು.

**ಹುಟ್ಟು, ಸಾವು**

ನಮ್ಮ ಜೀವನದ ವಿವಿಧ ಅವಸ್ಥೆಗಳಲ್ಲಿ ಹುಟ್ಟು ಸಾವಿನ ಪ್ರಶ್ನೆಗಳು ಒಂದೇ ಬಗೆಯ ಆಕರ್ಷಣೆಯುಳ್ಳವಾಗಿಲ್ಲ. ಅವು ಕೇವಲ ನೈಸರ್ಗಿಕ ಪ್ರಮಾಣದಿಂದ ನಮ್ಮ

ಮನಸ್ಸಿನಮೇಲೆ ಕುಣಿಯುತ್ತಲೂ ಇಲ್ಲ. ತೀರ ಸಣ್ಣವರಿಗೆ—ಹುಟ್ಟು ಸಾವುಗಳು ವಿಚಿತ್ರ ಸಂಗತಿಗಳಾಗಿವೆ; ಆಶ್ಚರ್ಯ ಹುಟ್ಟಿಸುತ್ತವೆ. ತಾಯಿಯ ಬಳಿಯಲ್ಲಿ ಒಂದು ದಿನ ಒಮ್ಮೆಗೇ ಮಲಗಿ ಕಾಣಿಸುವ ತಮ್ಮನನ್ನೊ, ತಂಗಿಯನ್ನೊ ಕಂಡು ಮಗು ವಿಸ್ಮಿತನಾಗುತ್ತಾನೆ. ಅದರಂತೆ ಮನೆಯಲ್ಲಿ ಯಾರಾದರೂ ತೀರಿಕೊಂಡಲ್ಲಿ, ಒಂದು ಹಸುವೋ ನಾಯಿಯೋ ತೀರಿಕೊಂಡಲ್ಲಿ—ಮರುದಿನ, 'ಅಮ್ಮ ಅವರೆಲ್ಲಿಗೆ ಹೋದರು ? ಅದು ಎಲ್ಲಿಗೆ ಹೋಯಿತು ? ಅವರನ್ನೇಕೆ ಸುಟ್ಟಿರಿ ? ಅದನ್ನೇಕೆ ಹೂತಿರಿ' ಎಂದು ನಾಲ್ಕು ದಿನ ಕೇಳುತ್ತದೆ. ಈ ಬಗೆಯಿಂದ ಮಕ್ಕಳ ಜೀವನವು ಹುಟ್ಟು ಸಾವುಗಳ ವಿಷಯದಲ್ಲಿ ಪರಿಚಯಗೊಳ್ಳುತ್ತದೆ. ಆದರೆ ಬೆಳೆದವರಲ್ಲಿ ಸಾವಿಗಾಗಿ ತುಂಬಿರುವ ಭೀತಿ, ಎಳೆಯರಲ್ಲಿ ಕಾಣಿಸುವುದಿಲ್ಲ. ಮಕ್ಕಳಿಗೆ ಮರವೆ ಹೆಚ್ಚೆಂಬುದರಿಂದ ಹೀಗಾಗುತ್ತಿರಬಹುದೇ ? ಹಾಗೂ ಇಲ್ಲ. ಹಾಗೊಮ್ಮೆ-ತಾಯಿ ತುಂಬ ಗದ್ದರಿಸಿಬಿಟ್ಟರೆ "ಅಮ್ಮ, ನೀನು ಗದರಿಸುತ್ತೀಯ. ನಾನು ಸತ್ತು ಹೋಗುತ್ತೇನೆ. ಆ ಮೇಲೆ ಏನು ಮಾಡುತ್ತೀ? ಯಾರನ್ನು ಗದರಿಸುತ್ತೀ"—ಎನ್ನುವ ಮಕ್ಕಳುಂಟು. ಹೊಡೆಯುವ ತಮ್ಮನನ್ನು ಕಂಡು "ನೀನು ಸಾಯಿ"ಎಂದು ಬಯ್ಯುವುದುಂಟು. ಆದುದರಿಂದ ಮಕ್ಕಳು ಸಾವನ್ನು ಮರೆಯುವುದಿಲ್ಲ. ಆದರೆ ಬದುಕಿಗಿಂತ ಘೋರವಾದ ರೂಪ, ಅವರಲ್ಲಿ ಸಾವನ್ನು ಕುರಿತಾಗಿ ಉಂಟಾಗುವುದಿಲ್ಲ.

ಪಶು ಪ್ರಾಣಿಗಳ ಜೀವನದಲ್ಲೂ ಸಾವು ಹುಟ್ಟುಗಳ ಲೀಲೆ, ಎಳೆಯರ ಲೀಲೆಯಂತೆಯೇ ಇರಬೇಕು. ಅದನ್ನು ಉದಹರಿಸುವ ಚಿಕ್ಕೊಂದು ಸಂಗತಿ ಹೇಳುತ್ತೇನೆ. ನನ್ನಲ್ಲಿ ಒಂದು ಜತೆ ನಾಯಿಗಳಿದ್ದವು. ಒಂದು ಗಂಡು, ಒಂದು ಹೆಣ್ಣು ; ಅವುಗಳಲ್ಲಿ ಅಷ್ಟು ಎರಕವಿತ್ತು. ಒಂದು ದಿನ ಎರಡು ನಾಯಿಗಳು ಹೊರಗಿನಿಂದ ಆಟವಾಡಿ ಒಳಕ್ಕೆ ಬಂದುವು. ಗಂಡು ನಾಯಿ ಒಮ್ಮಿಂದೊಮ್ಮೆಗೆ ಕೈಕಾಲು ಸೆಡಿದು ಮಲಗಿ ಬಿಟ್ಟಿತು. ಆಗಿನಿಂದ ಹೆಣ್ಣು ಆ ಗಂಡಿನ ಬಳಿ ಸೇರಲಿಲ್ಲ. ಗಂಡು ಸತ್ತಿದೆಯೆಂದು ತಿಳಿದರೂ ಬಾಷ್ಪ ಭ್ರಮೆಗೆ ಅವಕಾಶ ಕೊಡಲಿಲ್ಲ. ಇದರಿಂದ ಹೆಣ್ಣು ತನ್ನ ಇನಿಯನನ್ನು ಮರೆತಿತು—ಎಂದು ನಾವು ತಿಳಿದೆವು. ಆ ಗಂಡಿನ ಬದಲು ಬೇರೊಂದು ಗಂಡು ಮನೆಗೆ ಬಂದಿತು. ತಿರುಗಿ ಎರಡರಲ್ಲಿ ಅನ್ಯೋನ್ಯ ಜೀವನ ನಡೆಯಿತು. ಮೂರು ವರುಷಗಳ ಬಳಿಕ ಒಮ್ಮೆ ಪರೀಕ್ಷೆಗೆಂದು. ಹೆಣ್ಣು ನಾಯಿಯ ಕಿವಿಯಲ್ಲಿ, ಮಡಿದು ಹೋದ ಗಂಡಿನ ಹೆಸರನ್ನು ಕೂಗಿದೆವು. ಆಗ ಹೆಣ್ಣು ಒಮ್ಮೆಗೇ ವೇದನೆಯನ್ನು ತೋರ್ಪಡಿಸಿತು. ಸಾವಿನ ಗಳಿಗೆಯಲ್ಲಿ ತೋರದಿದ್ದ ಕೂಗಾಟವನ್ನು ಸಾವಿನ ನೆನಪಿಂದ, ಅಷ್ಟು ದೀರ್ಘ ಸಮಯದ ಬಳಿಕವೂ ಅದು ತೋರಿತು.

ಸಾವಿಗಿಂತ ಬಲವಾದ ವೇದನೆ, ಆ ನೆನಪನ್ನು ಅಡಿಗಡಿಗೆ ಕೆದರುವ ಭ್ರಮೆ ಎನ್ನಲೆ ? ಸಾವಿಗಿಂತ, ನಮಗೆ ಅದರಿಂದ ಆಗುವ ನಷ್ಟ ನೋವುಗಳೇ ಅದರ ಘೋರಾಕಾರಕ್ಕೆ ಕಾರಣವಾಗಿವೆ ಎನ್ನಲೇ ?

**ಸುಖಕ್ಕೆ**

ಜೀವನದಲ್ಲಿ, ನಮ್ಮ ತಿಳಿವನ್ನು ಮರೆಯಿಸಿ ಸರಿಯುವ ಗಳಿಗೆಗಳಿಗೂ ಕಡಮೆ ಯಿಲ್ಲ. ಪ್ರೀತಿ, ಆದರ, ವಿಲಾಸಗಳ ಹಲವು ಸುಖಕರವಾದ ಭಾವಗಳಿಗೆ ನಾವು ಗುರಿಯಾಗುತ್ತಿರುವಾಗ ಸಮಯ ಸರಿದುದೇ ನಮಗೆ ಕಾಣಿಸುವುದಿಲ್ಲ. ಅದು ಕಾಣಿಸು ವುದು, ಪ್ರತಿಯೊಂದು ಕ್ಷಣ ಸರಿಯುವುದರ ಬೋಧೆಯಾಗುವುದು, ಮನಸ್ಸು ಶರೀರ ಗಳು ಸಂಕಟಕ್ಕೆ ಗುರಿಯಾಗುವಾಗ. ಜೀವನ ಸುಖಮಯವಾಗಿ ತೇಲುವಾಗ ಸಮಯ ಸರಿಯುವುದೂ ಕಾಣಿಸದು. ಜೀವನ ಎಂಬುದೇನು? ಅದರ ಕೊನೆಯೆಲ್ಲಿಗೆ—ಎಂಬ ಪ್ರಶ್ನೆಗಳೂ ಮೂಡುವುದಿಲ್ಲ. ಬದಲು ಸಾವು, ನೋವುಗಳು ಇದಿರಾಗುವಾಗ, ಪ್ರತಿ ಕ್ಷಣದ ಅರಿವೂ ನಮಗೆ ಉಂಟಾಗುತ್ತದೆ. ಬದುಕಬೇಕೇಕೆ ಎಂಬ ಪ್ರಶ್ನೆ ಉದ್ಭವಿಸು ವುದು. ರಾತ್ರಿಯ ಸುಖನಿದ್ದೆಯಂತೆ, ಸುಖಜೀವನ ಕಳೆಯುವುದೇ ತಿಳಿಯುವುದಿಲ್ಲ. ಕಾಲವೇನೋ ಒಂದೇ ಪ್ರಮಾಣದಲ್ಲಿಯೇ ಹರಿಯುತ್ತದೆ. ಆದರೆ ಸುಖಿಯ ಅನುಭವ ದಲ್ಲಿ ಕಾಲ ತೇಲಿದುದರ ಗುರುತೇ ಕಾಣಿಸದು. ಬದಲು ಜನ ಸಾಮಾನ್ಯರ ಪಾಲಿನ ಜೀವನವು ಅನೇಕ ಪ್ರಶ್ನೆಗಳಿಂದ ದುರ್ಗಮವಾಗಿರುತ್ತದೆ. ಭೀಕರ ಸ್ವಪ್ನಗಳಿಂದ ಕೂಡಿದ ನಿದ್ದೆಯಂತೆ, ಅದು ಪ್ರತಿಕ್ಷಣವೂ ಸಿಡಿದು ಕಾಣುವುದು.

**ವಿಮರ್ಶೆಯ ಮಾನ**

ಆದರೆ ಬಡತನಕ್ಕೆ ಗುರಿಯಾಗದೆ, ವಾತ್ಸಲ್ಯ, ಪ್ರೀತಿಗಳಿಗೆ ಕೊರತೆಬಾರದೆ ಸರಿ ಯುವ ಜೀವಿಗಳೆಷ್ಟು ಮಂದಿ? ತೀರ ತೀರ ಸ್ವಲ್ಪ. ಅಂಥವರ ಜೀವನದಲ್ಲೊಮ್ಮೆ ಅನ್ಯರ ಸಾವೋ ನೋವೋ ಕಾಣಿಸಿದರೆ, ಆಗ ಅವರು ಸಹ 'ಬದುಕೇಕೆ?' ಎಂಬ ಚಿಂತೆಗೆ ಗುರಿಯಾಗುತ್ತಾರೆ. ಕೊನೆಯ ತನಕ, ಒಬ್ಬನ ಜೀವನ ಸುಖಮಯವಾಗಿ ಸಾಗಿ ದರೂ ಮುಪ್ಪು ತಪ್ಪೀತೆ? ಅದು ಬರುವಾಗ, ನಾಳೆ ಸಾಯಬೇಕಲ್ಲ ಎಂಬ ಚಿಂತೆ ಬರು ತ್ತದೆ. ಆಗಲಾದರೂ 'ಬದುಕೇನು?' ಎಂಬ ಸಮಸ್ಯೆ ಉದಯಿಸುತ್ತದೆ. ಆದರೆ ಈ ಮಾನವತ್ತ ಜೀವಿಗಳು ಬದುಕಿನ ಸಮನಾದ ಅರ್ಥ ತಿಳಿಯಲು ಶಕ್ಯವಿಲ್ಲ. ಏಕೆಂದರೆ ಅದರ ಅರಿವು ಅವರಿಗೆ ಉಂಟಾಗುವುದೇ ಜೀವನದ ಮೇಲೆ ಬೀಳುತ್ತಿರುವ ಆಘಾತ ಗಳಿಂದಾಗಿ. ಸಾವು ನೋವುಗಳೇ ಅವರ ಪಾಲಿಗೆ ಭೂತಾಕಾರವಾಗಿ ಕಾಣುವವು. ಅವರ ಪಾಲಿಗೆ ಭೂತಾಕಾರವಾಗಿ ಕಾಣುವವು. ಅದರ ಹಿನ್ನೆಲೆಯಾಗಿರುವ ದೀರ್ಘ ಜೀವನದ ಸರಿಗು ತನ್ನ ಮಹತ್ವವನ್ನು ಕಳೆದುಕೊಂಡು ಬಿಡುತ್ತದೆ. ಇದರಿಂದ ಅವರು ತಮ್ಮ ಪ್ರಶ್ನೆಗೆ ದೊರಕಿಸಿಕೊಳ್ಳುವ ಉತ್ತರಗಳೂ ಸಮನಾಗಲಾರವು. ಸಾವು ನೋವಿನ ಬೆದರಿಕೆ ಗಳು ಬೇತಾಳಹಾಗಿರುವಲ್ಲಿ, ಜೀವನವನ್ನು ಕುರಿತಾದ ಸಮತೂಕದ ವಿಮರ್ಶೆ ಉಂಟಾಗ ಲಾರದು.

**ಜೀವನಕ್ಕೆ ಹೊಂದಿಬಾರದ ಕತೆ**

ಮಾನವನ ಜೀವನದಲ್ಲಿ ಅನೇಕ ವಿಚಿತ್ರ ನಮಗೆ ಗೋಚರಿಸುವ ... ಜನಸಾಮಾನ್ಯರಲ್ಲಿ ಬಹುಮಂದಿ ಪ್ರಾಮಾಣಿಕರೇ. ನಿತ್ಯದ ಹೋರಾಟ. ಸುಖಗಳಲ್ಲೇ

ಅವರ ಗಮನ. ಇಂಥವರು ಮುಪ್ಪು ಬಂದಿತೆಂದರೆ ಒಮ್ಮೆಗೇ ಪಾರಮಾರ್ಥಿಕರಾಗು ತ್ತಾರೆ. ಲೌಕಿಕದಿಂದ ಪಾರಮಾರ್ಥಕ್ಕೆ ಅವರದು ಒಂದೇ ನೆಗೆತ. ಏನು ಮತಶ್ರದ್ಧೆ ಏನು ಪೂಜೆ, ಏನು ಭಜನೆ, ಏನು ಅನುಷ್ಠಾನಗಳು! ಇವಾದರೂ ಮನುಷ್ಯನಿಗೆ ಹಿತ ಕರವಾದುವೇ ? ಇದು ಅನುಮಾನದ ಸಂಗತಿಯೇ. ಇಲ್ಲಿಯತನಕ ಜೀವನದಲ್ಲಿ ಒಂದಾಗಿ ಸೇರದ ನೀತಿ, ನಡತೆಗಳು ಈಗ ಕಾಣಿಸುವುವು. ಅವು ಅವರದಾಗಿ ಬೆಳೆದಿರುವುದಿಲ್ಲ, ಅಲ್ಲಿಯತನಕ ಬೆಳೆದು ಬಂದ ಅವನ ಜೀವನದ ಫಲವಾಗಿ ಬಂದುವಲ್ಲ. ಬರಿಯ ಮುಪ್ಪು, ಸಾವಿನ ಭೀತಿಗಳಿಂದ ಕೆಲವೇ ದಿನಗಳಲ್ಲಿ ಉದ್ರೇಕಗೊಂಡುವು. ಇಂಥ ಸೋಗುಗಳು ಕೇವಲ ನಾಟಕದ ವೇಷಗಳು.

ಏಕೆಂದರೆ—ಈ ಜನರ ಪಾರಮಾರ್ಥವನ್ನು ನಾವು ಅವರ ಪೂಜೆ ಭಜನೆ, ಮಂದಿ ಗಳಲ್ಲೇನೆ ಕಾಣಬೇಕಲ್ಲದೆ ಜೀವನದ ಅಂಗವಾಗಿ ಕಾಣಲಾರೆವು. ಅವರು ಸುತ್ತಲಿನ ಜೀವಿ ಗಳೊಡನೆ ವ್ಯವಹರಿಸುವ ರೀತಿ ಮೊದಲಿನಂತೆಯೆ ಇರುತ್ತದೆ. ಅದೇ ನಿಷ್ಠುರತೆ, ಅದೇ ಸ್ವಾರ್ಥ, ಅದೇ ಸಂಕುಚಿತ ವೃತ್ತಿ. ನಿಜವಾಗಿ ಅವರಲ್ಲಿ ಕ್ರಮಗತ ಪರಿವರ್ತನೆಗೊಂಡ, ಪಾರಮಾರ್ಥವು ಅದಾಗಿದ್ದರೆ, ಆಗ ಅವರ ಒಟ್ಟು ನಡತೆಯಲ್ಲೇ ನಾವು ಬದಲಾವಣೆ ಯನ್ನು ಕಾಣಬೇಕು. ಕೇವಲ ಸಾವಿನ ಅಂಜಿಕೆಯಾಗಿ ಪಾರಮಾರ್ಥದ ಮುಖವಾಡವನ್ನು ಎಷ್ಟು ನಂಬಿಕೆಯಿಂದ ತೊಟ್ಟರೂ, ಅದರಿಂದ ಜೀವನಕ್ಕೆ ನೆಮ್ಮದಿ ಉಂಟಾಗಲಾರದು.

**ಸಾವೂ ಸಹಜ**

ಹೀಗೆ ಜೀವನವನ್ನು ಇಬ್ಭಾಗಿಸುವ ಜನರಲ್ಲಿ ಲೌಕಿಕರು, ಹಿಂದಿನ ಜನರು, ಈಗಿನವರು—ಎಲ್ಲರೂ ಸೇರುತ್ತಾರೆ. ಅವರೆಲ್ಲರೂ ಒಂದೇ ಬಳಗದವರು— ಜೀವನದ ಪಾಲಿಗೆ ಕುರುಡಾಗಿದ್ದು, ಸಾವಿನ ಭೀಕರತೆಗೆ ಬೆದರಿ, ಆತ್ಮನನ್ನು ಕಾಪಾಡಲು ಎಳಸುವ ಜನರು ಇವರು. ಸಾವು ಅವರಿಗೆ ಭಯಂಕರ ವಸ್ತು. ಹೀಗಾಗಬೇಕೇಕೆ ? ಯಾವಾತ ತಾನು ಚೆನ್ನಾಗಿ ಬದುಕಿದ್ದೇನೆ ಎಂದು ಧೈರ್ಯಪಡಬಲ್ಲನೋ ಅವನು ಸಾವಿಗೆ ಅಂಜುವುದಿಲ್ಲ. ಚೆನ್ನಾಗಿ ಬದುಕಿದವನು ಸಾವನ್ನು ಹಿತವಾಗಿಯೇ ತಿಳಿಯುತ್ತಾನೆ.

**ಜನನದ ಭೀತಿಯಲ್ಲಿ**

ಸಾವು ಹುಟ್ಟುಗಳೆಂಬ ಮಾತುಗಳು ಜತೆಯಾಗಿ ಹೋಗುತ್ತವೆ; ಆದರೂ ಜನರ ಭೀತಿ ಸಾವಿನ ಕಡೆಗೇನೆ ಇದೆ. ಹುಟ್ಟಿಗಾಗಿ ಹೆದರುವುದಿಲ್ಲ. ನಾವು ಹೆದರಿದರೂ ಹುಟ್ಟಿದವನು ಸಾಯಬೇಕಲ್ಲ ಎಂಬ ಹೆದರಿಕೆಗೆ. ಹುಟ್ಟಿದವನು ಕೆಲದಿನವಾದರೂ ಇರುತ್ತಾನಲ್ಲ ಎಂಬ ಸಂತೋಷಕ್ಕೆ ಅವಕಾಶ ಬೇಡವೇ ? ಈಗಣ ನಾಗರಿಕತೆ ಹಲವರಲ್ಲಿ ಹುಟ್ಟನ್ನು ಕುರಿತಾದ ಭೀತಿ ತಂದಿರುತ್ತದೆ. ನಾಳೆ ಮನೆಯಲ್ಲಿ ಹುಟ್ಟಿದ ಮಕ್ಕಳಿಗೆ ಸಮನಾದ ಐಶ್ವರ್ಯ, ಆರೋಗ್ಯ, ವಿದ್ಯೆ ಕೊಡಲಾರೆವಾದರೆ—ಎಂಬುದರಿಂದ ಉಂಟಾಗುತ್ತಿರುವ ಭೀತಿ ಇದು. ಸಾವು, ಹುಟ್ಟು ಎರಡೂ ಒಂದೇ ಅಂತಸ್ತಿನವಲ್ಲ. ಸಾವು ಅನಿವಾರ್ಯ ವಾದುದು. ನಮ್ಮ ಹುಟ್ಟು, ಹುಟ್ಟಿದ ಬಳಿಕ ಅನಿವಾರ್ಯವೇ ಆದರೂ, ಆಗುವ

ಹುಟ್ಟುಗಳನ್ನು ಮನುಷ್ಯ ತಡೆಯಲೂ ಬಹುದು. ಆದರೂ 'ಜನನ'ದ ಭೀತಿ ಕಡಿಮೆ ; ಮರಣದ ಭೀತಿಯೇ ಬಲವಾಗಿದೆ.

ಸಾವನ್ನು ಕುರಿತು ಇರುವ ಹೆದರಿಕೆಯು—ಈ ಜೀವನ ಕೊನೆಗಾಣುತ್ತದೆಯಲ್ಲ ಎಂಬುದರಿಂದ ಆದರ ಜತೆಗೆ ಇರುವ ಇನ್ನೊಂದು ಭೀತಿಯೆಂದರೆ—ಸಾವಿನ ಆಚೆಗೆ ಏನಿದೆಯೋ, ಏನಾದೀತೋ—ಎಂಬುದರಿಂದ ಬರುವುದು. ಹಗಲೆಲ್ಲ ಸುಖವಾಗಿ ಆಲೆದಾಡಿದ ವ್ಯಕ್ತಿ, ರಾತ್ರಿ ನಿದ್ರೆಯಲ್ಲಿ ತನಗೇನಾದೀತೋ ಎಂದು ಅಂಜಿದಂತಲ್ಲವೆ ? ಈ ಎರಡನೆಯ ತೆರನ ಭೀತಿ ಇರುವಲ್ಲಿಯ ತನಕ, ಸಾವು ಸುಖಕರವೆನಿಸಲಾರದು. ನಿಜವಾಗಿ, ದಿನಪಲ್ಲಿ ದುಡಿದ ವ್ಯಕ್ತಿ, ರಾತ್ರಿ ನಿದ್ದೆಯನ್ನು ಎಷ್ಟು ಸುಖ, ಏನು ಸ್ವಾಭಾವಿಕ ಎಂದು ತಿಳಿಯುತ್ತಾನೋ, ಅಷ್ಟೇ ಹಿತದೃಷ್ಟಿಯಿಂದ ಬದುಕಿರುವ ವ್ಯಕ್ತಿ ಸಾವನ್ನು ಕುರಿತು, ತಿಳಿಯಬೇಕು. ಆದರೆ ಸಾವಿನ ಆಚೆಗೆ ಏನಿದೆಯೋ—ಎಂಬ ಭೀತಿಯಿಂದ ಆ ಶಾಂತಿ ತಪ್ಪುತ್ತದೆ. ಈ ಪರಿಚಿತ ಜಗತ್ತಿನಿಂದ ಇನ್ನಾವ ಅಪರಿಚಿತ ನಾಡಿಗೆ ಹೋಗುತ್ತೇನೋ—ಎಂಬ ಭೀತಿ.

## ಮರಳಿದವರಿಲ್ಲ

ಆ ನಾಡಿನಿಂದ ಮರಳಿದವರಿಲ್ಲ ಎಂಬುದು ತಿಳಿದಿದೆ. ಆದರೆ ಆ ಭೀತಿಯಿಂದ ಅನೇಕ ದೆವ್ವಗಳು ಪ್ರೇರಿತವಾಗಿವೆ. ನರಕಗಳು ಕೆದರಿ ನಿಂತಿವೆ. ಈ ನರಕಕ್ಕೆ ಇದಿರಾಗಿ ಕೆಲವರು ಸ್ವರ್ಗ ತಂದೂ ಇರಿಸಿದ್ದಾರೆ. ಆದರೇನು ? ಸ್ವರ್ಗದ ಮೆಚ್ಚುಗೆಗಿಂತ ನರಕದ ಭೀತಿಯೇ ಹೆಚ್ಚಾಗಿದೆ. ಈ ಎಲ್ಲ ಭೀತಿಗಳ ನಿವಾರಣೆಗೆ ಮನುಷ್ಯ ಪರಿಚಿತ ಪ್ರಪಂಚದ ಜೀವನವನ್ನು ಅಲ್ಲಗಳೆಯದೆ, ಚೆನ್ನಾಗಿ ತಿಳಿಯುವುದು ತೀರ ಅವಶ್ಯ. ತಾನು ಇಲ್ಲಿ ಇದ್ದು ಮಾಡಬೇಕಾದುದೇನು. ಸುತ್ತಲಿಂದ ಕೊಳ್ಳಬೇಕಾದುದೇನು, ಸುತ್ತಲಿಗೆ ಕೊಡಬೇಕಾದುದೇನು ? ಅದನ್ನು ತಿಳಿಯಲು ಯತ್ನಿಸದಾತ, ಸಂತೆ ಮುಗಿಯಲು ಸಂತೆಯಾದ ತಾವನ್ನು ಬಿಡಲು ಅಂಜಿದ ಗಿರಾಕಿಯಂತಾಗುತ್ತಾನೆ. ಕಳಿತ ಮೇಲೆಯೂ ಒಂದು ಹಣ್ಣು, ತೊಟ್ಟಿಗೆ ತಗುಲಿಕೊಂಡಿರಲು ಬಯಸಿದರೆ ನ್ಯಾಯವಾದೀತೆ ? ಗಿಡದೊಡನೆ ಇದ್ದು ಲಾಭ ಪಡೆಯುವಷ್ಟು ಕಾಲ ಅದು ಅಂಟಿರುತ್ತದೆ. ಅನಂತರ ಅಲ್ಲಿಂದ ಕಳಚುತ್ತದೆ. ಮನುಷ್ಯ ತನ್ನ ಸಾವನ್ನು ಹೀಗೆ ಏಕೆ ತಿಳಿಯಬಾರದು ?

ಆದರೆ ಜನಜೀವನ ಹೀಗೆ ಬದುಕುತ್ತಲಿಲ್ಲ. ಬಹುಜನರ ಜೀವನ ಕೇವಲ ಅನ್ನಸಂಗ್ರಹದಲ್ಲೇ ಕಳೆಯುತ್ತದೆ. ಕೆಲವರು ಅದನ್ನೇ ಜೀವನದ ಕಷ್ಟ ಸಮಸ್ಯೆಯಾಗಿ ಮಾಡಿರಿಸಿದ್ದಾರೆ. ಆ ಕೆಲವರಾದರೂ ತೃಪ್ತರೆ—ಎಂದರೆ ಹಾಗೂ ಇಲ್ಲ. ಅತಿತೆ ಮೀರಿದಂಥ ಅನುರಾಗವನ್ನು ಅವರು ಪ್ರಪಂಚದೊಡನೆ ಬೆಳೆಸಿಕೊಂಡಿದ್ದಾರೆ. ಅವರ ನಡತೆಯಿಂದ, ಪ್ರಪಂಚವೇ ಅವರಿಗಾಗಿ ಉಳಿದಿದೆ—ಎಂಬ ಭಾವನೆಯಿರುವಂತೆ ಕಾಣುವುದು.

## ಅನುಭವಗಳ ಸಂತೆ

ಜೀವನವೆಂಬುದನ್ನು ನಾವು ಅನುಭವಗಳ ಒಂದು ಹಿರಿಯ ಸಂತೆಯಾಗಿ ತಿಳಿಯಬು

ವುದು ಲೇಸು. ಆ ಅನುಭವಗಳನ್ನು ಹೊಂದಿಕೊಂಡು ನಮ್ಮ ಬಾಳ್ವೆ ಇರಬೇಕು. ಅದರಿಂದ ಪ್ರತಿಫಲಿಸುವ ಸೊಗಸು, ಉಳಿದ ಜೀವನಕ್ಕೆ, ಜೀವಿಗಳಿಗೆ ದೊರೆಯಬೇಕು. ಈ ಸಂತೆಯಲ್ಲಿ ಕಾಲಿಡುವ ಮನುಷ್ಯ—ಬಂದು ನಿಂತರೂ ಇಲ್ಲಿ ತನಗೆ ಬೇಕಾಗುವ ಒಡವೆ ಸಿಗಲಾರದೆಂದರೆ ಹೇಗೆ ? ಜೀವನಕ್ಕೆ ವಿಮುಖನಾದರೆ ಹೇಗೆ ? ಯಾರು ಅಲ್ಲಿ ತಮಗೆ ಕೆಲಸವಿಲ್ಲೆಂದು ತಿಳಿಯುತ್ತಾರೋ ಅವರು ಅಲ್ಲಿಂದ ತೆರಳಬಹುದಲ್ಲ. ಆತ್ಮಹತ್ಯೆಯೇ ಅದಕ್ಕೆ ಔಷಧ. ಮೇಲಿನ ಸರಣಿಯ ಜನರನ್ನು ಬಿಟ್ಟರೆ, ಇನ್ನೊಂದು ಬಗೆಯ ಜನ, ಸಂತೆಯಲ್ಲಿ ತಿರುಗುತ್ತಿದ್ದರೂ ಕೊನೆಯ ಗಳಿಗೆಯ ತನಕವೂ ತಮಗೇನು ಬೇಕು ಎಂದು ನಿರ್ಧರಿಸಲು, ಆರಿಸಲು ಅಸಮರ್ಥರಾದವರು ಅವರ ಪಾಲಿಗೆ ಸಂತೆಯೇ ವ್ಯರ್ಥ. ಬೇರೊಂದು ಜನರ ಗುಂಪು—ಹತ್ತು ಮಂದಿಯ ಸಂತೆಯ ಒಡವೆಗಳು ತನಗೊಬ್ಬನಿಗಾಗಿಯೇ ಇವೆ—ಎಂದು ತಿಳಿಯುತ್ತದೆ. ಕಂಡುದನ್ನೆಲ್ಲ ಹಂಬಲಿಸಿ, ದೊರೆಯದುದಕ್ಕಾಗಿ ಅಳುವ ಬಳಗ ಅದು. ಹಾಗೆ ನಿರಾಶೆಗೊಂಡು ಬದುಕು ವ್ಯರ್ಥ—ಎಂದು ತೀರ್ಮಾನಿಸಿ ಬಿಡುತ್ತಾರೆ. ಜೀವನದ ಎಲ್ಲ ಒಡವೆಗಳು ನಮಗಾಗಿಯೇ ಇಲ್ಲ. ಕೆಲವು ನಮಗೆ, ಕೆಲವು ಪರರಿಗೆ, ಕೆಲವು ಕೆಲ ಕಾಲ ಮಾತ್ರ ನಮಗೆ ; ಕೆಲವು ನೋಟಕ್ಕೆ ಮಾತ್ರನಮಗೆ—ಹೀಗೆ ನಮ್ಮ ಅವುಗಳ ಸಂಬಂಧದ ಅಳತೆ ನಮಗಿಲ್ಲದೆ ಹೋದರೆ, ದುಃಖ ಬಂದೇ ಬರುತ್ತದೆ. ಇದರ ಜತೆಗೆ ಜನಸಮುದಾಯದ ಅವ್ಯವಸ್ಥೆಯಿಂದ, ಇದ್ದುದು, ಕೈಗೆ ಸೇರದೆಯೂ ದುಃಖ ಪ್ರಾಪ್ತಿಸಬಹುದು.

### ಹಿತವಾಗಲು

ನಮಗೆ ಜೀವನದಿಂದ ಹಿತವಾಗಲು ನಾವು ಜೀವನವನ್ನು ತಿಳಿಯುವ ಬಗೆಯೂ ಮುಖ್ಯವಾಗುತ್ತದೆ. ಸಾವು ಹುಟ್ಟುಗಳ ಅನಿವಾರ್ಯತೆಯನ್ನು ಒಪ್ಪಿಯೇ ಒಪ್ಪುವ. ಆದರೆ ಸಾವು, ಹುಟ್ಟುಗಳ ನಡುವಣ ಜೀವನವೂ ಅಷ್ಟೇ ನಿಜವಾದುದು. ಅದು ಅಷ್ಟೇ ಮುಖ್ಯವಾದುದು. ನಿರಾಕರಣೀಯವಲ್ಲದ್ದು. ಇನ್ನು ಇವರ ಜತೆಗೆ ಬದುಕು, ಪ್ರಪಂಚ –ಎಂಬವು ನಮ್ಮೊಬ್ಬರದ್ದೇ ಅಲ್ಲ; ನಮಗೆ ಅದರಲ್ಲಿರುವ ಪಾಲಿಗೆ ಸಮನಾಗುವ ಪಾಲು, ಇತರ ಕೋಟಿಗಟ್ಟಲೆ ಜೀವಿಗಳಿಗಿದೆ. ಇಂದಿನದೇ ಆದ ಬದುಕಿನಲ್ಲಿಯೂ ನಿನ್ನಿನವರ ಪಾಲೂ ಸೇರಿದೆ: ನಾಳಿನವರ ಪಾಲೂ ಸೇರಿದೆ. ಇಂಥ ಕಲ್ಪನೆಯು ನಮಗೆ ಬರುವಲ್ಲಿ, ನಾವು ಬದುಕಿನಿಂದ ಬಯಸುವಷ್ಟನ್ನೇ ಬಯಸಲು ಕಲಿಯುತ್ತೇವೆ, ಇಲ್ಲದ್ದನ್ನು ಕೇಳಿ, ನಿರಾಶೆಗೊಂಡು, ಬದುಕೇ ವ್ಯರ್ಥವೆಂಬ ತೀರ್ಮಾನಕ್ಕೆ ಬರಬೇಕಿಲ್ಲ.

### ಸಮದೃಷ್ಟಿಯಿಲ್ಲ

ಮನುಷ್ಯನ—ಸಮಾಜದಲ್ಲಿ ಇಂದು ಅದರಿಕೊಂಡಿರುವ ನಂಬುಗೆಗಳು, ಅವಕ್ಕೆ ಮುದ್ರಿಕೆಯೊತ್ತಿರುವ ಮತ ಧರ್ಮಗಳು, ಜೀವನವನ್ನು ಕುರಿತಾಗಿ ಸಮದೃಷ್ಟಿಯನ್ನು ಬೆಳೆಯಿಸಿಕೊಂಡಿಲ್ಲ. ನಮ್ಮ ಮತ, ಧರ್ಮ, ಸಂಸ್ಕೃತಿಗಳು—ಬಾಳ್ವೆಯನ್ನು ಸಣ್ಣಿಸಿ, ಸಾವನ್ನು ಹಿರಿದಾಗಿಸಿ ಬಿಟ್ಟಿವೆ. ಈ ಉದ್ದೇಶ ಸಾಧಿಸಲು, ಕಲ್ಪನೆಗೆ ಬಗೆಗೊಟ್ಟು—ಜೀವನವನ್ನು ಚುಟುಕುಮಾಡಿ, ಜೀವನದ ಆಚಿನ ಲೋಕ, ಕಾಲಗಳನ್ನು

ಒರಿಒರಿ ಒಗ್ಗಿಸಿವೆ. ಪರಲೋಕವು ಬಲು ದೊಡ್ಡದಾಗಿದೆ. ಅದೆಂಥದೆಂಬುದು ಕೇವಲ ಕಲ್ಪನೆಯ ನಲಿದಾಟದ ಮೇಲೆಯೇ ಹೊಂದಿದೆ. ನಮ್ಮ ಊಹಾಬಲದಷ್ಟೇ ಅದೂ ವಿಸ್ತರಿಸಿದೆ. ಆದರೆ ನಮ್ಮ ಮನಸ್ಸಿನವೇ ಕಲ್ಪನೆಗಳು ಅವು. ಆದುದರಿಂದ, ಇಲ್ಲಿನ ಎಲ್ಲ ಮಿತಿಗಳೂ, ಆ ಊಹಾಲೋಕವನ್ನು ಬಂಧಿಸಿವೆ. ಸ್ವರ್ಗದ ದೇವತೆಗಳಿಗೋ, ಸೈತಾನರಿಗೋ, ಯಮರಿಗೋ—ಭೂಮಿಯದೇ ಆಕಾರ, ಗುಣ, ಚೆಲುವುಗಳು ತಳಹದಿ. ಇವು ತೀರ ಕಲ್ಪನೆಯ ಓಲಾಟಕ್ಕೆ ಸಿಲುಕಿದುವಾದರೂ, ಮನುಷ್ಯನ ಭೀತಿ ಅವಕ್ಕೆ ನೆಲೆಗಟ್ಟಾದುದರಿಂದ, ನಮ್ಮ ಸಂಸ್ಕೃತಿಯಲ್ಲಿಯೇ ಅವೂ ಬೇರೂರಿ ನಿಂತಿವೆ. ನಮ್ಮ ಪುರಾಣಗಳು, ನಂಬಿಕೆಗಳು, ಸಂಪ್ರದಾಯಗಳು ಇಂಥ ನೆಲಗಟ್ಟಿನಲ್ಲಿ ಹುಟ್ಟಿ ಬೆಳೆದುವು. ಈಗಣ ಬದುಕನ್ನು ಬಲಿಕೊಡುವಂಥ ಈ ಮೃತ್ಯುಲೋಕ ಇನ್ನೂ ಬಲಿಷ್ಟವಾಗಿಯೇ ಇದೆ.

**ಮೋಕ್ಷ**

ಸ್ವರ್ಗ ನರಕಗಳ ಆಚೆಗಿರುವ ಮೋಕ್ಷವೆಂಬುದೂ ಇಂಥದೇ ತರ್ಕ ಸರಣಿಯ ಕೂಸು. ಸಾವು ಹುಟ್ಟುಗಳ ಅಂಜಿಕೆಗಳು ಹೆತ್ತಂಥ ಕೂಸು ಅದು. ಇಂದಿನ ದಿನ ಚೆನ್ನಾಗಿ ಬಾಳಿ ಎಂದು ನುಡಿದು ನಾಳಿನ ಗೊಡವೆಗೆ ಹೋಗದ ಧರ್ಮಗಳು ವಿರಳ. ಚಾರ್ವಾಕ ಹಾಗೆಂದನು; ಬುದ್ಧನು ಹಾಗೆಂದ. ಚಾರ್ವಾಕರ ರೀತಿ ಬೇರೆ. ಅವನು ವ್ಯಕ್ತಿಯ ಸ್ವಾರ್ಥವನ್ನು ಬೆಳೆಯಿಸುವ ಸರಣಿಗೆ ಬೆಂಬಲವಿತ್ತಂತಿದೆ. ಬುದ್ಧ ನಾಳಿನದನ್ನು ಹೇಳದೇನೆ, ಇಂದಿನದನ್ನು ಚೆನ್ನಾಗಿ ತಿಳಿದು ಬಾಳು—ಎಂದ. ಆದರೂ ಅವನ ಕಾಲದ ನಂತರ ಹುಟ್ಟಿದ ಪುರಾಣಗಳು—ತಿರುಗಿ ಸಾವು, ಜನನ, ಮರಣಗಳನ್ನು ಭೂತಾಕಾರವಾಗಿ ಮಾಡಿಟ್ಟವು. ಬುದ್ಧನನ್ನೇ ಆ ಜಂಜಾಟದಲ್ಲಿ ಅವನ ಶಿಷ್ಯರು ತೊಡಕಿಸದೆ ಬಿಡಲಿಲ್ಲ.

**ಭಯ**

ಮನುಷ್ಯನ ಮನಸ್ಸಿನ ಮೇಲಣ ಅಧಿಕಾರವು ಬಹುಕಾಲದಿಂದ ಮತಧರ್ಮಗಳಿಗೆ ಬಂದಿದೆ. ಅವನ ಸುಖದುಃಖಗಳನ್ನು ಪಾಯವಾಗಿರಿಸಿಕೊಂಡು, ಅವುಗಳನ್ನು ಬೆಳೆಸಿಕೊಂಡು ಬಂದರು. ಅವುಗಳಲ್ಲಿ, ವಿಚಾರಕ್ಕೆ ದೊರಕಿದ ಅಧಿಕಾರಕ್ಕಿಂತ, ಕಲ್ಪನೆಗೆ ಹೆಚ್ಚಿನ ಅಧಿಕಾರ ದೊರೆಯುತ್ತ ಬಂದಿತು. ಮನುಷ್ಯನ ನರಗಳ ಸ್ವಭಾವವೇ ಹಾಗಾಗಿ ಬಿಟ್ಟಿದೆ. ದಿನದಿನಗಳ ತನಕ ವಿಚಾರದಿಂದ ಕಟ್ಟಿದ ಕೋಟೆಯನ್ನು, ಒಂದೇ ಕ್ಷಣದಲ್ಲಿ ಭಾವನೆಯು ಅದುರಿಸಿ ಬಿಡುವುದುಂಟು. ಭಯ—ಅಂತಹ ಶಕ್ತಿ.

ಮನುಷ್ಯನ ತರ್ಕಸರಣಿಯಲ್ಲಿ ವಿಚಾರ, ವಿಜ್ಞಾನಗಳು ಕ್ರಮೇಣ ಸೇರುತ್ತ ಬಂದುವು. ಈಗಿನ ಯುಗದಲ್ಲಿ ವಿಜ್ಞಾನವು ಹೆಚ್ಚಿನ ಪ್ರಭಾವ ತೋರುತ್ತಿದೆ. ಜನರ ವಿಚಾರದ ಗತಿಯು ಹರಿತವಾಗಿ ಬಂದಿದೆ. ಆದರೂ—ಜೀವನವನ್ನು ಕುರಿತು ಯೋಚಿಸಲು ಕಾಲಿಟ್ಟೆವೆಂದರೆ, ಈ ಶಕ್ತಿಗಳ ಕೈವಾಡ ಕಡಮೆ. ಭಾವನೆಯ ಅಧಿಕಾರ, ಕಟ್ಟುಗಳೇ ಬಲವಾಗಿ ಬಿಡುತ್ತವೆ. ಪರಂಪರೆಯ ಅಂಧಶ್ರದ್ಧೆಯು ನಮ್ಮ ನರಗಳಲ್ಲಿ ಸೇರಿ

ಚಿರವಾದ ಸಂಕೋಚ ವೃತ್ತಿ, ಪ್ರತಿಕ್ರಿಯೆಗಳನ್ನು (reflex) ಉಂಟುಮಾಡಿದಂತಿದೆ. ಅವುಗಳ ಪ್ರಭಾವಗಳನ್ನು ಮೀರಿ, ಸ್ವತಂತ್ರವಾಗಿ, ನಿರ್ದಾಕ್ಷಿಣ್ಯವಾಗಿ, ಜೀವನದ ವಿಮರ್ಶೆ ಮಾಡುವವರು ಕಡಮೆ.

ಮತಧರ್ಮಗಳಲ್ಲಿ ಮೃತ್ಯುವಿನ ಭೀತಿಯು ತಂದೆಬ್ಬಿಸಿದ ಹಾವಳಿಯನ್ನು ಕುರಿತು ಹೇಳಿಯಾಯಿತು. ಈ ಮತಗಳು ಭೀತಿಯ ಬೇರೊಂದು ಮರಿಯನ್ನು ಇತ್ತಿದೆ. ಆ ಮರಿಯೇ ದೇವರು. ಈ ದೇವರ ಕಲ್ಪನೆಯ ಮೂಲದಲ್ಲಿ ಭೀತಿಯಿದೆ. ಕ್ರಮೇಣ ಮನುಷ್ಯ, ದೇವರಿಗೆ ಪ್ರೀತಿಯನ್ನು ಸಲಿಸುತ್ತ ಬಂದನು. ಒಟ್ಟಿನ ಮೇಲಿಂದ ದೇವರ ಕೆಲಸ ಮಾತ್ರ—ಮನುಷ್ಯನ ಭೀತಿಯನ್ನು ತೊಲಗಿಸುವ ಸಲುವಾಗಿದೆ. ಈ ಕಾರಣ ದಿಂದಲೂ ಬದುಕು ಬಡವಾಗಲು ಸಾಧನವಾಯಿತು. ಒತ್ತಟ್ಟು ಸಾವು ಪಡೆದ ಪಾಲು, ಇನ್ನೊತ್ತಟ್ಟು ದೇವರು ಕೊಳ್ಳುವ ಪಾಲು—ಇವೆರಡರಿಂದಾಗಿ "ಜೀವನದ" ಪಾಲಿಗೆ ಸಲ್ಲಬೇಕಾದ ಗೌರವ, ಕರ್ಮಗಳು ಮಾಯವಾಗಿವೆ.

**ದೇವರು**

ಬೌದ್ಧಧರ್ಮವು ನಮ್ಮ ಸಂಸ್ಕೃತಿಗೆ ಸಲಿಸಿದ ದೊಡ್ಡ ಒಂದು ಕಾಣಿಕೆಯೆಂದರೆ—ದೇವರ ಗೊಡವೆಗೆ ಹೋಗದೆ ಜೀವನವನ್ನಿದಿರಿಸಲು ಹೇಳಿದ ಪಾಠ. ನಾವು ದೇವರನ್ನು ಒಪ್ಪುತ್ತೇವೆ ಇಲ್ಲವೆ ನಿರಾಕರಿಸುತ್ತೇವೆ—ಎಂಬುದರ ಮೇಲೆ ಜೀವನದ ಧೋರಣೆ ನಿರ್ಣಯವಾಗುವುದು ಅವಶ್ಯವೆ ? ಜನರು ಒಮ್ಮೆಗೇ—ನಾಸ್ತಿಕವಾದವನ್ನೂ ಅನೀತಿಯನ್ನೂ, ಆಸ್ತಿಕವಾದವನ್ನೂ ನೀತಿಯನ್ನೂ, ಜತೆಗೊಳಿಸುವಂತೆ ಕಾಣುತ್ತದೆ. ಆದರೆ ಆಸ್ತಿಕರ ಸಂಖ್ಯೆ ಬಹುವಾಗಿರುವ ಪ್ರಪಂಚದಲ್ಲಿ 'ಅನೀತಿ'ಯ ಕುಣಿದಾಟ ಏನೂ ಕಡಿಮೆಯಾಗಿಲ್ಲ, ಎಂಬುದನ್ನು ಕಂಡರೆ, ಅಂಥ ನಂಬಿಕೆಗೆ ತಳವಿಲ್ಲೆಂದು ತೋರುತ್ತದೆ. ನಮ್ಮ ಮನಸ್ಸಿನದೇ ಪ್ರತೀಕವಾಗಿರುವ ದೇವರು ಇದ್ದರೂ ಇಲ್ಲವಾದರೂ, ಜೀವನದ ಬದಲಾವಣೆ ಅದರಿಂದಾಗದು.

**ನ್ಯಾಯ, ನೀತಿ**

ನ್ಯಾಯ ನೀತಿಗಳಿರುವುದಾದರೂ ಏತಕ್ಕೆ ? ಬದುಕಿನಲ್ಲಿ ವ್ಯವಹರಿಸುವುದಕ್ಕೆ. ಆಗ ಬದುಕನ್ನೇ ಮುಖ್ಯವಾಗಿರಿಸಿಕೊಂಡು, ಅದನ್ನೇ ತಿಳಿಯುವುದರಿಂದ ಬರುವಂಥ ಜ್ಞಾನವು-ಅಲ್ಲಿನ ನಡವಳಿಕೆಗೆ ಸಹಾಯವಾದೀತೇ ಹೊರತು ಬೇರೆಯಿಲ್ಲ.

ದೇವರಿಂದಾಗಿ ನಮ್ಮ ನಡವಳಿಕೆಯು ನೀತಿಕರವಾಗುವುದಾದರೆ, ಅದು ದೇವರ ನಂಬುಗೆಯಿಂದ ಎಂಬುದಕ್ಕಿಂತ, ದೇವರಿಗೂ, ಜೀವನಿಗೂ, ಇತರ ಜೀವಿಗಳಿಗೂ ಏನು ಸಂಬಂಧವಿದೆ ಎಂದು ನಾವು ತಿಳಿದಿದ್ದೇವೆಯೋ—ಅದರ ಮೇಲಿಂದ ಎನ್ನಬಹುದಾಗುತ್ತದೆ. ಇಲ್ಲೂ ನಮಗೂ ಹೊರಗಣ ಜೀವಕೋಟಿಗೂ ಯಾವ ಬಗೆಯ ಸಂಬಂಧವಿದೆಯೆಂದು ನಾವು ತಿಳಿಯುತ್ತೇವೆಯೋ, ಅದರ ಮೇಲಿಂದಲೇ ನಮ್ಮ ನಡವಳಿಕೆಯು ನಿರ್ಣಯವಾಗುತ್ತದೆ.

ಆದರೆ ಮತಧರ್ಮಗಳು ಜೀವಜೀವಿಗಳ ಸಂಬಂಧಗಳನ್ನು ವಿಶದಗೊಳಿಸು

ದೇವರನ್ನು ಬಳಸಿದುದಕ್ಕಿಂತ ಅಧಿಕವಾಗಿ, ಜೀವನದಿಂದ ಬೇರೆಯೇ ಆದ ದೇವರನ್ನು ಕಲ್ಪಿಸಿದಂತಿದೆ. ಹೀಗಾಗಿ, ಮನುಷ್ಯ ದೈವಪರನೆನಿಸಿಕೊಂಡು ಜೀವನವನ್ನು ನಿರಾಕರಿಸಲು ಕಾರಣನಾದ. ಏಕೆಂದರೆ ದೇವರ ಹುಟ್ಟು ಭೀತಿಯಿಂದ ಉಂಟಾದುದು, ಈ ಜೀವನದ ಸಂಕಟಗಳಿಂದ ನಮ್ಮನ್ನು ಕಾಪಾಡುವ ಸಲುವಾಗಿ, ಅವನನ್ನು ಮನುಷ್ಯ ನಿರ್ಮಿಸಿಕೊಂಡನು. ಹೀಗಾಗಿ, ಸಮನಾದ ಬಾಳ್ವಿಗೆ, ಬಾಳ್ವೆಯ ಅರ್ಥಕ್ಕೆ ದೇವರು ಸಹ ಇಂದು ವಿಘಾತಕವಾಗಿ ಬಂದಿದ್ದಾನೆ. ಈ ವಿಚಾರವಾಗಿಯೂ, ದೇವರು ನಮ್ಮ ಸೃಷ್ಟಿ—ಎಂಬ ವಿಷಯದಲ್ಲೂ, ಮುಂದೆ ವಿವರಿಸುವುದರಿಂದ ಇಲ್ಲಿಗೆ ಇಷ್ಟೇ ಸಾಕು.

**ನಂಬಿಕೆಗಳು**

ಮತಸಂಪ್ರದಾಯಗಳು ಜನರಲ್ಲಿ ಅನೇಕ ರೂಢವಾದ ನಂಬಿಕೆಗಳನ್ನು ತಂದು ಹಾಕಿವೆ. "ಹುಟ್ಟು, ಸಾವುಗಳೆಲ್ಲ ಪರಮಾತ್ಮನ ಲೀಲೆ". "ಜೀವನವೆಂಬುದು ಮಾಯೆ", "ಇದೆಲ್ಲ ಕರ್ಮಫಲ" "ಇದೆಲ್ಲ ದೇವರಾಟ" ಎಂಬ ಹಲವೊಂದು ರೂಢ ನಂಬಿಕೆಗಳಿಂದಾಗಿ, ಮನುಷ್ಯನ ಮನಸ್ಸು ತನ್ನದೇ ಆದ ಜೀವನದ ದೃಷ್ಟಿಯನ್ನು ತಂದುಕೊಳ್ಳಲು ಅಸಮರ್ಥವಾಗುತ್ತದೆ. ರೂಢ ನಂಬಿಕೆಗಳನ್ನು ಕಣ್ಮುಚ್ಚಿ ನಂಬುವ ಜನತೆಯೇ ಅಧಿಕ. ಅದನ್ನು ಒಪ್ಪಿ ಬಿಡುವುದಾದರೆ, ವ್ಯಕ್ತಿಗೆ—ತಾನು ಬದುಕಿ ಆಗಬೇಕೇನು ? ತನ್ನ ಬಾಳಿನಲ್ಲಿ ತಿಳಿಯಬೇಕಾದುದೇನಿದೆ ? ಯಾವ ಜನರೋ, ಯಾವ ಕಾಲದಲ್ಲೋ, ಯಾವ ಅರ್ಥದಲ್ಲೋ ಹೊರಡಿಸಿದ ಜಾಹೀರನಾಮೆಗಳು —ನಮ್ಮ ಜೀವನದ ಪ್ರಶ್ನೆಯನ್ನು ಬಗೆಹರಿಸಲಾರವು. ನಾವು ತಿಳಿಯ ಬೇಕಾಗಿರುವ ಸಂಗತಿಗಳು, ಇದಿರಿಸಬೇಕಾದ ಜೀವನ, ನಮನಮಗೆ ಬೇರೆಯೇ ಇರುತ್ತವೆ. ಪೂರ್ವಸಿದ್ಧಾಂತದಿಂದ ಹೊರಡುವ ಮನಸ್ಸು, ಅದರಿಂದ ನಡೆಸುವ ಜೀವನಗಳು, ಈ ಕೆಲಸವನ್ನು ಮಾಡಲಾರವು.

**ಒಟ್ಟು ಜೀವನದ ಪಾಲು**

ಪ್ರತಿಯೊಂದು ಜೀವಿಯೂ ತನ್ನ ಜೀವನಕ್ಕೆ ಅಧಿಕಾರವುಳ್ಳುದು. ಜೀವನದಲ್ಲಿ ಪಾರತಂತ್ರ್ಯವೂ ಇದೆ, ಜೀವನ ಸ್ವಾತಂತ್ರ್ಯವೂ ಇದೆ: ಆದರೆ ವ್ಯಕ್ತಿಗೊಂದು ಬೇರೆಯೇ ಮನಸ್ಸು, ಬೇರೆಯೇ ಅನುಭವಗಳ ಅವಕಾಶವಿರುವಲ್ಲಿಯ ತನಕ—ವ್ಯಕ್ತಿ ತಾನು ತಾನಾಗಿ ಬದುಕಿ, ಸಾಧಿಸಬಹುದಾದ ಬೆಳವಣಿಗೆಯಿದೆ. ಒಂದು ವ್ಯಕ್ತಿಯ ಜೀವನವು ಕೇವಲ ಇನ್ನೊಂದರ ಪುನರಾವೃತ್ತಿಯಾದರೆ ಅದಕ್ಕೇನು ಬೆಲೆ ? ಅದೇಕೆ ಅವಶ್ಯ ? ಜೀವನದ ಅನುಭವಗಳನ್ನು ಚೆನ್ನಾಗಿ ಬಡೆದು, ವಿಮರ್ಶಿಸಿದಲ್ಲಿ, ಅವುಗಳಲ್ಲಿ ಒಂದೊಂದೂ ಬೇರೆನಿಸಿ ಒಂದೊಂದರಿಂದಲೂ ಜೀವನ ಪುಷ್ಟವಾಗಬಹುದು. ಎಲ್ಲ ಜೀವಿಗಳಿಗೂ ಪರಮಾತ್ಮನನ್ನು ಕಾಣುವ ಏಕೋದ್ದೇಶವೇ ಜೀವನದ ಹಂಬಿಕೆಯಾದರೆ—ಅವರಲ್ಲಿನ ಈ ಸ್ವಭಾವ, ಶಕ್ತಿ, ವೈವಿಧ್ಯಗಳಾಗಲಿ, ಅವರವರ ಮುಂದೆ ಬರುವ ಅನುಭವ ವೈವಿಧ್ಯಗಳಾಗಲಿ ವ್ಯರ್ಥ. ಜೀವನದಲ್ಲಿ ಪ್ರತಿಯೊಂದು ಪ್ರಾಣಿಯೂ ದುಡಿದು, ಒಟ್ಟಿನ ಹೆಚ್ಚಳಿಕನಕ್ಕೆ ಏನೋ ಒಂದು ಚೆಲುವನ್ನೋ ಗಳಿಕೆಯನ್ನೋ ಒದಗಿಸಿ ಕೊಡಬೇಕಾಗಿದೆ.

# ೨ ಹೊಸ ಬೆಳಗೆ ತೊಡಕಾದ ಹಳೆಯ ತೆರೆಗಳು

**ಕೆಂಗಾಜು ಬೇಡ**

ಬದುಕಿನ ಕಡೆಗೆ ನಮಗೆ ಸಮಂಜಸ ನೋಟ ಬರಬೇಕಾದರೆ, ನಮ್ಮ ಕಣ್ಣನ್ನು ಹಳೆಯ ಕೆಂಗಾಜುಗಳು ಬಾಧಿಸಬಾರದು. ಪೂರ್ವಕಟ್ಟಲೆಗಳ ವಿಚಾರಸರಣಿಯು ನಮ್ಮ ಮನಸ್ಸಿನಲ್ಲಿ, ನಾವು ಬೆಳೆಯುತ್ತಿರುವ ಆವರಣದಲ್ಲಿ, ಯಾವುದೇ ಒಂದು ಬಗೆಯ ಪೂರ್ವ ತೀರ್ಮಾನಗಳನ್ನು ಬಿತ್ತಿದಲ್ಲಿ, ನಮ್ಮ ನೋಟ ಅದರಿಂದ ಬಿಗಿಯಲ್ಪಡುತ್ತದೆ. ಮನುಷ್ಯ ತನ್ನ ಕಟ್ಟಲೆಯ ಕಟ್ಟಿನಿಂದ ಬಿಡುಗಡೆ ಹೊಂದದೆಯೆ, ಜೀವನದ ವಿಷಯ ದಲ್ಲಿ ಸಮನಾದ ನೋಟಕ್ಕೆ ಬರಲಾರ; ಸಮನಾದ ತೀರ್ಮಾನ ಗಳಿಸಲಾರ; ಸಮನಾದ ಜೀವನ ಸಾಧಿಸಲಾರ.

ಹಿಂದಿನ ಒಂದೊಂದು ನಾಗರಿಕತೆಯೂ ಹಲವು ಬಗೆಯ ನಂಬಿಕೆಗಳನ್ನೋ, ತೀರ್ಮಾನಗಳನ್ನೋ ಮನುಷ್ಯನ ಬಳಗದ ಮೇಲೆ ಹೊರಿಸಿದೆ. ಪ್ರತಿಯೊಂದು ಮತ ಸಂಪ್ರದಾಯವೂ ಅದೇ ಕೆಲಸವನ್ನು ಮಾಡುತ್ತ ಬಂದಿದೆ. ಭೂಮಿಯನ್ನೇ ವಿಶ್ವದ ಕೇಂದ್ರವಾಗಿ ಮಾಡಿರಿಸಿದ ಮತಗಳಿವೆ. ಸೂರ್ಯಚಂದ್ರರನ್ನು ತಮ್ಮ ದೇವತೆಗಳನ್ನಾಗಿ ಮಾಡಿದವುಂಟು. ತಾರೆಗಳನ್ನು ಮೃತರ ಆತ್ಮಗಳಾಗಿ ಮಾಡಿದ ಮತಗಳಿವೆ. ಜೀವಿ ಗಳಲ್ಲಿ ಮನುಷ್ಯನೇ ಹಿರಿಯನೆನಿಸಿದ್ದಾನೆ. ಅವನ ದೇವರ ಮೇಲಿನ ಮಮತೆಯು ಅಧಿ ಕಾರವೆಲ್ಲ, ಬರಿಯ ಮನುಷ್ಯನ ಬಳಗಕ್ಕೆ ಮೀಸಲಾದಂತಿದೆ. ಇಂಥ ಮಿತ ಅನುಭವಗಳ ಕ್ಷೇತ್ರದಲ್ಲಿ ಬೆಳೆದ ಅನೇಕ ಜೀವನ ಧರ್ಮದ ತೀರ್ಮಾನಗಳು, ಅದೊಂದು ಕಾಲದ, ಒಂದು ಗುಂಪಿನ, ಅನುಮಾನಗಳನ್ನು ಬಗೆಹರಿಸಿರಬಹುದೆಂದು ಒಪ್ಪಿದರೂ, ಅವು ಚಿರಸತ್ಯವೆಂದು ನಂಬಲಾದೀತೇ ? ಅಂತು ಅವುಗಳ ಹಿಡಿತದಲ್ಲಿ ನಮ್ಮ ಮನಸ್ಸು ಸಿಕ್ಕಿ ಅಂಥ ಪೂರ್ವ ಸಿದ್ಧಾಂತಗಳಿಂದ ಬಂಧಿಸುವಂತೆ ಆಗಬಾರದು.

ಜೀವನದ ಮೇಲೆ ಇಂದು ಅಧಿಕಾರ ನಡೆಸುತ್ತಿರುವ ಅನೇಕ ಮತಧರ್ಮಗಳ ವಿಷಯದಲ್ಲಿ ನಾವು ಚಿಕಿತ್ಸಕ ಬುದ್ಧಿಯನ್ನು ಇರಿಸಿಕೊಳ್ಳಬೇಕು. ಅವು ಯಾವ ಹಿನ್ನೆಲೆ ಯಿಂದ ಜನಿಸಿದುವು. ಈಗಿಗೂ ಅದೇ ತೀರ್ಮಾನ ಬದ್ಧವೇ—ಎಂಬುದನ್ನು ನಾವು ನಿರ್ಣಯಿಸಬೇಕಾಗುತ್ತದೆ. ಈ ಲೇಖನದಲ್ಲಿ, ಮೂಢವಾಗಿ ಬಂದ ನಂಬಿಕೆಗಳು ನನ್ನನ್ನು ಹೇಗೆ ಬಂಧಿಸಿದುವೆಂದೂ, ಅವು ನನ್ನ ಜೀವನದ ಅನುಮಾನಗಳನ್ನು ಬಗೆ ಹರಿಸಿವೆಯೋ ಎಂಬುದನ್ನೂ ಚರ್ಚಿಸುತ್ತೇನೆ. ನನ್ನಲ್ಲಿ, ಪರಂಪರೆಯಿಂದ ಬಂದ ನಂಬಿಕೆ ಗಳನ್ನು ವಿಮರ್ಶೆಗೆ ಗುರಿಮಾಡುವುದು ಸಹ, ನನ್ನ ಸಮನೋಟಕ್ಕೆ ಅತಿ ಅವಶ್ಯ ವಾಯಿತು.

### ನಂಬಿಕೆಯ ತಳಹದಿ

ಮನುಷ್ಯನ ಯೋಚನೆಗಳು ಕೇವಲ ರೂಢಿಯ ಆವರಣದಲ್ಲಿ ಸಿಲುಕಿಬಿಟ್ಟರೆ, ಸ್ವತಂತ್ರ ತೀರ್ಮಾನಗಳೇ ಬರಲಾರವೆಂದೆ. ನಾವು ಒಪ್ಪಿಬಂದ ತತ್ವಗಳೇ ನಂಬಿಕೆಗೆ ತಕ್ಕುವಲ್ಲವಾಗಿದ್ದರೆ, ಆಗ ಅವುಗಳ ಮೇಲೆ ಕಟ್ಟಿದ ತೀರ್ಮಾನಗಳ ಗತಿಯೇನು ?

ಈ ದಿನದಲ್ಲಿ, ನಮ್ಮ ಹಿಂದೆ ಬಾಳಿದ ಜನತೆಯ, ನಾಗರಿಕತೆಗಳ, ಸಂಸ್ಕೃತಿಗಳ ಅನೇಕ ಕುರುಹುಗಳು ದೊರೆಯುತ್ತಿವೆ. ಅವುಗಳಿಂದ ಮನುಷ್ಯನ ಮತಧರ್ಮಗಳ ವಿಚಾರವಾದ ಬೆಳಕು ಬೀಳುತ್ತಿದೆ. ಹಿಂದಿನ ಜನಗಳ ಮನಸ್ಸು ಹೇಗೆ ಹರಿಯಿತು—ಎಂಬುದನ್ನು ತರ್ಕಿಸಬಹುದಾಗುತ್ತದೆ. ಪ್ರಾಚೀನ ಯುಗದವರು ಕೊಟ್ಟ ಬರಹಗಳೂ ಸ್ವಲ್ಪ ಇವೆ ; ಕಟ್ಟಿದ ಗುಡಿಗಳೂ ಹಲವಿವೆ ; ಗೋರಿಗಳು ಮತ್ತಷ್ಟು ಇವೆ. ಮನುಷ್ಯನ 'ಧರ್ಮ'ದ ರಚನೆಗೆ, ಸಾವಿನ ಭೀತಿಯು ಎಷ್ಟೆಷ್ಟು ಕಾರಣವಾಗಿದೆಯೆಂಬುದು ಇವುಗಳಿಂದ ತಿಳಿದುಬರುತ್ತದೆ, ಮತಧರ್ಮಗಳ ಮೇಲೆ ಬಲವಾಗಿ ಹಿಡಿತವಿರಿಸಿದ ಸಾವು, ದೇವರು, ಎಂಬೆರಡು ಶಕ್ತಿಗಳೂ ಹೇಗೆ ಬೆಳೆದುಬಂದಿವೆ ಎಂಬುದನ್ನು ತಿಳಿಯುವ. ಇಂದಿನ ನಮ್ಮ ಮತಗಳು, ಹೇಗೆ ನಿನ್ನಿನ ಈ ನಂಬಿಕೆಗಳಿಂದ ಉತ್ಪನ್ನವಾಗಿವೆ—ಎಂಬುದನ್ನು ಗುರುತಿಸುವುದು ಅವಶ್ಯ.

### ಗೋರಿ

ಮನುಷ್ಯ ದೇವರಿಗಾಗಿ ಗುಡಿ ಕಟ್ಟುವುದರ ಮೊದಲೇನೆ, 'ಗೋರಿ'ಯನ್ನು ಕಟ್ಟಲು ಕಲಿತ. ಯುಗಯುಗದ ಗೋರಿಗಳ ಪರಿಶೀಲನೆಯಿಂದ—ಸಾವನ್ನು ಕುರಿತು ಮನುಷ್ಯನ ಮನಸ್ಸು ಹೇಗೆ ಬಲೆಗೆ ಸಿಲುಕಿತು—ಎಂಬುದರ ಚಿತ್ರ ತಿಳಿಯುತ್ತದೆ. ಇತಿಹಾಸ ಪೂರ್ವಯುಗದಲ್ಲಿ, ಅಂದರೆ ಕಪಿಮನುಷ್ಯ (Ape-man) ಮನುಷ್ಯನಾಗಿ ವಿಕಸಿಸಿ ಬಂದ ಮರುದಿನವೇ, ಸತ್ತವರನ್ನು ಮಲಗಿಸಿ ಗೋರಿ ಮಾಡಲು ಕಲಿತ. ಸುಮಾರು ಒಂದು ಲಕ್ಷ ವರ್ಷಗಳ ಹಿಂದಣದ ಒಂದು ಗೋರಿ ದೊರೆತಿದೆ. ಒಬ್ಬ ತರುಣನ ಶವಸಂಸ್ಕಾರದ ಸ್ಥಳವದು. ಅವನನ್ನು ಅಲ್ಲಿ ಮಲಗಿಸಿದ ಗುರುತಿದೆ. ನಿದ್ರಿಸಿದವನಂತೆ ಮಲಗಿಸಿದ್ದಾರೆ. ಅವನ ತಲೆದಿಂಬಿಗೆ ಚಪ್ಪಟೆ ಕಲ್ಲುಗಳ ರಾಶಿಯಿದೆ. ಅವನ ಪಕ್ಕದಲ್ಲಿ ಅವನ ಕಲ್ಲಿನ ಕೈಗೊಡಲಿ ಇದೆ. ಸುತ್ತಲೂ ಅವನಿಗೆ ಒಪ್ಪಿಸಿದ ಆಹಾರವಿದೆ—ಎತ್ತಿನ ಎಲುಬಿನ ತುಂಡುಗಳು ಅಲ್ಲಿ ಇನ್ನೂ ಉಳಿದಿವೆ.

### ಸಾವು ನಿದ್ರೆಯೋ ?

ಈ ಗೋರಿಯು ಪ್ರಾಚೀನ ಮನುಷ್ಯನಿಗೆ, ಸಾವಿನ ಸಮಸ್ಯೆಯು ಇದಿರಾದ ಬಗೆಯನ್ನು ಹೇಳುತ್ತದೆ. ಸಾವು ದೀರ್ಘ ನಿದ್ದೆಯೋ ಎಂಬ ಅನುಮಾನ. ಆದರೆ ಸತ್ತವನು ಎಚ್ಚರಗೊಳ್ಳಲು ಎಷ್ಟು ದಿನ ಹಿಡಿದೀತೋ—ಹಾಗೆ ಕಾದು ಕಾದು ನಿರಾಶೆಗೊಂಡ ಅನುಭವದಿಂದ, ಅವನನ್ನು ಬಿಟ್ಟುಹೋಗುವಂತಾಯಿತು. ಆದರೂ ಅನುಮಾನವಿದೆ. ಅವನು ಮೇಲಕ್ಕೆದ್ದರೆ ಜೀವನ ನಿರ್ವಹಿಸಬೇಡವೆ ? ಅದಕ್ಕಾಗಿ ಕೊಡಲಿ, ಚಕಮುಕಿ ಕಲ್ಲುಗಳು ಬೇಕು. ಎದ್ದೊಡನೆ ಆಹಾರ ಬೇಡವೇ ? ಅದಕ್ಕೆ ಎಲುಬು ಮಾಂಸಗಳನ್ನು,

ಇರಿಸಿದರು.

ಮಡಿದವನು ಮರಳಿ ಬಂದಾನೆಂಬ ಅನುಮಾನ ಮನುಷ್ಯನಲ್ಲಿ ಬಲವಾಗಿತ್ತು. ಅದಕ್ಕಾಗಿ ಭೀತಿಯೂ ಆಯಿತು. 'ಸಾವಿ'ನ ಶಾವನ್ನೇ ಬಿಡುವ ರೂಢಿ ಹಲವರಲ್ಲಿ ಬಂದಿತು. ವೇದ್ಯರೂ, ಮಲೆಕುಡಿಯರು, ಇನ್ನೂ ಹಲವು ಬಳಗದವರು ಈ ಕೆಲಸ ಮಾಡುತ್ತಾರೆ. ಹಾಗೆ ಸಾವಿಂದ ಮರಳಿದವರು ಬಹು ಕಾಲದ ಬಳಿಕ ಹಿಂದೆ ಬಂದರೇನು ಗತಿ? ತಾವು ಅವರನ್ನು ಅಗಲಿದ ತಪ್ಪಿಗೆ ಸಿಟ್ಟಾದರೇನು ಗತಿ? ಅದಕ್ಕಾಗಿ ತಿಂಡಿ, ತೀರ್ಥಗಳನ್ನು ಇಡಲು ಕಲಿತರು. ಕೆಲವು ಜನವರ್ಗ, ಶವವನ್ನು ತೀರ ಆಳಕ್ಕೆ ಹೂತು ಬಿಟ್ಟರು. ತೀರ ಭಾರವಾದ ಕಲ್ಲುಚಪ್ಪಡಿಗಳನ್ನು ಮೇಲೆ ಹಾಸಿಬಿಟ್ಟರು. ಕೆಲವರು ಹೆಣವನ್ನು ಸುಟ್ಟು ಅಂಥ ಸಂದರ್ಭವನ್ನೇ ನೀಗಿಸಿಕೊಳ್ಳಲು ಪ್ರಯತ್ನಿಸಿದರು.

ಆದರೆ ಕ್ರಮೇಣ—ಮನುಷ್ಯ, ಸಾವೆಂಬುದು ಇಲ್ಲಿನ ಬದುಕಿನ ಕೊನೆ—ಎಂಬುದನ್ನು ಕಲಿಯುತ್ತಾನೆ. ಆಗ, ಅನಂತರ ಏನು?—ಎಂಬ ಪ್ರಶ್ನೆ ಉದ್ಭವಿಸುತ್ತದೆ. ಜೀವ ಎಲ್ಲಿಗೆ ಹೋಗುತ್ತಾನೆ. ಹೇಗೆ ಹೋಗುತ್ತಾನೆ; ಹೇಗೆ ಅಲ್ಲಿ ಬದುಕಬಲ್ಲ—ಎಂಬ ಪ್ರಶ್ನೆಗಳು ಅವನ ಮನವನ್ನು ಆವರಿಸುತ್ತವೆ. ಅನೇಕ ಜನವರ್ಗದವರ ಉತ್ತರಕ್ರಿಯೆಗಳ ಸಂಪ್ರದಾಯಗಳನ್ನು ಪರಿಶೀಲಿಸಿದರೆ ಅವರ ನಂಬುಗೆಯೇನೆಂದು ತಿಳಿಯುತ್ತದೆ.

**ಉತ್ತರ ಕ್ರಿಯೆ**

ಇದೇ ಶರೀರವೇ ಸಾವಿನ ಆಚೆಗೂ ಬಳಕೆಗೆ ಬರತಕ್ಕುದು—ಎಂದು ತಿಳಿದ ಈಜಿಪ್ತಿನ ಜನರು–ಶರೀರಕ್ಕೆ ವಿವಿಧ ಲೇಪಗಳನ್ನು ಸವರಿ, ಅದು ಕೆಡದೆ ಉಳಿಯುವಂತೆ ಮಾಡಿದರು. 'ಮಮ್ಮಿ'ಗಳು ಅಂಥ ಕಥೆ ಹೇಳುತ್ತವೆ. ಸಿದ್ಧಪಂಥದವರಲ್ಲೂ ಈ ನಂಬುಗೆಯಿದೆ. ತಿರುಗಿ–ಸಾವಿನ ಆಚೆಗೆ ಮನುಷ್ಯನ ಆಕೃತಿ ಹೇಗಿದ್ದೀತು–ಎಂದರೆ, ಅಲ್ಲಿಯೂ ಜನತೆಯ ಊಹೆ ಕೆಲಸಮಾಡಿದೆ. ಇದೇ ಭೂಮಿಯ ಜೀವನದ ಪ್ರತೀಕ ಸಾವಿನ ಆಚೆಗಿದೆ. ಇಲ್ಲಿ ಬೇಕಾಗುವ ಆಯುಧ, ಸಹಾಯ, ಆಹಾರ—ಅಲ್ಲಿಯೂ ಬೇಕು. ಪ್ರೇತಗಳನ್ನು ಕಂಡಿರುವೆವೆನ್ನುವವರು, ಅದೇ ಮನುಷ್ಯಾಕೃತಿಯಲ್ಲಿ, ಅವೇ ಉಡುಗೆಯಲ್ಲಿ ಕಂಡಿದ್ದೇವೆ, ಎಂದು ಸಾಕ್ಷಿ ಕೊಟ್ಟಿರುತ್ತಾರೆ. ಇಂಥ ನಂಬುಗೆಗಳ ಫಲಿತ ಆ ಮುಂದಿನ ನಾಗರಿಕತೆಯ ಉತ್ತರಕ್ರಿಯೆಗಳು. ಈಜಿಪ್ತಿನ ಫರೋವರ ಗೋರಿಗಳು ಇಂಥ ನಂಬಿಕೆಯ ಇತಿಹಾಸ. ಬದುಕಿನ ಪ್ರತಿಯೊಂದು ಸಲಕರಣೆ, ಸಾವಿನಾಚೆಗೂ ಬೇಕೆಂಬ ನಂಬಿಕೆಯನ್ನು ಅವು ಚಿತ್ರಿಸುತ್ತವೆ. ಆಳುಗಳು, ಕೃಷಿಕ ಸಾಧನಗಳು, ಕಾಳುಗಳು. ಯಾನ, ವಾಹನಗಳು—ಚಿಕ್ಕ ರೂಪದಲ್ಲಿ ಮೃತನ ಗೋರಿಯಲ್ಲಿ ಸ್ಥಾಪನೆಯಾಗಬೇಕು. ಅವನ ಮಡದಿ, ದಾಸಿಯರೂ ಅಲ್ಲಿ ಬೇಕಾಗಬಹುದು, ಇದರಿಂದ ಬಲವಂತದ ಮೃತ್ಯು ಸಂಸ್ಕಾರ ಬದುಕಿದವರಿಗೂ ಆಯಿತು. ನೀಗ್ರೊ ಬಳಗದವರ ಹಿಂದಣ ಗೋರಿಗಳಲ್ಲಿ ಮೃತನ ಹೆಂಡತಿ ಮಕ್ಕಳನ್ನೂ ಅವನ ಜತೆಗೆ ಕಳುಹಿಸಿದ ಗುರುತಿದೆ. ನಮ್ಮಲ್ಲಿ ರೂಢವಾಗಿ ಮೊನ್ನೆಯ ತನಕ ಉಳಿದ 'ಸತಿ' ಪದ್ಧತಿಯು, ಈ ಹಳೆಯ ನಂಬಿಕೆಯ ಬೆಡಗಿನ ಇನ್ನೊಂದು ರೂಪ.

ಈ ನಂಬಿಕೆಯ ಜತೆಗೆ—ಸತ್ತವನು ಕೆಲವೊಂದು ಕಾಲದ ತನಕ ಗತಿಯಿಲ್ಲದೆ ಅಲೆಯಬೇಕಾಗುತ್ತದೆಂದೂ, ಅವನಿಗೊಂದು ನೆಲೆ ಸಿಗುವ ತನಕ, ಅವನ ಕ್ಷೇಮವನ್ನು ಅವನ ಬಳಗದವರು ನೋಡಿಕೊಳ್ಳುವುದು ಕರ್ತವ್ಯವೆಂದೂ ತಿಳಿಯತೊಡಗಿದರು. ಪಿತೃಪೂಜೆಯ ವಿವಿಧ ರೂಪಗಳು ಇವುಗಳನ್ನು ಚಿತ್ರಿಸುತ್ತವೆ. ಶ್ರಾದ್ಧ ಕಾಲದಲ್ಲಿನ ಕಾಕಪಿಂಡದ ನಂಬಿಕೆ ವರ್ಷಕ್ಕೊಮ್ಮೆ ಎಲ್ಲ ಮೃತರ ಸಲುವಾಗಿ ಅನುಸರಿಸುವ ಹಬ್ಬ, ಹಿಂದಣ ಯುಗದ ದಿನದ ಮೃತರ ಸಲುವಾಗಿ, ಅವರು ತಿರುಗಿ ಬಂದು ಕಾಡುವರೆಂಬ ಭೀತಿಯನ್ನೂ, ನಾವು ಸತ್ತಮೇಲೆ ನಿರ್ಗತಿಕರಾಗಬಾರದೆಂಬ ಭಯವನ್ನೂ ತೋರಿಸುವ ಹಲವು ನಡವಳಿಕೆಗಳು—ಇಂದಣ ನಮ್ಮ ನಾಗರಿಕತೆಯಲ್ಲಿ ಸೇರಿಕೊಂಡಿವೆ. ಈ ವಿಷಯ ದಲ್ಲಿ ಇಂದಿನ ಯುಗದ ಉತ್ತರಕ್ರಿಯೆಗಳು ಪ್ರಾಚೀನ ಮನುಷ್ಯನ ಭಾವನೆಗಳದೇ ಪ್ರತಿ ಬಿಂಬ—ಎಂದರೂ ತಪ್ಪಿಲ್ಲ.

### ದೇವರ ಪ್ರಭಾವ

ಸಾವಿನ ಪ್ರಭಾವ ಹೀಗೆ ಪ್ರಕಟವಾಗುತ್ತಿರುವುದಾದರೆ, ದೇವರ ಪ್ರಭಾವ ಹೇಗೆ ನಮ್ಮ ನಾಗರಿಕತೆ, ಸಂಸ್ಕೃತಿಗಳನ್ನು ಆವರಿಸಿವೆ—ಎಂಬುದನ್ನು ಗಮನಿಸುವ. ಮನುಷ್ಯನ ಮನಸ್ಸು ಮೊದಲು ದೇವರ ಕಡೆಗೆ ತಿರುಗಲು ಜೀವನದಲ್ಲಿ ಘಟಿಸಿದ ಅನೇಕಾನೇಕ ತೊಡಕುಗಳೇ ಕಾರಣ. ಇವುಗಳಿಂದ ಅವನ ಮನಸ್ಸು ಕೆದರಿ ನಮ್ರ ವಾದಂತೆ, ಜೀವನದ ಸೊಗಸುಗಳಿಂದ ಆಗಲಿಲ್ಲ. ಸಾವನ್ನು ಕುರಿತು ಬೆದರಿ ಉಂಟಾದ ನಂಬುಗೆಗಳಷ್ಟೇ ಪ್ರಮಾಣದಲ್ಲಿ, ಹುಟ್ಟು ಅವನನ್ನು ಬೆದರಿಸಲಿಲ್ಲ. ಇಂದು ರೂಢಿಯಲ್ಲಿ ಪೂಜಿತರಾಗಿರುವ ದೇವ, ದೈವ, ದೆವ್ವಗಳ ಆರಾಧನೆಗಳು ದೇವರ ಭೀತಿಯ ಪ್ರಭಾವ ವನ್ನು ಸಾರುತ್ತಿವೆ. ಪ್ರೀತಿಯ ಪ್ರಭಾವ ಬಲು ಸ್ವಲ್ಪವೇ ಈ ಇತಿಹಾಸದಲ್ಲಿ ಎದ್ದು ನಿಲ್ಲುತ್ತದೆ.

ಗುಡುಗು, ನೆರೆ, ಸಿಡುಗು ಮೊದಲಾದ ನೈಸರ್ಗಿಕ ಹಾವಳಿಗಳಿಂದ ಪೀಡಿತವಾದ ನರ ಕುಲ, ತಮಗೂ ಹೆಚ್ಚಿನದಾದ ಯಾವುದೋ ಶಕ್ತಿಗಳ ಕಡೆಗೆ ಮೊರೆಯಿಟ್ಟಿತು. ತನ್ನ ಅಳು ಅಳತೆಗಳ ಎಟುಕಿಗೆ ಮೀರಿದ ಎಲ್ಲ ಶಕ್ತಿಗಳನ್ನು ಮಾನವ 'ವ್ಯಕ್ತಿ'ಯಾಗಿ ಕಲ್ಪಿಸಿ ದನು. ಬಿರುಗಾಳಿಗೆ ಒಂದು ದೇವರು, ಮಳೆಯ ಮಿಂಚಿಗೆ ಒಬ್ಬ, ನೆರೆಗೆ ಇನ್ನೊಬ್ಬ, ಸಿಡುಗಿಗೆ ಒಂದು ದೇವತೆ ; ಬೆಳೆಯ ಸಮೃದ್ಧಿ, ಅಭಾವಗಳಿಗೆ ಕಾರಣವಾದ ಬೇರೊಂದು ದೇವತೆ—ಹೀಗೆ ದೇವ, ದೈವತ್ವಗಳನ್ನು ಆರೋಪಿಸಿ—ಅವರನ್ನು ಮರೆಹೋಗುವ ವಾಡಿಕೆ ಉಂಟಾಯಿತು. ನಿಸರ್ಗದ ಉಪಟಳಗಳ ಮುಂದೆ, ಮಾನವನು ನಿಸ್ಸಹಾಯನು. ಆದುದರಿಂದ ಅವನ್ನು ವಿವಿಧ ರೂಪಗಳಿಂದ ಅವನು ಆರಾಧಿಸಿದುದರಲ್ಲಿ ಆಶ್ಚರ್ಯ ವಿಲ್ಲ. ಆಯಾಯ ದೇವತೆಗಳನ್ನು ಕುರಿತು ಅವನು 'ಬೆಳೆಯನ್ನು ಕೊಡು, ಧನಕನಕ ಗಳನ್ನು ಕೊಡು, ದನ, ಕುರಿಗಳನ್ನು ಕೊಡು, ತನಗೆ ಆಹಾರವಾದ ಮೀನು, ಆಮೆ— ಮೊದಲಾದ ಪ್ರಾಣಿಗಳನ್ನು ಒದಗಿಸು' ಎಂದು ದೇವರನ್ನು ಬೇಡಿದನು. ಆಫ್ರಿಕದ ಮತ ಗಳು, ಆಸ್ಟ್ರೇಲಿಯದ ಮತಗಳು, ನಮ್ಮ ನಾಡಿನ ಹಲವು ಸಂಪ್ರದಾಯಗಳು

ಇದನ್ನೇ ಹೇಳುತ್ತಿವೆ. ಇದರ ಜತೆಗೆ—ಪಿಡಗನ್ನು ತರಬೇಡ, ಕ್ಷಾಮ ತರಬೇಡ–ಎಂಬ ಪ್ರಾರ್ಥನೆಗಳು ನಡೆದುವು. ತಮಗೆ ಅನುಕೂಲವಾದ ಬೆಳೆಗಳು, ಜಾನುವಾರುಗಳು, ದೊರಕಿದಾಗ—ಮನುಷ್ಯ ಕೃತಜ್ಞತೆಯಿಂದಲೂ ಪೂಜೆ ಸಲ್ಲಿಸಿದ್ದುಂಟು ; ಹವಿಸ್ಸನ್ನು ಅರ್ಪಿಸಿದ್ದುಂಟು.

ಈ ದಿನದಲ್ಲೂ ದೇವರ ಆರಾಧನೆಯ ಕ್ರಮ ಬಹುವಾಗಿ ಹೀಗೇನೆ ನಡೆದಿದೆ. ಆಸ್ಟ್ರೇಲಿಯದವ ಎಮು ದೇವತೆಯನ್ನೂ, ಹಾದಿಗೊಬ್ಬ ದೇವತೆಯನ್ನು ಪೂಜಿಸುತ್ತಾನೆ. ಸಮಕಾಲೀನ ಪುರಾಣಗಳ (Contemporary Mythology) ಪರಿಶೀಲನೆಯು ಈ ಸಂಗತಿಯನ್ನು ಹೇಳುತ್ತದೆ. ನಮಗೆ ಇತರ ನಾಗರಿಕತೆಗಳನ್ನು ಕಂಡು—ಅವುಗಳ ದೇವಾನು ದೇವತೆಗಳನ್ನು ಕಂಡು, ನಗು ಬಂದೀತು. ಆ ಜನರಿಗೆ, ನಮ್ಮ ವಿನಾಯಕ, ಚಂದ್ರ, ಇಂದ್ರರು ಅದೇ ಬಗೆಯ ನಗುವಿಗೆ ಈಡಾದಾರು. ನಮ್ಮ ವೈದಿಕ ಯುಗದ ಇಂದ್ರ, ವರುಣ, ಮರುತರೆಲ್ಲ ಮನುಷ್ಯನ ಭೀತಿಯ ಮೂರ್ತಿ ಮತ್ತ ರೂಪಗಳಲ್ಲದೆ ಬೇರೆಯಲ್ಲ. ಮಾರಿಯಮ್ಮನ ಆರಾಧನೆ ಏಕೆ ನಡೆಯುತ್ತಿದೆ—ಎಂದು ನೋಡಿದಲ್ಲಿ, ನಮ್ಮ ನಾಡಾದರೂ ಈ ಭೀತಿಜನ್ಯ ದೇವರುಗಳ ತವರೂರು ಎನುವುದರಲ್ಲಿ ಅನು ಮಾನವಿಲ್ಲ.

**ದೈವದೊಡನೆ ಸಂಬಂಧ**

ಮನುಷ್ಯನು ಈ ಬಗೆಯಲ್ಲಿ ತನ್ನ ದೈವಗಳನ್ನು ಕಲ್ಪಿಸಿಕೊಂಡ ಬಳಿಕ–ತನ್ನ ಕುಲಕ್ಕೂ ಅವರಿಗೂ ಒಂದು ಸಂಬಂಧ ಹುಡುಕ ಬೇಕಾಗುತ್ತದೆ. ತನ್ನ ಕುಲದವರಲ್ಲ ದವರೊಡನೆ ಬೇರೆ ಸಂಬಂಧಕಲ್ಪಿಸಬೇಕು. ಅವನ ಈ ಎರಡನೆಯ ಏರ್ಪಾಡಿನಿಂದ, ನಮ್ಮ ನಂಬಿಕೆಗಳು, ಕೇವಲ ನಮ್ಮ ಖಾಸಗಿ ಪ್ರಪಂಚವಾಗಿ ಉಳಿಯದೆ, ಇತರ ಬದುಕಿನ ಜೀವ ಜೀವಗಳೊಳಗಿನ ಸಂಬಂಧವನ್ನು ನಿರ್ಣಯಿಸುತ್ತವೆ. ಈ ವಿಚಾರವಾದ ಕಟ್ಟುಕಟ್ಟಳೆಗಳು ಬಲವಾಗಿ, ಸಾಂಪ್ರದಾಯಿಕವಾಗಿ ಬೆಳೆದು ಬಂದು, ಸಮಾಜದ ಮನ ಸ್ಸಿನ ಮೇಲೆ ಅಧಿಕಾರವನ್ನೂ ನಡೆಯಿಸುತ್ತವೆ. ಇವುಗಳ ಪ್ರಭಾವದಿಂದ ಮನಸ್ಸು ಸ್ವತಂತ್ರವಾಗಿ ವಿಚಾರಿಸಲು ಅಂಜುತ್ತದೆ. ಮನಸ್ಸು ದುರ್ಬಲವಾಗುತ್ತದೆ. ತಮ್ಮ ನಂಬಿಕೆಗಳಿಂದ ಉಳಿದ ಜೀವಿಗಳಿಗೆ ಕಷ್ಟವಾದರೂ, ಒಟ್ಟು ಹಿತದ ದೃಷ್ಟಿಯೂ ಅದ ರಿಂದ ಲೋಪವಾಗುತ್ತದೆ. ಪ್ರತಿಯೊಂದು ಮನುಷ್ಯ ಕುಲ ಈ ಬಗೆಯಲ್ಲಿ ಅನೇಕ ನಂಬಿಕೆಗಳನ್ನು ಕಟ್ಟಿಕೊಂಡು ಬಂದಿದೆ. ಅವೆಲ್ಲವುಗಳು ಆಯಾ ಪಂಗಡದವರ ಹಿತಕ್ಕಾಗಿ ಏರ್ಪಟ್ಟವುಗಳಾಗಿ ಕಂಡರೂ, ಅನ್ಯ ಪಂಗಡಗಳ ಅಹಿತಕ್ಕೂ ಕಾರಣನಾಗಿ ಬಂದಿವೆ. ನಾನು ಬೆಳೆದು ಬಂದ ಸಮಾಜದ ಅನೇಕ ನಂಬಿಕೆಗಳನ್ನು ಇಲ್ಲಿ ಉದಹರಿಸುತ್ತೇನೆ. ಅವುಗಳ ಜತೆಗೆ ಇತರ ಸಮಾಜಗಳ ನಂಬಿಕೆಗಳನ್ನು ತುಲನೆ ಮಾಡುವ. ಆಗ ಸಂಪ್ರ ದಾಯದ 'ದೇವರು'ಗಳು, ನಮ್ಮ ಮನಸ್ಸಿನ ಮೇಲೆ ನಡೆಯಿಸುತ್ತಿರುವ ಹಾವಳಿಯ ತಿಳಿವು ಉಂಟಾಗಬಹುದು. ಅಲ್ಲದೆ–ಜೀವನವನ್ನು ತಿಳಿಯಬೇಕಾದವನು, ಅವುಗಳ ಶೃಂಖಲೆಯಿಂದ ದೂರಾಗಬೇಕಾದ ಅವಶ್ಯಕತೆಯೂ ಸ್ಪಷ್ಟವಾದೀತು.

## ಮಾನವನೇ ಶ್ರೇಷ್ಠ !

ಎಲ್ಲ ಜೀವಿಗಳಿಗಿಂತ ಮನುಷ್ಯನೇ ಶ್ರೇಷ್ಠ—ಎಂಬ ಭಾವನೆಯು ಸಾಮಾನ್ಯ ಯಾವತ್ತು ಮತಗಳ ತಿರುಳಾಗಿದೆ. ಅವನ ಶಕ್ತಿ, ಸಾಮರ್ಥ್ಯಗಳು—ಹಿರಿಯವು ಎಂದು ಒಪ್ಪಬಹುದಾದರೂ, ನಿಸರ್ಗದ ಉದ್ದೇಶವನ್ನು ನೆರವೇರಿಸುವುದರಲ್ಲಿ, ಅವನು ಇತರ ಜೀವಿಗಳಿಗಿಂತ ಹೇಗೆ ಯಶಸ್ವಿಯಾಗಿದ್ದಾನೆಂದು ಸ್ಪಷ್ಟವಾಗುವುದೇ ? ಬದಲು ಈ ಭಾವನೆಯಿಂದಾಗಿ ಇತರ ಜೀವಿಗಳು ತಮ್ಮ ಲಾಭಕ್ಕಾಗಿ ಇವೆಯೆಂದು ತಿಳಿಯುವು ದರಿಂದ, ಅವುಗಳ ಹಾನಿಗೆ ಕಾರಣವಾಗಿಯೂ ಇದ್ದಾರೆ.

ಆರ್ಯರ ಯಜ್ಞಯಾಗಾದಿಗಳು, ಮನುಷ್ಯನ ಹಿರಿಮೆಯನ್ನು ಸಾಧಿಸುವ ಸಲುವಾಗಿ, ಅವನಿಗೆ ಸ್ವರ್ಗ, ಮೋಕ್ಷಗಳನ್ನು ದೊರಕಿಸುವ ಸಲುವಾಗಿ, ಪಶುಪ್ರಾಣಿ ಗಳ ಹಾನಿಗೆ ಹೇಗೆ ಕಾರಣವಾದುವು—ಎಂಬುದನ್ನು ಸ್ಥಾಪಿಸುತ್ತವೆ.

ಬ್ರಹ್ಮನಿಂದ ನಾಲ್ಕು ವರ್ಣಗಳು ಜನಿಸಿದವು. ಅವುಗಳಲ್ಲಿ ಬ್ರಾಹ್ಮಣನೇ ಶ್ರೇಷ್ಠನು—ಎಂಬ ಆರ್ಯರ ಭಾವನೆಯನ್ನು ಪರಿಶೀಲಿಸುವ ; ಮನುಷ್ಯ ಮನುಷ್ಯರಲ್ಲಿನ ಸಂಬಂಧವನ್ನು ನಿರ್ಣಯಿಸುವ ಈ ನಂಬುಗೆಯಿಂದ, 'ಹರಿಜನ'ರು ಮನುಷ್ಯರ ಪಕ್ಕನ್ನೇ ಕಳೆದುಕೊಂಡರು. ಆರ್ಯರ ಈ ನಂಬುಗೆಯಿಂದ, ಅವರ ಕುಲದ ಹೊರಗಿನ ದ್ರಾವಿಡರೂ ದಸ್ಯುಗಳೂ ಅನಿಸಿಕೊಂಡರು.

ಕ್ರಿಶ್ಚನರಲ್ಲಿಯೂ ಇದೇ ತೆರನ ಭಾವನೆಯಿದೆ. ಅವರ ಸ್ವರ್ಗ ನರಕಗಳೆಲ್ಲ ಕೇವಲ ಕ್ರೈಸ್ತರ ಸಲುವಾಗಿ ಮೀಸಲಾದುವು. ಮೋಸೆಸನು ಯೆಹೂದಿಯರ ಸಲುವಾಗಿಯೇ ಜನ್ಮವೆತ್ತಿದನು. ಅವರೇನೆ ದೇವರ ಆಪ್ತ ಕೂಸುಗಳು. ಶಿಂಟೋಮತದವರ ಪಾಲಿಗೆ ಜಪಾನಿಯರೇ ದೇವಪುತ್ರರು. ಇಂಥ ನಂಬುಗೆಗಳಿಂದ ಉಳಿದ ಜನವರ್ಗದ ಸ್ಥಾನಮಾನ ಗಳು ಎಷ್ಟು ಹಾವಳಿಗೆ ಗುರಿಯಾಗಿಲ್ಲ.

## ತನ್ನ ದೇವರು

ಮೋಸೆಸನನ್ನು ಇಸ್ರೇಯಲರ ಉದ್ಧಾರಕ್ಕಾಗಿ ದೇವರು ಕಳುಹಿದನಂತೆ. ಆಗಿನ ದಿನಗಳಲ್ಲಿ ಇಸ್ರೇಯಲರು ಐಗುಪ್ತದಲ್ಲಿ ಗುಲಾಮರಾಗಿದ್ದರು. ಅವರನ್ನು ಕಾಯಲು ಮೋಸೆಸನನ್ನು ದೇವರು ಹುಟ್ಟಿಸಿ "ಈಗ ನೀನು ಬಾ, ಪರೋವನಲ್ಲಿಗೆ ಹೋಗಿ, ಅಲ್ಲಿಂದ ನನ್ನ ಮಕ್ಕಳಾದ ಇಸ್ರೇಯಲರನ್ನು ಈಜಿಪ್ಟಿನಿಂದ ಬಿಡುಗಡೆಗೊಳಿಸು"— ಎಂದು ಆಜ್ಞಾಪಿಸಿದನಂತೆ.

ಜರತುಷ್ಟ್ರನು ತನ್ನ ಸಂಚಾರಿ ಇರಾನಿ ಜನಗಳ ಗುರುವಾಗಿದ್ದ. ಅವನ ಕಣ್ಣಿಗೆ ತನ್ನ ಜನರ ಉದ್ಧಾರವು ಮುಖ್ಯವಾಗಿತ್ತು. ಅವರನ್ನು ಕಾಡುತ್ತಿದ್ದ ತುರಾನಿಯರಿಂದ ಅವರು ತುಂಬ ಹಿಂಸೆಗೆ ಗುರಿಯಾಗಿದ್ದರು. ಅವನ ಮಾತುಗಳಲ್ಲಿ ಇದು ಒಂದು—

"ನಾನು ನನ್ನ ಜನಗಳಿಗೆ ಹೀಗೆಂದು ಬೋಧಿಸುತ್ತೇನೆ—ಅವರು ನಂಬುತ್ತಿರುವ ಕಟ್ಟಲೆಯ ಭೀತಿಯ ದೇವರುಗಳಿಲ್ಲ—ಸುಳ್ಳಿನ ದೇವತೆಯಾದ ಅಂಗ್ರ ಮನ್ಯುವಿನ ದೂತ ರೆನ್ನುತ್ತೇನೆ. ನಮ್ಮನ್ನು ಕಾಡುತ್ತಿರುವ ತುರಾನಿ ಜನರು, ಈ ದುಷ್ಟ ದೇವತೆಯಿಂದ

ಕಳುಹಲ್ಪಟ್ಟವರು. ಇನ್ನು ಶೀಘ್ರದಲ್ಲೇ ಸತ್ಯ, ತೇಜಸ್ಸುಗಳ ಪರಮ ದೇವತೆಯಾದ ಅಹುರ ಮೂಜನಿಂದ ಅವರು ಪೂರ್ಣವಾಗಿ ಸೋಲಿಸಲ್ಪಡುವರು.”

ಹಿಬ್ರೂವಂಶದ ಇನ್ನೊಬ್ಬ ಗುರುವು ಜರೇಮಿಯನೆಂಬವನು. ಅವನ ಜನರು ಇಥಿಯೋಪಿಯ, ಇಜಿಪ್ತುಗಳ ದ್ವೇಷಿಗಳು. ಆ ಜನರ ದಂಡನೆಗಾಗಿ ದೇವರು ನುಡಿದ ನುಡಿಗಳು ಇವುಗಳೆಂದು ಜರೇಮಿಯನೆನ್ನುತ್ತಾನೆ.

“ಆದುದರಿಂದ ಅತಿಥಿಗಳ ಪ್ರಭುವಾದವನು ಹೀಗೆನ್ನುತ್ತಾನೆ”. ನೀವು ನನ್ನ ಮಾತುಗಳನ್ನು ಗಮನಿಸಿಲ್ಲ.

“ಪ್ರಭುವೆನ್ನುತ್ತಾನೆ: ನಾನು ಉತ್ತರದ ಯಾಪತ್ತು ಕುಟುಂಬಗಳನ್ನು ಕರೆದು ಕೊಳ್ಳುತ್ತೇನೆ. ಬೆಬಿಲಾನಿನ ದೊರೆ, ನನ್ನ ಸೇವಕ ನೆಬು ಚೆದ್ನಾರನನ್ನು ಕೊಂಡು ಈ ನಾಡಿಗೂ, ಅಲ್ಲಿನ ಜನರಿಗೂ ಇದಿರಾಗಿ ಕಾದಿಸುತ್ತೇನೆ. ಸುತ್ತಲಿನ ಜನಾಂಗಗಳ ಮೇಲೆಯೂ ಬಿಡುತ್ತೇನೆ. ಅವರನ್ನು ಪೂರ್ಣ ನಾಶಮಾಡಿ, ಅವರ ನಾಡನ್ನು ಉರಿಯುವ ಮಸಣವಾಗಿಸುತ್ತೇನೆ”—ಹೀಗೆಂದು ಹಿಬ್ರೂ ಜನರ ಹಿತಕ್ಕಾಗಿ, ಈಜಿಪ್ಟಿನ ಮೇಲಿನ ದ್ವೇಷವನ್ನು ಆತ ಸಾರುತ್ತಾನೆ. ಈ ಕೆಲಸವನ್ನು ಮಾಡುವ ಬೆಬಿಲಾನಿನ ದೊರೆಯು ದೇವರ ಸೇವಕನೆನಿಸುತ್ತಾನೆ.

ಈ ಬಗೆಯಲ್ಲಿ ನಾನು ಬೆಳೆದಿರುವ ಸಂಸ್ಕೃತಿಯಲ್ಲಿನ ದೇವರುಗಳೂ ವರ್ತಿಸಿದರು. ಶಿವಪರವಾದ, ವಿಷ್ಣುಪರವಾದ, ಪುರಾಣಗಳು ದೇವರನ್ನು ಇನ್ನಷ್ಟು ಜಾತೀಯ ಪ್ರಚಾರಿಗಳನ್ನಾಗಿ ಮಾಡಿದುವು. ಈ ಆವರಣದಲ್ಲಿ ಬೆಳೆಯುತ್ತಿರುವ ಜನಗಳ ದೃಷ್ಟಿ ಹೇಗಿರಬೇಕು ? ಶೈವನು ವೈಷ್ಣವನನ್ನು ದೂಷಿಸುವುದು ಸ್ವಾಭಾವಿಕವಾಗುತ್ತದೆ. ಒಮ್ಮೆ ಅಷ್ಟು ಮಾಡದ ನಮ್ರತೆ ಅವನಲ್ಲಿ ಬಂದರೂ, ಅವನು ವೈಷ್ಣವರಲ್ಲೋ, ಜೈನರಲ್ಲೋ ಸದ್ಭಾವನೆಗಳನ್ನಿರಿಸಿಕೊಂಡಿರಲಾರ. ತನ್ನ ನಂಬಿಕೆಗಳಿಗೆ ವಿರೋಧವಾಗಿ ಬರುವ ಇನ್ನಾವ ಮತದ ನಂಬಿಕೆಗಳಿಗೂ ಅವನ ಮನಸ್ಸು ಕದಲದು.

**ಪಲರು ಸಲ್ಲರು**

ಮನುಷ್ಯ, ದೇವರನ್ನು, ದೇವತೆಗಳನ್ನು ಆರೋಪಿಸಿದ್ದಾಯಿತು; ತನ್ನನ್ನು ತನ್ನ ಜನರನ್ನು ಅವನ ಆರಿಸಿದ ಶಿಷ್ಯರನ್ನಾಗಿ ಮಾಡಿಕೊಂಡಾಯಿತು. ಇನ್ನು ಇವರ ನಡುವಣ ಪ್ರಪಂಚಕ್ಕೊಂದು ಯಥಾ ಯೋಗ್ಯಸ್ಥಾನ ಕಲ್ಪಿಸಬೇಕಾಗುತ್ತದೆ. ಮನುಷ್ಯನ ಕೆಳಗಿನ ಅಂತಸ್ತಿನಲ್ಲಿ, ಪಶುಪ್ರಾಣಿಗಳನ್ನು ತಂದಿರಿಸುತ್ತಾನೆ. ವಿಧರ್ಮೀಯರನ್ನೂ ತಂದಿರಿಸುತ್ತಾನೆ. ಕೆಳಗಿನ ಜೀವಗಳು ಈ ಮೇಲಿನ ಜೀವರ ಸಲುವಾಗಿ ನಿರ್ಮಿತವಾದುವೆಂದು ಸಮಾಧಾನ ಹೊಂದುವ ಕ್ರಿಸ್ತೀಯರುಂಟು. ಜೀವನದಲ್ಲಿನ ಎಲ್ಲ ಅಂತಸ್ತುಗಳನ್ನು ಈ ಬಗೆಯಿಂದ ವಿವರಿಸಲಾರದೆ, ಆ ವಿವಿಧ ಜನ್ಮಗಳು ಅವರವರ ಕರ್ಮಫಲದಿಂದಾಯಿತು—ಎಂಬವರುಂಟು. ಈ ತರ್ಕಸರಣಿಯಲ್ಲಿ—ವ್ಯಕ್ತಿಗೆ ಒಂದು ಪ್ರತ್ಯೇಕ ಆತ್ಮ, ಆ ಆತ್ಮಕ್ಕೆ ಪರಿಮಿತಿಗಳು ; ಹುಟ್ಟುಸಾವಿನ ಕಾರಣಗಳು—ಇವನ್ನೆಲ್ಲ ವಿವರಿಸುವಂತಾಯಿತು.

ನನ್ನ ಪಾಲಿಗೆ ಎದುರಾದ ಜೀವನದ ನಂಬಿಕೆಗಳನ್ನು ಕುರಿತು ಈಗ ಹೇಳುತ್ತೇನೆ. ಅವೇನು ಹೊಸವಲ್ಲ. ನಮ್ಮೆಲ್ಲರಿಗೂ ಇರುವವೆ. ಈ ನಂಬಿಕೆಗಳನ್ನು ಹಿರಿದಾಗಿ ಯೋಚಿಸುವುದು ಮಾತ್ರ ತೀರ ಕಷ್ಟ. ಇವುಗಳ ಮಿತಿಯನ್ನು ನಾನು ಮುಂದೆ ವಿವರಿಸಬೇಕಾದುದರಿಂದ, ಅವುಗಳ ವಿಚಾರವಾಗಿ ತುಸು ವಿವರಿಸದೆ ಇರಲಾರೆ.

**ಜನ್ಮಕ್ಕೆ ಕಾರಣ ?**

ಸುತ್ತಲಿನ ಜೀವಸೃಷ್ಟಿ ನೋಡಿ ನಮ್ಮ ಜನ್ಮ ಯಾತಕ್ಕಾಯಿತೆಂಬ ಪ್ರಶ್ನೆಯೇಳುತ್ತದೆ. ಆ ವಿಷಯವಾದ ರೂಢಿಯ ನಂಬುಗೆಗಳಾವುವೆಂದು ತಿಳಿಯುವ, ಜನ್ಮವೇ ಕರ್ಮದಿಂದ ಆಯಿತೆಂದೂ ಹಿಂದಿನ ಪಾಪ ಪುಣ್ಯಕ್ಕೆ ಅನುಸಾರವಾದ ಜನ್ಮ ಬರುತ್ತದೆಂದೂ ಇದರಿಂದ ಜೀವಿಗಳಲ್ಲಿನ ವಿವಿಧ ಭಿನ್ನತೆಗಳನ್ನು ವಿವರಿಸಿದಂತಾಯಿತೆಂದೂ ಒಂದು ಸಮಾಧಾನವಿದೆ. ಕ್ರಿಸ್ತಿಯರ ನಂಬುಗೆಯಲ್ಲಿ—ಈ ಮೊದಲಿನ ಜನ್ಮವೇ ಇಲ್ಲ, ಮುಂದಿನ ಜನ್ಮವೂ ಇಲ್ಲ. ಅವರಲ್ಲಿ ಬೆಳೆದ ಕೂಸು ನಮ್ಮ ಕರ್ಮ ಸಿದ್ಧಾಂತವನ್ನು ತಿಳಿಯಲು ಅಸಮರ್ಥವಾದೀತು. ನಮ್ಮ ಸಿದ್ಧಾಂತವೂ ಕೆಲವೊಂದು ದೂರ ನಮ್ಮನ್ನು ಸಾಗಿಸುತ್ತದೆ. ಮುಂದೆ ಆ ತರ್ಕ ನಿಲ್ಲುತ್ತದೆ. ಕರ್ಮದಿಂದ ಜನ್ಮವಾದರೆ, ಮೊದಲು, ತೀರ ಮೊದಲು ಏಕೆ ಜನ್ಮ ಬಂದಿತು ?—ಎಂದರೆ ಉತ್ತರವಿಲ್ಲ. ಜೀವ, ಕರ್ಮಗಳೆರಡು ಅನಾದಿವಸ್ತುಗಳೆಂದು ಜೈನಮತ ಹೇಳಿದೆ. ಜೀವನದ ಓಡಾಟವೆಲ್ಲ—ಪರಮಾತ್ಮನ ಲೀಲೆ—ಎಂದು ಹಿಂದೂ ಧರ್ಮ ಹೇಳಿತು. ತಿರುಗಿ ಆ ದೇವರೇ ಉಂಟುಮಾಡಿದ ತೊಳಲಾಟದಿಂದ ಪಾರಾಗುವುದು ಕರ್ತವ್ಯವೆಂದು ಅದೇ ಧರ್ಮ ಸಾರಿತು !

**ದೇವರುಗಳ ವೈವಿಧ್ಯ**

ಹೀಗೆ ಪಾರಾಗಿ ಮಾಡುವುದೇನು ? ಪರಮಾತ್ಮನನ್ನು ಸೇರುವುದು, ಅದೇ ಮುಕ್ತಿ. ಅಲ್ಲಿಂದ ಮುಂದೆ ಹುಟ್ಟುಸಾವುಗಳಿಲ್ಲ. ತಿರುಗಿ ಈ ಪರಮಾತ್ಮನಾರು — ಎಂದರೆ ? ಎಷ್ಟು ಜನಗಳಿರುವರೋ, ಎಷ್ಟು ಮನಸ್ಸುಗಳಿರುವವೋ ಅಷ್ಟು ದೇವರೆಂದರೂ ತಪ್ಪಿಲ್ಲ. ಒಂದೊಂದು ಗುಂಪಿನವರು ಅವನನ್ನು ಒಂದೊಂದು ಬಗೆಯಾಗಿ ಹೇಳಿದರು ; ತಿಳಿದರು ; ಕರೆದರು. ಪ್ರಾಚೀನ ಐಗುಪ್ತರ ಪಾಲಿಗೆ ಅವನು ಅಮ್ಮನ್–ರಾ, ಅಕ್ನಾಟನನ ಪಾಲಿಗೆ ಎಟನ್ ಅಥವಾ ಸೂರ್ಯಶಕ್ತಿ. ನಾನು ಬೆಳೆದ ಗುಂಪಿನ ಜನರಿಗೆ ವಿಷ್ಣು, ಬ್ರಹ್ಮ, ಶಿವರು ; ತೀರ ಸ್ಥಳಿಕ ಸ್ಥಳಿಕ ಸೌಲಭ್ಯಕ್ಕಾಗಿ—ಚನ್ನಕೇಶವ, ಮಲ್ಲಿಕಾರ್ಜುನ, ಬಾಲಾಜಿ, ಬೆಟ್ಟದ ಅಯ್ಯ ಇಂಥೆಲ್ಲ ದೇವರುಗಳಿದ್ದಾರೆ.

**ನಡವಳಿಕೆ**

ಈ ತೆರನ ದೇವರನ್ನು, ಅವನಿಗೂ ಪ್ರಪಂಚಕ್ಕೂ ಇರುವ ಸಂಬಂಧಗಳನ್ನು ನಿರ್ಣಯಿಸಿ ಆದ ಬಳಿಕ, ಮನುಷ್ಯನು ದೇವರ ಕಡೆಗೆ ಯಾವ ನಡವಳಿಕೆಯನ್ನು ಇಟ್ಟುಕೊಂಡಿರಬೇಕು ಎಂಬ ವಿಚಾರ ಬರುತ್ತದೆ.

'ಅವನೇ ಏಟನ್—ಉಳಿದವರು ಮಿಥ್ಯ' ಎಂದಿತು ಒಂದು ಜನ. 'ದೇವರು ಒಬ್ಬನೇ, ಮಹಮ್ಮದನು ಅವನ ಪ್ರವಾದಿ' ಎಂದಿತು ಒಂದು ಬಳಗ ; ಮತ್ತೊಂದರಲ್ಲಿ,

ಮೋಸೆಯೇ ದೇವರ ದೂತ. ಶಿಂಟೋ ಮತದವರಲ್ಲಿ ಜಪಾನಿ ಅರಸು ಆ ಗದ್ದುಗೆ ಏರುತ್ತಾನೆ. ಹೀಗೆ ದೇವರು, ಅವನ ಪ್ರತಿನಿಧಿಗಳು ಏರ್ಪಟ್ಟರು. ಮುಂದೆ ನಮ್ಮ ಕರ್ತವ್ಯವೆಂದರೆ—ಅವನ ಪ್ರವಾದಿಗಳೋ, ಆಯಾಯ ದೇವರುಗಳ ಪ್ರತಿನಿಧಿಗಳೋ ಅಂದಂತೆ ವರ್ತಿಸುವುದು; ದೇವನಾದವನನ್ನು ಪೂಜಿಸುವುದು, ಅವನನ್ನು ಸೇರಲು ಯತ್ನಿಸುವುದು.

**ಪರಲೋಕದ ನೀತಿ**

ಕ್ರಿಸ್ತಿಯರನ್ನು ಬರಮಾಡಿಕೊಳ್ಳಲು ಪರಲೋಕದಲ್ಲಿ ಯಹೋವನಿದ್ದಾನೆ. ಯಹೂದಿಯರಿಗೆ ಯಹೋವನಿದ್ದಾನೆ. ಶರಣರಲ್ಲದವರು ಶಿವನನ್ನು ಸೇರಲಾರರು. ವೈಷ್ಣವನು ಶಿವನ ಬಳಿಗೆ ಸುಳಿಯಲಾರನು. ವಿಷ್ಣುವಿನ ಬಳಿಗೆ ಶೈವನು ಬರುವಂತಿಲ್ಲ. ದೈವ ವಾದಿತ್ವದ ಜತೆಗೆ ಇಂಥ ಸಂಕುಚಿತ ವೃತ್ತಿಯೂ ಬೆಳೆಯಿತು.

**ಒಲಿಸುವ ಬಗೆ**

ಈ ದೇವರುಗಳನ್ನು ಒಲಿಸುವ ಬಗೆ ಯಾವುದು—ಎಂದರೆ ಪೂಜೆ, ಭಜನೆ, ಧ್ಯಾನ ಮನನ. ತಾನು ಬೆಳೆದು ಬಂದಿರುವ ಜಗತ್ತನ್ನು ಕಡೆಗಣಿಸಿ, ಅಲ್ಲಗಳೆದು ಅವನೇ ನಿಜವೆಂದು ಹಂಬಲಿಸುವುದು ಈ ಪೂಜೆಯ ಸಾರ. ಈ ಪೂಜೆಯ ರೀತಿಗಳೂ ಅನೇಕ ವಾಗಿವೆ. ಭಜನೆಯಿಂದಲೇ ವಿಠೋಬನು ಪ್ರೀತನಂತೆ. ರುದ್ರಾಭಿಷೇಕಗಳಿಗೆ ಶಿವನು ವಶ್ಯನು ; ಕಾಫಿರರನ್ನು ಸ್ವಮತೀಯರನ್ನಾಗಿ ಮಾಡಿದರೆ ಅಲ್ಲಾ ಒಲಿಯಬಹುದು ........ಇಂಥವೇ ನೂರಾರು ನಂಬುಗೆಗಳು ಜನರ ಗುಂಪನ್ನು ನಡೆಯಿಸುತ್ತಿವೆ. ಇದ ರಿಂದ ವ್ಯಕ್ತಿಗೆ—ಜನ್ಮದ ಕೊನೆಗೆ, ಸಾವಿನಾಚೆಗೆ ಸ್ವರ್ಗ ದೊರಕಬಹುದು ; ಮುಕ್ತಿಯೇ ಪ್ರಾಪ್ತಿಸಬಹುದು. ತುಕಾರಾಮನಂಥವರು ಸಾವು ಬರುವ ಮುನ್ನವೇ ಸಶರೀರಿಗಳಾಗಿ ಅಂತರ್ಧಾನರಾದುದುಂಟು. ಇವೆಲ್ಲ ಪುರಸ್ಕಾರದ ವಿಷಯಗಳಾದುವು. ಅಂಥದನ್ನು ಬಯಸದ ಆಲಸಿಯೊಬ್ಬನಿದ್ದರೆ, ಬರಿದೆ ಅವನನ್ನು ಬಿಡುವುದಿಲ್ಲ. ಅವನ ಸಲುವಾಗಿ ನರಕ ರಚಿಸಿದ್ದಾರೆ. ಕ್ರಿಸ್ತೀಯರಲ್ಲೂ, ಮುಸಲ್ಮಾನರಲ್ಲೂ ಚಿರ ನರಕವಿದೆ ; ಎಂದೆಂದೂ ಸೈತಾನನ ರಾಜ್ಯವೇ ಅಲ್ಲಿ. ಬಾಳ್ವೆಯ ೬೦–೮೦ ವರ್ಷಗಳಲ್ಲಿ ಮಾಡಿದ ಅಪರಾಧಗಳಿಗೆ ಯಾವತ್ಕಾಲದ ಶಿಕ್ಷೆ! ಇಲ್ಲವೆ ಹಿಂದೂಗಳಂತೆ, ಅವರ ಪಾಪ ತೀರುವ ತನಕ ದಂಡನೆ ; ವಿವಿಧ ರೂಪಗಳ ದಂಡನೆ. ಕರ್ಮಫಲವಾದ ಪಾಪಪುಣ್ಯಗಳನ್ನು ಸ್ವರ್ಗ ಇಲ್ಲವೆ ನರಕ ದಲ್ಲಿ ಕಳೆದ ಮೇಲೂ ಜೀವನು ಹುಟ್ಟುವುದು ತಪ್ಪುವುದಿಲ್ಲ ; ತಿರುಗಿ ಹುಟ್ಟುತ್ತಾನೆ. ಮೊದಲು ಕರ್ಮಫಲದಿಂದ ಹುಟ್ಟಿದನಂತೆ. ಅನಂತರ ಅವನು ಹುಟ್ಟಿದುದರಿಂದ ತಿರುಗಿ ಕರ್ಮಮಾಡಿ, ಹೆಚ್ಚಿನ ತೊಳಲಾಟಕ್ಕೆ ಗುರಿಯಾಗುತ್ತಾನೆ. ಈ ಭೀಕರ ಪರಿಸ್ಥಿತಿ ಯನ್ನು ಯಾವ ಮನಸ್ಸು ಇದಿರಿಸೀತು ? ಈ ಬೆದರಿಕೆಯ ಮೇಲೆ ನಿಂತ ಜೀವನದಲ್ಲಿ, ದೇವರೂ ಬೆರ್ಚಪ್ಪನಲ್ಲದೆ ಬೇರೇನು ? "ನಮ್ಮ ತಪ್ಪನ್ನು, ದೌರ್ಬಲ್ಯವನ್ನು ಕ್ಷಮಿಸು, ಕಾಪಾಡು" ಎಂದು ಕಣ್ಣೀರು ಕರೆಯುವುದೇ ಭಕ್ತನ ಕೆಲಸ. ಕಂಬನಿಯಿಂದ ಜೊಗಸೆ ತುಂಬಿದರೂ, ದೈವಕ್ಕೆ ಕರುಣೆಯೂ ಬರಲಾರದು. ಈ ದೈವದ ಒಲವು, ನಿವು

ಪ್ರಪಂಚದಲ್ಲಿ ಮಗ್ನರಾಗಿರುವಷ್ಟು ಕಾಲ, ನಿಮ್ಮ ಮೇಲೆ ಬೀಳದು—ಎಂಬುದು ನಂಬಿಕೆ.

**ಜೀವನದ ಮೇಲೆ ತಾತ್ಸಾರ**

ದೈವದೃಷ್ಟಿಯು ಹೀಗೆ ಬೆದರಿಕೆಯಿಂದ ಪೀಡಿತವಾದುದು ಮಾತ್ರವಲ್ಲ, ಮೇಲೆ 'ದೇವರು' ಜೀವನವನ್ನು ಕುರಿತು ತಾತ್ಸಾರ ಹುಟ್ಟಿಸಲು ಕಾರಣವಾಗಿದ್ದಾನೆ. ಜೀವನವೆಂಬುದೇ ಒಂದು ಜಂಜಾಟ, ಬದುಕು ಎಂಬುದು ಮಾಯೆ ಎಂಬ ತೀರ್ಮಾನಗಳು ಮನಸ್ಸನ್ನು ಕಟ್ಟಿ ಬಿಗಿಯುವಾಗ, ನಮಗೆ ಹಚ್ಚಗಿನ ದೃಷ್ಟಿ ಬಂದೀತೇ ? ಈ ನಂಬಿಕೆ, ಸಂಸ್ಕೃತಿಗಳಿಂದ ನಮ್ಮ ನರಗಳು ಹತೋಟಿಯಿಂದೆಷ್ಟು ತಪ್ಪುತ್ತಿವೆ—ಎಂಬುದನ್ನು ಪರಿಶೀಲಿಸುವ. ಇದಕ್ಕಾಗಿ ಮೊದಲಿಗೆ, ನನ್ನದೇ ಪುಟ್ಟೊಂದು ಉದಾಹರಣೆಯನ್ನು ಕೊಡುತ್ತೇನೆ.

**ನರಗಳ ದೌರ್ಬಲ್ಯ**

ನನಗೆ ತಿಳಿವಳಿಕೆ ಬಂದಿದೆ ಎಂದು ತಿಳಿದ ಬಳಿಕೇನೆ, ನಡೆದ ಸಂಗತಿ ಇದು. ನಾನು ಶಾಲೆಯನ್ನು ತೊರೆದು ಗಾಂಧಿಜೀಯವರ ಅನುಯಾಯಿಯಾಗಿ, ಇತರ ಚಟುವಟಿಕೆಗಳ ಜತೆಗೆ ಅಸ್ಪೃಶ್ಯತಾ ನಿವಾರಣೆಗಾಗಿ ಯತ್ನಿಸುತ್ತಿದ್ದ ದಿನಗಳವು. ನಾನು ನಿತ್ಯ ತಿರುಗುವ ಹಾದಿಯಲ್ಲಿ, ಚಿಕ್ಕ ಮಕ್ಕಳು ಆಡ್ಡಾಡುವ ರೂಢಿಯಿತ್ತು. ನನಗೆ ಮಕ್ಕಳನ್ನು ಕಂಡರೆ, ಚಿಟಿಕೆ ಹಾಕಿ ಮಾತನಾಡಿಸುವ ಚಟ. ಅವರ ಗಲ್ಲವನ್ನು ಅಲುಗಿಸಿ, ಮುದ್ದಿಸುವ ಮನಸ್ಸು. ಹೀಗೆ ಮಾಡುತ್ತಿರುವ ನನ್ನ ಚಟವನ್ನು ಒಮ್ಮೆ ವಿಮರ್ಶಿಸಬೇಕಾಗಿ ಬಂದಿತು. ದಾರಿಯಲ್ಲಿ ಉತ್ತಮರೆನಿಸುವವರ ಮಕ್ಕಳು ಇದಿರಾದರೆ, ನನ್ನ ಕೈ ಅವರ ಗಲ್ಲಕ್ಕೆ ನೇರವಾಗಿ ಹೋಗುತ್ತಿತ್ತು. ಹರಿಜನರ ಮಕ್ಕಳು ಇದಿರಾದಾಗ, ಮುಂದೆ ಹೋದ ಕೈ, ಹಿಂದಕ್ಕೆ ಸರಿಯುತ್ತಿತ್ತು. ನನ್ನ ಮನಸ್ಸು ನನ್ನ ರೀತಿಯನ್ನು ಒಪ್ಪಿದ್ದರೂ, ಹಿಂದಿನ ಸಂಪ್ರದಾಯದಿಂದ ನನ್ನ ನರಗಳು, ಹೊಲೆಯರ ಮಕ್ಕಳನ್ನು ಮುಟ್ಟಲು ಹಿಂಜರಿಯುತ್ತಿದ್ದುವು. ಇನ್ನೊಮ್ಮೆ ಅಸ್ಪೃಶ್ಯ ಬಾಲಕನೊಬ್ಬ ಒಂದು ಜಗುಲಿಯಿಂದ ಕೆಳಕ್ಕೆ ಬಿದ್ದಾಗ, ಅವನ ಸಹಾಯಕ್ಕೋಡಿದ ನನಗೆ, ಇದೇ ಬಗೆಯ ಸಂಕೋಚ ಬಂದುದುಂಟು. ನಮ್ಮ ಆಚರಣೆಯಿಂದ ನಮ್ಮ ವಿಚಾರ ಶಕ್ತಿ, ನಡವಳಿಕೆಗಳು ದಾಸ್ಯಕ್ಕಿಳಿಯುವುದರ ಉದಾಹರಣೆಯಿದು.

**ನಮ್ಮದು ನಮಗೆ ಕಾಣಿಸದು**

ನಾನು ನಂಬಿ ಬಂದ ದೇವರು—ನಾಲ್ಕು ವರ್ಣದವರನ್ನು ಹಿರಿದಾಗಿ ಇರಿಸಿ, ಅಳಿದವರ ಕಡೆಗೆ ಉದಾಸೀನವಾದ ಸಂಸ್ಕೃತಿಯ ಫಲ—ಇದು. ಈ ಬಗೆಯ ಸಂಕುಚಿತ ದೃಷ್ಟಿ, ಶೀರ ಸ್ವಾಭಾವಿಕವಾಗಿ ಜನತೆಗೆ ಬಂದುಬಿಡುತ್ತದೆ. ಅದನ್ನು ಮುರಿಯುವುದೇ ಅವರಿಗೆ ಪಾಪವೆನಿಸುತ್ತದೆ. ಶ್ವೇತಜನರು ವರ್ಣ ಜನಾಂಗಗಳ ಕಡೆಗೆ ತೋರುವ ತಾತ್ಸಾರಕ್ಕೂ ಇದೇ ಕಾರಣ. ಬಿಳಿಯರು ಶ್ರೇಷ್ಠರೆಂಬ ಭಾವನೆಯು ಅವರ ನಾಗರಿಕತೆಯಲ್ಲಿ ಪರಂಪರೆಯಿಂದ ಬಂದಿದೆ. ಬರ್ಮಾಯುದ್ಧದ ಸೋಲಿನ ಗಳಿಗೆಯಲ್ಲಿ ಅವರು ಕರಿಯರು ಸಂಚರಿಸುತ್ತಿದ್ದ ದಾರಿಯಲ್ಲಿ ಓಡಿಬರಲು ಅಸಮರ್ಥರಾದರು. ಶ್ವೇತಪಿತ್ಥ

ಆದರಿದ ಒಬ್ಬ ವ್ಯಕ್ತಿಯು, ಕರಿಯನೊಬ್ಬನೊಡನೆ ಮನಃಶಾಂತಿಯಿಂದ ಉಣ್ಣಬಲ್ಲನೇ ? ಬ್ರಾಹ್ಮಣನ ಬಳಿಯಲ್ಲಿ ಹೊಲೆಯನೊಬ್ಬ ಕುಳಿತಾಗ, ಅವನ ಗಂಟಲಿನಿಂದ ತುತ್ತು ಸರಾಗವಾಗಿ ಇಳಿದೀತೆ ? ಅವರವರು ಬೆಳೆದ ಆವರಣಗಳು–ಅಂದರೆ ಸಂಸ್ಕಾರ, ಸಂಪ್ರದಾಯಗಳು, ಅವರವರ ನಡೆವಳಿಕೆಯ ವಿಚಾರವಾಗಿ, ಅಂಧತೆಯನ್ನು ತಂದುಬಿಡುತ್ತದೆ. ಉಳಿದವರಲ್ಲಿನ ದೋಷ ನಮಗೆ ಕಾಣುವಷ್ಟು ಸೊಗಸಾಗಿ, ನಮ್ಮಲ್ಲಿನ ಕೊರತೆಗಳು ಕಾಣಲಾರವು. ನಮ್ಮ ನಂಬಿಕೆಗಳನ್ನು ನಾವು ವಿವೇಚಿಸಲು ಹೋಗುವುದೇ ಇಲ್ಲ. ಜೀವನದ ಯಾವ ಪ್ರಶ್ನೆಯನ್ನೇ ಆಗಲಿ, ಯೋಚಿಸಲು ಬಯಸುವ ವ್ಯಕ್ತಿಗೆ, ಇಂಥ ತಡೆ ಸಲ್ಲದು. ಅವನ ಪಂಗಡದ ಹಿರಿತನ, ಅವನ ಕುಲದ ಹಿರಿತನ, ಅವನ ಮಾನವತೆಯ ಹಿರಿತನ—ಇವೆಲ್ಲವನ್ನೂ ಅವನು ಮರೆಯಬೇಕಾಗುತ್ತದೆ. ಹೀಗೆ ಮರೆಯಲು ಅವಕಾಶ ಕೊಡದೂದೇ—ಸಂಪ್ರದಾಯ, ಸಂಸ್ಕೃತಿ, ರೂಢಿ, ಮತ, ಧರ್ಮ–ಇವುಗಳೆಲ್ಲ. ಇವುಗಳಿಂದ ಉಂಟಾದ ನಂಬುಗೆಗಳಿಗೆ ಅವನು ಬಲಿಯಾಗಿರುವಷ್ಟು ದಿನ, ಅವನು ತಾನೇ ತಾನಾಗಲಾರ. ಅವನ ದೃಷ್ಟಿ ಕುರುಡೋ ಅರೆಕುರುಡೋ ಆಗಿಬಿಡುತ್ತದೆ. ನಮ್ಮಿಂದ ಇತರ ಜನಗಳಿಗೆ ಕೆಡುಕು ಆಗುತ್ತಿದ್ದರೂ, ಅದನ್ನು ಕಾಣುವ ಕಣ್ಣು ನಮಗೆ ಇಲ್ಲದಾಗುತ್ತದೆ.

ಈ ಕಾರಣಗಳಿಂದಾಗಿ, ನಮ್ಮ ನಂಬಿಕೆಗಳು ಎಷ್ಟೇ ಪುರಾತನವಾಗಿರಲಿ, ಅವುಗಳು ಶಾಸ್ತ್ರ ಸಮ್ಮತವಾಗಿರಲಿ, ಋಷಿ ಉಕ್ತವಾಗಿರಲಿ–ನಿಷ್ಪಕ್ಷಪಾತವಾದ ಮನಸ್ಸಿನಿಂದ, ಪೂರ್ವ ತೀರ್ಮಾನಗಳ ಬಂಧನವಿಲ್ಲದೆ ನಾವು ಅವನ್ನು ತೂಗಿದಲ್ಲದೆ—ಜೀವನವನ್ನು ಕುರಿತಾದ ಸರಳ ದೃಷ್ಟಿಯು ನಮಗೆ ಬರಲಾರದು.

**ಸತ್ಯಾನ್ವೇಷಣೆಯ ಅಧಿಕಾರ**

ಹೀಗೆಂದೊಡನೆಯೇ—ಹಿರಿಯರು ಕಂಡಿರದ ಸತ್ಯ ನಿನಗೇನು ದೊರಕೀತು ? ಋಷಿಗಳು ತಿಳಿಯದ್ದು ನಿನಗೇನು ತಿಳಿದೀತು — ಎನ್ನುವವರುಂಟು. ಇದಕ್ಕೆ ಎರಡೇ ಸಮಾಧಾನದ ಮಾತುಗಳು. ಸತ್ಯ ತಿಳಿಯುವ ಹಂಬಲ, ಹಕ್ಕು, ಜೀವನದ ಅರ್ಥಮಾಡಿಕೊಳ್ಳುವ ಇಚ್ಛೆ, ಹಕ್ಕು ಯಾರೊಬ್ಬರಿಗೂ ಮೀಸಲಾಗಿಲ್ಲ. ಕೇವಲ ಋಷಿಗಳಿಗೂ ಮೀಸಲಲ್ಲ ; ಬಾಳ ಬಯಸುವ ಪ್ರತಿಯೊಂದು ಪ್ರಾಣಿಯ ಹಕ್ಕು ಅದು. ನಮಗೆ ತಿಳಿಯುವ ಇಲ್ಲವೆ ತಿಳಿಯದೆ ಇರುವ ವಿಚಾರ—ಅನ್ಯರಿಗೆ ತಿಳಿದಿದ್ದರೂ ಅದು ನಮಗೆ ತಿಳಿದಂತಲ್ಲ ; ಅನ್ಯರು ಉಂಡುದರಿಂದ ನಮ್ಮ ಹಸಿವು ಹೋಗದು. ಅವರವರ ಜೀವನದ ತಿಳಿವು ಅವರವರಿಂದಲೇ ಬೆಳೆಯತಕ್ಕದ್ದು. ಪರರ ಹೇಳಿಕೆಗಳು ಈ ವಿಷಯದಲ್ಲಿ ನಿರಾಕರಣೆಗೆ ತಕ್ಕವೆಂದಲ್ಲ ; ಸ್ವೀಕಾರಕ್ಕೆ ಮೊದಲು, ತುಲನೆಗೆ ತಕ್ಕವು—ಎಂಬುದೇ ಈ ಮಾತಿನ ತಾತ್ಪರ್ಯ.

ನನ್ನ ಸಂಸ್ಕೃತಿಯು ನನಗಿತ್ತ ನಂಬಿಕೆಗಳು ಹೇಗೆ ಕ್ರಮಗತವಾಗಿ ನನ್ನ ಮನಸ್ಸನ್ನು ತಣಿಸಲಾರದೆ ಹೋದುವೆಂದು, ನಾನು ಬಾಳನ್ನು ಅರಿಯಲು ಹೇಗೆ ಮುಂದಿಯಬೇಕಾಗಿ ಬಂತೆಂಬುದನ್ನೂ ಹೇಳುತ್ತೇನೆ.

### ಆರ್ಯರ ಮಿತಿ

ನಮಗೆ ಇತಿಹಾಸದಲ್ಲಿ ವಿಶ್ವಾಸ ಬರತೊಡಗಿದಂತೆ, ಆರ್ಯರಿಂದ ಬಂದ ಧರ್ಮವನ್ನೇ ಅನುಮಾನಿಸುವ ಪ್ರಸಂಗವೊದಗಿತು. ಅನಾರ್ಯರಾದ ದ್ರಾವಿಡರು 'ಅಸುರ'ರೆನಿಸಬೇಕೇ ? ಆರ್ಯನಿರ್ಮಿತ ಇಂದ್ರ, ವಿಷ್ಣುಗಳು ದ್ರಾವಿಡ ಜನಗಳನ್ನು ದಂಡಿಸಲು ಹೊರಡಬೇಕೆ ? ಆರ್ಯರಿಗೆ ನೆರವಾದ ಕಿಷ್ಕಿಂಧೆಯ ಜನರಿಗೆ ಸರಿಯಾದ ಮಾನ ದೊರೆಯಿತೇ ? ಆರ್ಯರ ದೃಷ್ಟಿಯಲ್ಲಿ ಅವರಿಗೆ "ಕಪಿ" ಸ್ಥಾನಕ್ಕಿಂತ ಹೆಚ್ಚಿನ ಮನ್ನಣೆ ದೊರೆಯದೆ ಹೋಯಿತೇಕೆ ?–ಎಂಬ ಪ್ರಶ್ನೆಗಳು ಉದ್ಭವಿಸಿದುವು. ಇದನ್ನು ನೆನೆದರೆ –ಆರ್ಯರು ಬೆಳೆದ ಆವರಣವು, ಅವರ ಮಾನವತೆಯ (humanity) ಕಲ್ಪನೆಗೆ ಎಂಥ ಮಿತಿ ತಂದಿಕ್ಕಿತ್ತೆಂದು ಸ್ಪಷ್ಟವಾಗುತ್ತದೆ. ಇಂದಿನ ದಿನದಲ್ಲಿ ನಾವು ಆಫ್ರಿಕದ ಕಡೆಗೆ ಮೋರೆ ಮಾಡಿದರೆ, ಅದೇ ಚಿತ್ರ ನಮಗೆ ಕಾಣಿಸುತ್ತದೆ. ಬಿಳಿಯರು ಅಲ್ಲಿ ರಾಜ್ಯ ಕಟ್ಟಲು, ಅವರಿಗೆ ನೆರವಾದವರು ಹಿಂದೀಯರು. ಆದರೆ ಆ ಹಿಂದೀಯರಿಗೆ ಅಲ್ಲಿ ಸಮನಾದ ಪ್ರಜಾಧಿಕಾರ ದೊರೆತಿಲ್ಲ. ಅದನ್ನು ಕೊಡದಿದ್ದುದು ಅಲ್ಲಿನ ಬಿಳಿಯರಿಗೆ, ತಪ್ಪಾಗಿಯೂ ಕಾಣಿಸುವುದಿಲ್ಲ. ತಾವು ಶ್ರೇಷ್ಠರು ಎಂಬ ಭ್ರಮೆ ಅವರಿಗೆ ರೂಢಿಯಿಂದ ಬಂದುಬಿಟ್ಟಿದೆ.

ಇನ್ನು ಒಂದೇ ಧರ್ಮದೊಳಗಿನ ಪಕ್ಷಪಾತಗಳಿಗೂ ಇಂಥ ಮನೋವೃತ್ತಿಯು ಕಾರಣವಾಗುತ್ತದೆ. ಆರ್ಯರಲ್ಲಿನ ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣನು ಶ್ರೇಷ್ಠನೆನಿಸಿದ್ದಾನೆ. ದೈವೀ ಗುಣಗಳು ಅವನಿಗೆ ಮೀಸಲಾದುವು ; ಆತ ಭೂಸುರನೇ ಆನಿಸಿದ. ಈ ಬಗೆಯಿಂದ ಜನ, ತಮ್ಮ ಹಿರಿಮೆಯನ್ನು ಕಾಯುವ ಪರಂಪರೆಯು, ಎಲ್ಲೆಲ್ಲೂ ಕಾಣುತ್ತಿದೆ. ಪೋಪರು, ಪಾದ್ರಿಗಳು–ಕ್ರಿಸ್ತಿಯರ ಆತ್ಮದ ಮೇಲಿನ ಅಧಿಕಾರಿಗಳಾಗಿದ್ದಾರೆ ! ಮುಲ್ಲಾರು ಜೇರೊಂದು ಕಡೆಯಲ್ಲಿ ಈ ಕೆಲಸ ಮಾಡುತ್ತಾರೆ. ಅನೇಕ ಮೂಲನಿವಾಸಿಗಳಲ್ಲಿ, ಪುರೋಹಿತನೇ ಇಹದ ದೈವನೆನಿಸುತ್ತಾನೆ. ರಾಜಕೀಯದಲ್ಲೂ–ಇದೇ ನೀತಿ ನಡೆಯುತ್ತಿದೆ. ಧನಸತ್ತೆಯು ರೂಢವಾಗಿ ಬಂದಿರುವ ಜನಗಳಲ್ಲಿ, ಅದೊಂದು ಹೇಯ ರೂಪವೆಂದು ತೋರುವುದಿಲ್ಲ. ಬಡಜನರ ವ್ಯಥೆಗೆ ಅದು ಕಾರಣವೆಂದು ತೋರುವುದಿಲ್ಲ. ಅವರವರ ಕರ್ಮದಿಂದಲೇ ಬಡವರು, ಶ್ರೀಮಂತರು ಆಗಿ ಹುಟ್ಟುತ್ತಾರೆ–ಎಂಬ ಗಾಢ ನಂಬುಗೆ, ಈ ಅನ್ಯಾಯವನ್ನು ಮುಂದುವರಿಸುತ್ತದೆ. ರಷ್ಯಾ ದೇಶವು ಹೇಗೆ ಇದನ್ನು ಬದಲಿಸಿತು ? ಅಲ್ಲಿನ ಇಂದಿನ ಆರ್ಥಿಕ ಸಮತೆಗೆ. ಕರ್ಮ ಸಿದ್ಧಾಂತವಂತೆ ವಾದಿಸುವಲ್ಲಿ, ಆ ಒಂದು ದೇಶದಲ್ಲಿ ೧೯೨೧ ನೇ ಇಸವಿಯಿಂದ ಸಮಕರ್ಮಿಗಳೂ, ಸಮಪುಣ್ಯಶಾಲಿಗಳೂ ಮಾತ್ರ ಹುಟ್ಟುತ್ತಿದ್ದಾರೆನ್ನಬೇಕೆ ?

### ಜೀವ ಕುಟುಂಬದ ಕರ್ಮ ಫಲ

ರಷ್ಯ ದೇಶದ ಆರ್ಥಿಕ ಕ್ರಾಂತಿ, ಇಂದು ಇನ್ನೊಂದು ಪ್ರಶ್ನೆಯನ್ನೂ ಕೆರಳಿಸುತ್ತದೆ. ಸಮಾಜದಲ್ಲಿ ನಂಬಿಕೆಗಳು ಬಲವಂತವಾಗಿರುವಾಗ, ಒಬ್ಬೊಬ್ಬನ ಕರ್ಮವು ಫಲಿಸಿತೇ ಎಂದು ? ಅಲ್ಲಿನ ಇಂದಿನ ಆರ್ಥಿಕ ಸಮತೆಯು ಏತರಿಂದಾಯಿತು ? ವ್ಯಕ್ತಿ

ಗಳ ಪಾಪ ಪರಿಪಾಕವು ಕಡಮೆಯಾಗಿ, ಎಲ್ಲರಿಗೂ ಊಟಕ್ಕೆ ಅನ್ನ ಸಿಗುತ್ತಿದೆ ಎಂದೋ ? ಇಡಿಯ ಸಮಾಜವೇ ಯಾವುದೋ ಒಂದು ಕ್ರಾಂತಿಗೆ ಗುರಿಯಾದುದರಿಂದ ಈ ಕೆಲಸ ಸಾಧ್ಯವಾಯಿತು. ಇದರಿಂದ ವ್ಯಕ್ತಿಯೇ, ತನ್ನ ಕರ್ಮಕ್ಕೆ ಹೊಣೆ ಎನ್ನುವುದರ ಬದಲು, ಜೀವಕುಟುಂಬದ ಒಟ್ಟು ಕರ್ಮವು ಜೀವಕುಟುಂಬದ ಒಟ್ಟು ಸುಖದುಃಖಗಳಿಗೆ ಕಾರಣ—ಎನ್ನುವುದು ಲೇಸು.

ವ್ಯಕ್ತಿಯ ಜೀವನವನ್ನು ಪರಿಶೀಲಿಸುವಂತೆ, ಅವನು ತನ್ನ ಆವರಣಕ್ಕೂ, ಪೂರ್ವಪರಂಪರೆಗೂ ಎಷ್ಟೊಂದು ಬಲಿಯಾಗುತ್ತಾನೆ—ಎಂದು ತಿಳಿಯದೇ ? ಕರ್ಮಫಲದ ಅರ್ಥ—ವ್ಯಕ್ತಿಗತವಾದದ್ದಲ್ಲ. ಬದಲು ಸಾಮೂಹಿಕವಾದದ್ದು ಎಂದು ತಿಳಿಯಬೇಕಾಗಿದೆ.

**ರೂಢಿಯ ದೃಷ್ಟಿ ಬೇಡ**

ಹಲವು ಮತಗಳು ಬದುಕನ್ನು ಕುರಿತು ಹುಟ್ಟಿಸಿದ ತೀರ್ಮಾನಗಳ ವಿಚಾರ ಮಾಡುವ. ಬದುಕೊಂದು ಮಾಯೆ, ಬರಬಾರದಾದ ಬನ್ನ—ಎಂಬ ಪೂರ್ವತೀರ್ಮಾನ ಹಿರಿದು. ಆದರಿಂದ, ಜೀವನವನ್ನು ಬದುಕಿ ತಿಳಿಯಬೇಕೇ ? ಬದಲು ನಿರಾಕರಿಸಿ ಬಾಳಬೇಕೇ—ಎಂಬ ಪ್ರಶ್ನೆ ಹೊರಡುತ್ತದೆ. ಇಲ್ಲಿನ ಸುಖವಿರಲಿ ದುಃಖವಿರಲಿ, ಅದನ್ನು ಬಾಳಿ ತಿಳಿಯುವ ಬದಲು, ನಾಳಿನ ಮುಕ್ತಿಗಾಗಿ ಬಾಳನ್ನು ಮೀಸಲಾಗಿ ಇರಿಸುವುದು ಸಮವೇ ?

ಇಂಥವೇ ಹಲವೊಂದು ಒಡಪುಗಳು ನಮ್ಮ ಕಣ್ಮುಂದೆ ಬಂದು ನಿಲ್ಲುತ್ತವೆ. ರೂಢಿಯಿಂದ ನಾವು ಅದನ್ನು ಒಪ್ಪಿಬಿಡುವಲ್ಲಿ, ನಮಗೆ ಬೇರಾವ ಹೊಸ ನೋಟವೂ ಶಕ್ಯವಿಲ್ಲ. ಹಳೆಯ ಯೋಚನೆಗಳ ಬಲೆಯಿಂದ ನಾವು ಪಾರಾಗುವಂತಿಲ್ಲ. ಅವಿರುವಷ್ಟು ಕಾಲ, ನಮ್ಮ ಬದುಕನ್ನು ನಾವು ತಿಳಿದು ಬಾಳುವ ಹವ್ಯಾಸವೇ ಸಾಧ್ಯವಾಗದು. ನಮ್ಮ ಬದುಕಿಗೊಂದು ವ್ಯಕ್ತಿತ್ವವೂ ಉಳಿಯುವುದಿಲ್ಲ. ಅದರ ಅವಶ್ಯಕತೆಯೂ ಅನಿಸದಂತಾಗುತ್ತದೆ. ತೀರ ಅಸಹಾಯವಾದ ಸುಳಿಯಲ್ಲಿ ಸಿಲುಕಿದ ವ್ಯಕ್ತಿಗೆ, ಬೇರೆಯೇ ಆತ್ಮವಿದೆ, ಎನ್ನುವುದರಿಂದ ಬರುವುದಾದರೂ ಏನು ?

**ಆವರಣದ ಮಿತಿ**

ನಾವು ಎಲ್ಲವನ್ನು ತಿರುಗಿ ಯೋಚಿಸಬೇಕು, ವಿಮರ್ಶಿಸಬೇಕು, ಪೂರ್ವಸಿದ್ಧಾಂತಗಳ ತೀರ್ಮಾನಕ್ಕೆ ಬಲಿಯಾಗಬಾರದು ಎಂದೊಡನೆ ರೂಢಿಯಿಂದ ಬಂದ ಮತ, ಪುರಾಣಗಳ ಸೆರಗನ್ನು ಹೇಗೆ ಕಡಿದುಕೊಳ್ಳಬೇಕೋ, ಹಾಗೇನೆ ನಮ್ಮ ಭೂಗೋಲದ ಆವರಣವನ್ನೂ ಕಡಿದುಕೊಳ್ಳಬೇಕಾಗುತ್ತದೆ. ಕಾರಣ—ಒಂದೊಂದು ಮತವು ಎಷ್ಟೇ ಉದಾತ್ತವಾದ ದೃಷ್ಟಿಯಿಂದ ಹುಟ್ಟಿರಲಿ—ಅದು ಹುಟ್ಟಿದ ಕಾಲದ, ಅದರ ಪ್ರವಾದಿಗಳು ಬದುಕಿದ ಕಾಲದ ಮಿತಿಯನ್ನೂ, ಭೌಗೋಲಿಕ ಆವರಣದ ಮಿತಿಗಳನ್ನು ಅದು ತಾಳಿದೆ ಎಂಬುದು ಸ್ಪಷ್ಟವಾದ ವಿಷಯ.

ಮೋಸೆಸನು ಯಹೂದಿಯರ ರಾಜ್ಯದ ಮೇರೆಯನ್ನು ದಾಟಲಿಲ್ಲ;

ಜರತುಷ್ಟ್ರನಿಗೆ ಇರಾಣ, ಬೆಬಿಲಾನಗಳೇ ಗಡಿನಾಡೆನಿಸಿದ್ದುವು. ನಮ್ಮ ಒಂದೂ ಧರ್ಮದ ದೇವಾನುದೇವತೆಗಳೆಲ್ಲರು ಭರತಖಂಡವನ್ನು ದಾಟಿ ಹೋಗಲೂ ಇಲ್ಲ.

ದೇವರ ಕಲ್ಪನೆಯು ಜೀವಕೋಟಿಯ ಉದ್ಧಾರಕ್ಕೆ ಅವಶ್ಯ ಎನ್ನುವುದಾದರೆ, ಆ ದೇವರ ಕಲಾಪವು ಜೀವಕೋಟಿ ವಾಸಿಸುತ್ತಿರುವ ಎಲ್ಲ ಭೂಮಿಗೂ ಅನ್ವಯಿಸ ಬೇಡವೆ? ಮಾನವ ಕೋಟಿಯ ಉದ್ಧಾರಕ್ಕಾಗಿ ಜನಿಸುವ ದೇವರು–ಹಿಂದುಸ್ಥಾನ ವನ್ನು ಧರ್ಮಕ್ಷೇತ್ರವಾಗಿ ಮಾಡಿಕೊಳ್ಳಬಹುದೇ? ವಿಷ್ಣು, ಶಿವರ ಅವತಾರಗಳು ನಮ್ಮ ನಾಡಿನ ಗಡಿಯೊಳಗೇ ಆಗಬೇಕಾದ ಕಾರಣವೇನು? ಹೊರಗಿನ ಜನತೆ ದೇವರ ದೃಷ್ಟಿಯಲ್ಲಿಲ್ಲವೆಂದೇ? ಅಥವಾ ಅವರಲ್ಲಿ ದುರ್ಜನರು ಜನಿಸಲೇ ಇಲ್ಲವೆಂದೇ? ಬಾಯಲ್ಲಿ 'ದೇವರು ವಿಶ್ವಕರ್ಮ'ನೆಂದರೇನು ಬಂತು? ನಮ್ಮ ಪುರಾಣಗಳ ವಿಶ್ವವೂ, ದೇವರ ವ್ಯಾಪಾರಗಳೂ ಜಂಬೂದ್ವೀಪದೊಳಗಣ ಭರತಖಂಡಕ್ಕೊ, ಆರ್ಯಾ ವರ್ತಕ್ಕೊ ಮಾತ್ರ ಅನ್ವಯಿಸಿದರೆ ಹೇಗೆ? ಯಹೂದ್ಯರ ದೇವರು ಅಸ್ಯಾಮೈನರಿನಲ್ಲಿ, ಕಾಫಿರರ ದೇವರು ಕಾಫಿರಸ್ಥಾನದಲ್ಲಿ, ಸಮೋವನರ ದೇವರು ಸಮೋವ ದ್ವೀಪಗಳಲ್ಲಿ ಹುಟ್ಟಿ ನಲಿದರೆಂದರೆ—ಭೂಗೋಲದ ಮೇರೆ ದೈವದ ಚಟುವಟಿಕೆಗೂ ಬಂಧನ ತಂದಂತಾಗಲಿಲ್ಲವೇ?

ಮಾನವನು ಕಟ್ಟಿಕೊಂಡ ದೇವರುಗಳ ರಾಜ್ಯಭಾರ ಹಾಗಿದೆ. ಮತಧರ್ಮಗಳು ಹುಟ್ಟಿದ ನಾಡಿನ ಮೇರೆಯಿಂದ ಅವು ಮಿತಗೊಂಡದ್ದು ಮಾತ್ರವಲ್ಲ–ಆಯಾಯ ದೇವರುಗಳ ಕಾರ್ಯಕ್ರಮ–ಮನುಷ್ಯ ಪ್ರಪಂಚದ ಸಂಕುಚಿತ ಕ್ಷೇತ್ರಕ್ಕೇನೆ ಅನ್ವಯ ಗೊಂಡಿತು. ಎಲ್ಲ ಜೀವಕೋಟಿಗಳ ದಾತನು, ಬರಿಯ ಮನುಷ್ಯರ ಉದ್ಧಾರಕ್ಕೇನೆ ಅವತರಿಸುವನೇ? ಐಗುಪ್ತರಿಂದ ಇಸ್ರೇಯಲರನ್ನು ಕಾಯುವುದಕ್ಕೆ, ತುರಾನಿಯರಿಂದ ಇರಾನಿಯರನ್ನು ಉಳಿಸುವುದಕ್ಕೆ, ಅಸುರರಿಂದ ಆರ್ಯವಿಪ್ರರನ್ನು ಉಳಿಸುವುದಕ್ಕೇ ದೇವರಾದರೆ–ಪಶುಪಕ್ಷಿಗಳನ್ನು ಕಾಯುವವರಾರು? ಹುಲಿಗಳಿಂದ ದನಗಳನ್ನು ಕಾಯುವ ದೇವರು, ಹಿರಿಮೀನುಗಳಿಂದ ಕಿರಿಮೀನುಗಳನ್ನು ಉಳಿಸುವ ದೇವರು, ಅದೇ ತೆರನಲ್ಲಿ ಇರಬೇಡವೇ?

**ತನ್ನ ಮಿತಿ ದೇವರಿಗೆ**

ಮನುಷ್ಯ, ದೇವರನ್ನು ಬಾಯಿಮಾತಿನಲ್ಲಿ ಎಷ್ಟೇ ದೊಡ್ಡವನೆಂದು ಕರೆಯಲು ಯತ್ನಿಸಿದರೂ, ಅವನು ಕೇವಲ ತನ್ನ ನೆಲ, ತನ್ನ ಜನ ಇವುಗಳ ಸ್ವಾರ್ಥದ ಮೇರೆ ಯಿಂದ ದಾಟಲಾರನಾದನು. ಇಷ್ಟೊಂದು ಸಂಕುಚಿತ ಆವರಣದಲ್ಲಿ ಜನಿಸಿದ ದೇವರು, ವಿಶ್ವದ ಹೊಣೆ, ಜಗತ್ತಿನ ಉದ್ಧಾರ ಮಾಡಲು ಅಸಮರ್ಥನಾದಾನೆಂದೇ ತೀರ್ಮಾನಿಸ ಬೇಕು. ನಮ್ಮ ದೈವತ್ವದ ಕಲ್ಪನೆಯು ಬಹುವಾಗಿ ಹಿಗ್ಗಿದಲ್ಲದೆ, ವಿಶ್ವದ ವಿಚಾರವೋ, ವಿಶ್ವದಲ್ಲಿ ಜೀವಿಸುವ ಯಾವತ್ತು ಜೀವಿಗಳ ವಿಚಾರವೋ ನಮಗೆ ಅರ್ಥವಾಗದು. ಬದುಕಿನ ಅರ್ಥ ತಿಳಿಯಲೆತ್ನಿಸುವವನು, ತಾನು ಮಾನವನೆನಿಸಿಕೊಂಡ ಮಾತ್ರಕ್ಕೆ, ತನ್ನನ್ನು ಬೇರೆಯಾಗಿ ಆಯ್ದುಕೊಂಡು, ತನ್ನ ಕುಟುಂಬವನ್ನು ಆರಿಸಿದ ಜನವರ್ಗವಾಗಿ

ಇರಿಸಿಕೊಂಡು, ಮಾಡುವ ತೀರ್ಮಾನಗಳಿಂದ, ಜೀವನದ ಉದ್ದೇಶವನ್ನು ತಿಳಿಯ ಲಾರನು. ಆದರಿಂದ ಅವನು ಮಾಡುವ ತೀರ್ಮಾನಗಳು—ತನ್ನ ಬಳಗದ ಅನುಕೂಲ, ಪ್ರತಿಕೂಲತೆಗಳ ಪಡಿನೆಳಲನ್ನು ಮಾತ್ರ ಅವು ಕೆಡೆಯಬಹುದು.

**ಸಂಪ್ರದಾಯದ ದೇವರು**

ಈ ಕಾರಣಗಳಿಂದಲೂ, ಸಂಪ್ರದಾಯದ ದೇವರು ನಮ್ಮ ಜ್ಞಾನವನ್ನು ಅರಳಿಸುವ ಬದಲು ಮುದುರಿಸುತ್ತಾನೆಂದೇ ತಿಳಿಯಬೇಕು. ಬಾಳ್ವೆಯ ಅರ್ಥವನ್ನು ತಿಳಿಯ ಬಯಸುವ ವ್ಯಕ್ತಿ, ದೇವರ ಗೊಂದಲ ಹಚ್ಚಿಕೊಳ್ಳದಿದ್ದರೂ ತೊಡಕಾಗಬೇಕಿಲ್ಲ ; ಹಚ್ಚಿಕೊಳ್ಳುವುದಾದರೆ ಅವನು ಎಲ್ಲ ವಿಧಗಳಿಂದಲೂ—ಅಂದರೆ ಅವತಾರ, ಕಟ್ಟುನಿಟ್ಟು, ಪಾಲನೆ, ನಾಶ—ಎಲ್ಲವುಗಳ ವಿಷಯದಲ್ಲೂ, ವಿಶ್ವವನ್ನೂ ವಿಶ್ವದ ಜೀವಕೋಟಿಯನ್ನೂ ಒಳಪಡಿಸಿಕೊಂಡಿರುವನೆಂಬುದು ಸ್ಪಷ್ಟವಾಗಬೇಕು.

# ೩ ನಮ್ಮ ಅಳತೆಯನ್ನು ಮೀರಲಾರದ ದೇವರು

**ದೇವರ ಬೆಲೆ**

ಎಲ್ಲ ಸಂಪ್ರದಾಯವಾದಿಗಳಂತೆ ನಾನೂ ಒಮ್ಮೆ, ಬದುಕಿನ ಬೆಲೆಯನ್ನು ತಗ್ಗಿಸಿ ದೇವರ ಬೆಲೆಯನ್ನು ಏರಿಸಿ ತಿಳಿದವನು. ಕೊನೆಗೆ ನನ್ನ ಅನುಭವಗಳು, ಈ ನನ್ನ ರೂಢಿಯ ನಂಬಿಕೆಗಳನ್ನು ಕುಲುಕಿಸುವ ಕಾಲ ಬಂದಿತು. ನಮ್ಮ ಬದುಕಿಗಿಂತ ಹಿರಿದಾದ ದೇವರು ನಮಗೆ ನಿಲುಕಲಾರನೆಂಬುದೇ—ನನ್ನ ತಿಳಿವು. ಈ ನಿರ್ಣಯಕ್ಕೆ ಕಾರಣವಾದ ವಿಚಾರಸರಣಿಯನ್ನು ಮುಂದುವರಿಸುತ್ತೇನೆ. ಮೊದಲಿಗೇನೆ—ನಾನು ಸಾಂಪ್ರದಾಯವಾದಿಗಳ ಕುಟುಂಬದಲ್ಲಿ ಜನಿಸಿದವನು–ಎಂದೆ. ನಮ್ಮ ಮನೆಯವರು ಸ್ಮಾರ್ತ ಬ್ರಾಹ್ಮಣರು. ಅದ್ವೈತಿಗಳಂತೆ ನಾವೂ ವಿಭೂತಿ ಹಚ್ಚುವವರು. ಇತ್ತ ಶಿವನಲ್ಲೂ ಭಕ್ತಿಯಿದೆ. ವಿಷ್ಣುವಿನಲ್ಲೂ ಭಕ್ತಿಯಿದೆ. ಶಿವರಾತ್ರಿಗೂ ಉಪವಾಸ, ಕೃಷ್ಣಾಷ್ಟಮಿಗೂ ಉಪವಾಸ. ನಮಗೆ ಕುಲದೇವರು ವಿಷ್ಣುವಿನ ಒಂದು ರೂಪ–ಲಕ್ಷ್ಮೀನೃಸಿಂಹ. ಹೆಸರಿಗೇನೋ ನಾವು ಅದ್ವೈತಿಗಳು. ಆದರೆ ಅವರಂತೆ ಜ್ಞಾನಪ್ರಧಾನವಾದ ತರ್ಕ ಸರಣಿ ನಮ್ಮವರದ್ದಲ್ಲ. ದೇವರನ್ನು ಕಾಣುವ ಬಗೆಯೆಲ್ಲವೂ ಭಕ್ತಿ ಮಾರ್ಗದ್ದೇನೆ. ಸೋऽಹಂ–ಬ್ರಹ್ಮ—ನೆಂಬ ದಿಟ್ಟತನ ನಮ್ಮ ಜನಗಳಲ್ಲಿ ಬೆಳೆದು ಬಂದುದು ಕಾಣಿಸುವುದಿಲ್ಲ.

**ಗಾಂಧಿ, ರಾಮಕೃಷ್ಣರು**

ನನ್ನ ಹುಡುಗತನದಲ್ಲಿ ಮತದ, ಇಲ್ಲವೆ ಭಕ್ತಿಯ ಯಾವ ವರ್ಚಸ್ಸೂ ನನ್ನ ಮೇಲಿರಲಿಲ್ಲ. ಎಲ್ಲ ಶಾಲೆಯ ಹುಡುಗರಂತೆ ನಾನೂ ಒಬ್ಬ. ಮುಂದೆ ತಾರುಣ್ಯದ ಎಳೆತನದಲ್ಲೇ ಕಾಲೇಜನ್ನು ಬಿಡುವ ಕಾಲ ಬಂತು. ಗಾಂಧೀಜೀಯವರ ರಾಜಕೀಯ ಕರೆಯೇ ಅದಕ್ಕೆ ಕಾರಣವಾಗಿತ್ತು. ಆ ಕರೆಯು ಬಲವು ರಾಜಕೀಯದ್ದಾಗಿದ್ದರೂ, ಅವರ ಪೂರ್ಣ ಆದರ್ಶದ ವರ್ಚಸ್ಸು ನನ್ನ ಮೇಲೆ ಬಿದ್ದಿತ್ತು. ಭಕ್ತಿಯ ಸುಳಿವು ಬಲವಾಗಿತ್ತು. ಆದರಿಂದಾಗಿ ಗೀತೆಯ ಅಧ್ಯಯನವೂ ನನಗೆ ಪ್ರಿಯವಾಗುತ್ತ ಬಂದಿತು. ನನಗೆ ಗೀತೆ ಎಷ್ಟು ಅರ್ಥವಾಯಿತೋ, ಅದರಿಂದೇನು ತಿಳಿಯಿತೋ ಹೇಳಲಾರೆ—ಅಂತು ಅದನ್ನು ಕನ್ನಡಿಸುವ, ಕಂಠಪಾಠಿಸುವ ಪ್ರಯತ್ನವನ್ನೆಲ್ಲಾ ಮಾಡಿದ್ದೆ. ಇದೇ ವೇಳೆಯಲ್ಲಿ ರಾಮಕೃಷ್ಣ ಪರಮಹಂಸರ ಬರವಣಿಗೆಗಳ ಮೇಲೆ ನನ್ನ ದೃಷ್ಟಿ ಹರಿಯಿತು. ಅವರ ಭಕ್ತಿ ಜೀವನ ನನ್ನ ಮನಸ್ಸಿನ ಮೇಲೆ ತುಂಬ ಪರಿಣಾಮ ಮಾಡಿತು. ಇತ್ತ ಗಾಂಧಿತನ, ಅತ್ತ ರಾಮಕೃಷ್ಣರ ವರ್ಚಸ್ಸು, ಇವುಗಳು ನನ್ನಲ್ಲಿದ್ದ ನಂಬುಗೆಗಳ ಮೇಲೆ ಬಿದ್ದುದರ ಪರಿಣಾಮವಾಗಿ, 'ದೇವರನ್ನು ಕಾಣುವುದೇ ಮಾನವೀ ಜೀವನದ ಗುರಿಯೆಂದೂ, ಅದಕ್ಕೆ ಸಂಸಾರವು ವಿಘ್ನವೆಂದೂ, ಬ್ರಹ್ಮಚರ್ಯ ಜೀವನ, ಧ್ಯಾನ, ತಪಸ್ಸುಗಳು ಮುಖ್ಯ'

ವೆಂದೂ ಒಮ್ಮೆಗೇ ನಿರ್ಣಯಿಸಿಬಿಟ್ಟೆ. ಇದು ನನ್ನ ತೀರ್ಮಾನವೆನ್ನುವ ಬದಲು, ನನ್ನ ಮನಸ್ಸು ತನ್ನ ಹಿಂದಿನ ರೂಢಿಯ ನಂಬಿಕೆಗಳಿಗೆ ಕೊಟ್ಟ ಒಪ್ಪಿತವೆಂದರೂ ಸರಿಯೆ.

**ಹಲವು ದೇವರುಗಳು**

ಭಕ್ತಿ ಪಂಥದಲ್ಲಿ ಸವಿಯಿರುವ ನನಗೆ, ಯಾವ ದೇವನಾಗಬೇಕು ? ಕುಲದೇವತೆಯಾದ ಲಕ್ಷ್ಮೀನರಸಿಂಹ ಮನಸ್ಸಿಗೆ ಎಂದೂ ಹಿಡಿದಿರಲಿಲ್ಲ. ಆ ಉಗ್ರರೂಪವಾಗಲಿ, ಲಕ್ಷ್ಮೀ ಸಂಜ್ಞಾರ್ಥವಾದ ಸಿರಿತನವಾಗಲಿ ನನಗೆ ಅಂದು ರುಚಿಸುವ ಸ್ಥಿತಿಯಲ್ಲಿರಲಿಲ್ಲ. ನಾವು ಶೈವರಾದರೂ ಶಿವನ ಯಾವುದೇ ರೂಪ, ಅವತಾರಗಳು ಮೋಹಕವಾಗಿ ಮನಸ್ಸಿನ ಮೇಲೆ ಮೂಡಿರಲಿಲ್ಲ. ನನ್ನ ಎಳೆತನದಲ್ಲಿ ಕೇಳಿದ ಹರಿಯ ಕತೆಗಳೇ ರಮಣೀಯವೆನಿಸಿದ್ದುವು. ಊರಿನ ಬಯಲಾಟಗಳಲ್ಲಿ ರಾಮ, ಕೃಷ್ಣರು—ಮನಸ್ಸಿನ ಮೇಲೆ ಮುದ್ರೆಯೊತ್ತಿದ್ದರು. ಮೇಲೆ, ನಮ್ಮ ಮನೆಯಲ್ಲಿ ಮಳೆಗಾಲದಲ್ಲಿ, ಭಾಗವತ ವಾಚನದ ಪರಿಪಾಠವಿರುತ್ತಿತ್ತು. ಹೀಗಾಗಿ ಕೃಷ್ಣನ ಕತೆಗಳು ಆಕರ್ಷಿಸಿದ್ದುವು. ಹೀಗಾಗಿ ನನ್ನ ಮನಸ್ಸು ದೇವರನ್ನು ನೆನೆಯುವಾಗ ರಾಮ, ಇಲ್ಲವೆ ಕೃಷ್ಣ—ಇವರಲ್ಲಿ ಒಬ್ಬರ ಕಲ್ಪನೆಯನ್ನು ತರುತ್ತಲಿತ್ತು. ಈ ವೇಳೆಯಲ್ಲೇ ಕೆಲವು ಸಾಮಾಜಿಕ ಪ್ರಶ್ನೆಗಳ ವಿಷಯವಾಗಿ ನನ್ನಲ್ಲಿ ಕ್ರಾಂತಿಗಳು ತಲೆಯೆತ್ತಿದುದರ ಫಲವಾಗಿ, ಏಕಾಗ್ರಚಿತ್ತತೆ ಬೆಳೆಸಲು ಪ್ರಾಣಾಯಾಮ ಸಾಧನ ಮಾಡಿದ್ದೆ; ಗಾಂಧಿಜೀಯವರ ಸಾಬರ್ಮತಿ ಆಶ್ರಮದಲ್ಲಿ ಕೆಲ ದಿನ ಇದ್ದುದರ ಫಲವಾಗಿ, ಅಲ್ಲಿನ ಭಜನೆಯ ರೀತಿಯು ಹಿತವಾಗಿ ಕಂಡಿತು. ಆದರೂ ದೇವರನ್ನು ಗುಲ್ಲೆಬ್ಬಿಸಿ ಎಚ್ಚರಿಸುವ 'ಸಪ್ತಾಹ ಮಾರ್ಗ' ಎಂದೂ ನನಗೆ ರುಚಿಸಿರಲಿಲ್ಲ.

**ಧ್ಯಾನ, ಭಜನೆ**

ಇವೆರಡರ ಸಹಾಯದಿಂದ ನಾನು ದೇವರನ್ನು ಕುರಿತು ಚಿಂತಿಸಲು ಕಲಿತೆ. ನಿರ್ಜನ ಮಸಣ, ಅರಣ್ಯಗಳಲ್ಲಿ ಅಲೆದಾಡುತ್ತ, ಎಷ್ಟು ಮಿತ, ಶಾಂತಜೀವನ ಮಾಡಬಹುದೋ ಅದನ್ನು ಮಾಡುತ್ತ—ಮಿತವಾದ ಅನ್ನಪಾನ, ಆಚಾರಗಳಿಂದ ಸಾಧನೆ ತೊಡಗಿದೆ, ಹತ್ತು ವರ್ಷಗಳ ಕಾಲವಾದರೂ ನಾನು ಹೀಗೆ ದುಡಿದಿರಬೇಕು. ನನ್ನ ಬಹು ಮಂದಿ ಗೆಳೆಯರಿಗೆ ಈ ನನ್ನ ಜೀವನ ಅಪರಿಚಿತವಾದುದು. ಏಕೆಂದರೆ—ಅಪರಿಚಿತ ಜನ, ನಾಡು, ನಗರಗಳಲ್ಲೇ ನಾನು ಈ ಕಾಲದಲ್ಲಿ ಬಹುವಾಗಿ ವಾಸಮಾಡುತ್ತಿದ್ದೆ. ಈ ಸಾಧನೆಯ ಪ್ರತಿಫಲವಾಗಿಯೇ ನನಗೆ ದೇವರ ಹುಚ್ಚು ಬಿಟ್ಟಿತು. ಅದರ ತೀರ್ಮಾನವನ್ನು ನನ್ನ ಗೆಳೆಯರ ಮುಂದಿರಿಸಿದಲ್ಲಿ, ನನ್ನ ಮುಂದಿನ ವಾದಸರಣಿ ಸ್ಪಷ್ಟವಾದೀತೆಂದು ಹಾಗೆ ಮಾಡುತ್ತಿದ್ದೇನೆ.

**ಯಾವ ದೇವರು ?**

ತಾಸು ತಾಸುಗಳ ತನಕ ನಾನು ಚಿಂತಿಸಿದ ದೇವರು ಯಾರು ? ಕೆಲವೊಮ್ಮೆ ಭಾವನೆಯು ಉಕ್ಕಿ 'ದೇವರೇ ಕಾಣಿಸು' ಎಂದು ಕಣ್ಣೀರು ಕರೆದುದು ಯಾವ ಸ್ವರೂಪಕ್ಕಾಗಿ ? ಅವನನ್ನು ಚಿಂತಿಸುವ ಗಳಿಗೆಯಲ್ಲೆಲ್ಲ—'ರಾಮ' 'ಕೃಷ್ಣ' ಎಂಬುವಾಗಲೆಲ್ಲ,

ನನ್ನ ಮನಸ್ಸಿನ ಮುಂದೆ ಏನು ನಿಂತಿರುತ್ತಿತ್ತು? ನನ್ನ ದೇವರ ಔದಾರ್ಯದ ಗಾನ ಮಾಡುವಾಗ, ಯಾವ ಗುಣಗಳ ಕಲ್ಪನೆ ನನಗಾಗುತ್ತಿತ್ತು?—ಇವನ್ನೆಲ್ಲ ನಾನು ಯೋಚಿಸದೆ ಇರಲಿಲ್ಲ.

ನಾನು ಎಷ್ಟು ಚಿಂತಿಸಲಿ, ಹೇಗೂ ಚಿಂತಿಸಲಿ–ನನ್ನ ದೇವರು ನನ್ನ ಮಿತಿಯನ್ನು, ನನ್ನ ಜೀವನ ಅನುಭವಗಳ ಮಿತಿಯನ್ನು ಹೊರಗೆಡಹುವುದಾಗಿತ್ತು. ದೇವರ ಚೆಲುವು, ದೊಡ್ಡಸ್ತಿಕೆ, ಉದಾರ ಗುಣಗಳು ನಮ್ಮ ನಮ್ಮ ಅನುಭವಗಳ ಮಿತಿಯನ್ನು ದಾಟಲಾರದೆಂಬುವ ತಿಳುವಿಗೆ ನಾನು ಬರಬೇಕಾಯಿತು.

### ಬಿಂಬ, ಶಬ್ದ

ನಾವು ಚಿಂತಿಸಲಿ, ಯೋಚಿಸಲಿ—ಅವೆಲ್ಲ ಗುಣಗಳು ಬೆಳೆಯಲು, ಕೆಲಸ ಮಾಡಲು, ಎರಡು ಮುಖ್ಯ ಸಾಧನಗಳಿಂದಾಗಿ ಆ ಕೆಲಸ ಸಾಗಬೇಕಾಗುತ್ತದೆ. ಮೊದಲನೆಯದು ಬಿಂಬ, ಎರಡನೆಯದು ಶಬ್ದ. ನಮ್ಮ ಯಾವತ್ತು ನೆನಪುಗಳು ಕಟ್ಟಕಡೆಗೆ ಈ ಆಕಾರಗಳನ್ನು ತಾಳುತ್ತವೆ. ವ್ಯಕ್ತ ವಸ್ತುಗಳೆಲ್ಲ—ಬಿಂಬಗಳ ರೂಪದಲ್ಲಿ ನಮ್ಮ ಮುಂದೆ ಹೊರಳುತ್ತವೆ. ಅವ್ಯಕ್ತ ವಿಷಯಗಳು (Abstract) ಶಬ್ದಗಳ ರೂಪದಲ್ಲಿ ಮನಸ್ಸಿನಲ್ಲಿ ನಲಿಯುತ್ತವೆ. ಇನ್ನು ಕೆಲ ಕೆಲವು, ಅಲ್ಪವಾಗಿ–ನಾದ, ಗಂಧ, ರಸ, ಸ್ಪರ್ಶಗಳ ಪ್ರತೀಕಗಳಾಗಿ ಬರಬಹುದು. ತೀರ ಹೆಚ್ಚಿನ ಕೆಲಸ, ವಿಸ್ತಾರವಾದ ಕೆಲಸ ಬಿಂಬ, ಶಬ್ದಗಳಿಂದಲೇ ನಡೆಯಬೇಕು. ದೈವದ ವಿಚಾರವಾಗಿಯಾದರೂ ಸರಿಯೆ, ಬೇರೆ ಇನ್ನಾವ ವಿಚಾರವಾಗಿಯಾದರೂ ಸರಿಯೆ:—ತಾಯಿಯ ಕಲ್ಪನೆ ಮಾಡಲು ಮನಸ್ಸು ಹೊರಳಿದೊಡನೆ–ನಮ್ಮ ಮನೆ. ತಾಯಿಯ ರೂಪ, ಅವಳ ಪ್ರೀತಿಯ ನಡಿಗೆ ಕಾಣಿಸುತ್ತದೆ. ಸಾಮಾನ್ಯ ತಾಯ್ತನದ ವಿಚಾರ ನೆನೆಯುವಾಗ, ನಮ್ಮ ತಾಯಿಯ ಬಿಂಬದ ಜತೆಗೆ, ಇನ್ನೂ ಅನೇಕ ಕಂಡ, ಕೇಳಿದ ಮಾತೆಯರ ಬಿಂಬಗಳು ಮಾಲಿಕೆಯಾಗಿ, ನಮ್ಮ ಮುಂದೆ ಬರಬಹುದು. ಕೇಳಿದ ಮಾತೆಯರು—ತಿರುಗಿ ಪರಿಚಿತವಾದ ಸ್ತ್ರೀ ರೂಪುಗೊಂಡೇ ನಮ್ಮ ಕಣ್ಮುಂದೆ ನಿಲ್ಲುತ್ತಾರೆ. ಮನಸ್ಸಿನ ಮೇಲೆ ಮೂಡುವ ವಿಷಯಗಳು, ಬಿಂಬಕ್ಕೆ ಸಂಕೇತವಾದ, ಇಲ್ಲವೆ ಅನುಭವಕ್ಕೆ ಸಂಕೇತವಾದ ಶಬ್ದಗಳ ಮುಖಾಂತರ ಬರುವುದು ಸಹಜ. ಪ್ರೀತಿ–ಎಂದು ನೆನೆದರೆ, ಪ್ರೀತಿಯ ಒಂದು ಕೃತಿಯ ಬಿಂಬವು ಮನಸ್ಸಿನಲ್ಲಿ ಮೂಡುತ್ತದೆ: ಅದು ಇಲ್ಲದಾಗ ಪ್ರೀತಿ ಸಂಬಂಧವಾದ ಒಂದು ಮಾತೋ, ವಾಕ್ಯವೋ ಮನದಲ್ಲಿ ಓಡಾಡುತ್ತದೆ.

ನಮ್ಮ ಈಶ ಚಿಂತನೆಯ ಪ್ರಯತ್ನದಲ್ಲಿ, ಬೇರೆಯ ರೀತಿ ಮನಸ್ಸಿಗೆ ಇದಿರಾಗುವುದಿಲ್ಲ. ದೇವರ ರೂಪು, ಕೃತಿಗಳು, ಅವನ ಗುಣಗಳು—ನಮ್ಮ ಚಿಂತನೆಗೆ ಗುರಿಯಾಗುವಾಗ ಅನೇಕ ಬಿಂಬಮಾಲಿಗಳು, ಅವನ್ನು ಪುಷ್ಟಿಗೊಳಿಸುವ ಮಾತುಗಳು, ಮನಸ್ಸಿನಲ್ಲಿ ಓಡಾಡುತ್ತವೆ. ದೇವರ ರೂಪವನ್ನು ನಾವು ನೆನೆಯಲು ಯತ್ನಿಸುತ್ತೇವೆಂದು ಭಾವಿಸಿರಿ. ಮನಸ್ಸು ಅದಕ್ಕೆಂದು ಚೆಲುವಿನ ಆಕೃತಿಯನ್ನು ಹೆಣೆಯುತ್ತದೆ. [illegible] ನಮ್ಮ ಕಲ್ಪನೆಯಲ್ಲಿ, [illegible] ಮನುಷ್ಯಾಕೃತಿಯಾಗಿದ್ದರೆ.

ಸುಂದರ ಮನುಷ್ಯನೊಬ್ಬನು ನಮಗೆ ಇದಿರಾಗುತ್ತಾನೆ. ಎಷ್ಟು ಸುಂದರನವನು? ಆಗ–ರವಿವರ್ಮನ ಒಂದು ಚಿತ್ರ ಬಿಂಬವೋ, ಒಂದು ಶಿಲ್ಪದಲ್ಲಿ ಕಂಡ ಬಿಂಬವೋ. ನಾಟಕ ಮಂಡಲದಲ್ಲಿ ಕೃಷ್ಣನ ಭೂಮಿಕೆಯನ್ನು ವಹಿಸಿದ ಹುಡುಗನ ಬಿಂಬವೋ ಬರುತ್ತದೆ. ದೇವರ ಉಡುಪು ತೊಡುಪುಗಳು, ನಮ್ಮ ಪರಿಚಿತ ಆವರಣದಿಂದಲೇ ಅಲ್ಲಿಗೆ ಬಂದು ಸೇರಬೇಕು. ಅವನ ವರ್ಣನೆಯಲ್ಲಿ ನಾವು ಕಂಡಿರದ ಆಭರಣದ ಹೆಸರೊಂದಿದ್ದರೆ "ವತ್ಸ ಲಾಂಛನ" ಎಂದಿದ್ದರೆ, ಅದು ಬರುವುದಿಲ್ಲ. ಬದಲು ನಮಗೆ ನಿತ್ಯ ಜೀವನದಲ್ಲಿ ಪರಿಚಿತವಾದ ತೋಡ, ವಂಕಿ, ಸರಿಗೆ, ಸರ, ಕಿರೀಟ. ಪೀತಾಂಬರ— ಇವುಗಳು ಬಂದು ಸೇರುತ್ತವೆ. ಇವನ್ನು ಕಾಣದಿದ್ದಲ್ಲಿ, ಇವುಗಳ ನಕಲಿಗಳು ಬೇರೊಂದು ಚಿತ್ರದಿಂದಲೋ, ಶಿಲ್ಪದಿಂದಲೋ, ನಟನ ಉಡುಗೆಯಿಂದಲೋ ಬಂದು ಕುಳಿತಿರಬೇಕಾಗುತ್ತದೆ.

**ಅನುಭವದ ಮಿತಿ**

ನನ್ನ ನಿತ್ಯ ಜೀವನದ ನೋಟದಲ್ಲಿ—ರವಿವರ್ಮನ ಕೃಷ್ಣ. ನಾಟಕ ಮಂಡಲದ ಕೃಷ್ಣರು ಮಾತ್ರ ಪರಿಚಿತರಾಗಿದ್ದರೆ, ಆಗ ಅವರು ಮಾತ್ರ ನನ್ನ ಧ್ಯಾನದ ಎಟುಕಿಗೆ ಸಿಗುವಂತಹರಾಗುತ್ತಾರೆ. ಒಂದೆರಡು ಶಿಲ್ಪವನ್ನೋ, ನಂದಲಾಲರ ಚಿತ್ರಗಳನ್ನೋ ನಾನು ಕಂಡಿರಲು ಅವುಗಳಾದರೂ ಬಂದಾವು. ಬದಲು, ನಾನೇ ನಂದಲಾಲರಂತೆ ಕೃಷ್ಣ ನನ್ನು ಕಟ್ಟಹೋದರೂ—ಒಂದಿಲ್ಲೊಂದು ಮನುಷ್ಯ ವಿಗ್ರಹ, ನನ್ನ ಹಳೆಯ ಅನುಭವ ಗಳ ವಿಶೇಷ ಪಾಕದಿಂದ ಉದ್ಭವಿಸಬೇಕು. ನಿತ್ಯಜೀವನದಲ್ಲಿ ನಾನು ಎಷ್ಟೆಷ್ಟು ಸುಂದರ ಕಾಯರನ್ನು ಕಂಡಿರುತ್ತೇನೆಯೋ, ಅಷ್ಟಷ್ಟು ಸುಂದರ ಕೃಷ್ಣ ರಾಮರನ್ನು ಮಾತ್ರ ನಾನು ಕಾಣಲು ಶಕ್ಯ. ನನ್ನ ಊಹಾಬಲವನ್ನು ನಾನು ಆದರಿಸುವವನಾದರೆ, ಈ ಅನುಭವ ಕ್ಕಿಂತ ಬರಿಯ ಒಂದು ಹೆಜ್ಜೆ ಮುಂದುವರಿದು—ಒಂದು ರೂಪದ ಕೈ, ಒಂದರ ಮುಖ ಒಂದರ ಅರಿವೆ, ಮತ್ತೊಂದೆರಡು ಹೊಸ ಒಡವೆಗಳನ್ನು ಕಟ್ಟಿ ಸೇರಿಸಬಹುದು. ಒಟ್ಟಿ ನಿಂದ ನನ್ನ ರೂಪಾನುಭವಗಳ ಮಿತಿಯಿಂದ ನನ್ನ ದೇವರ ರೂಪವು ಮಿತಿಗೊಳ್ಳುವು ದಾಯಿತು.

**ಗುಣ ಚಿಂತನೆ**

ಇನ್ನು ಭಜನೆಯಿಂದಲೋ ಕೇಕೆಯಿಂದಲೋ ಪರಿಣಾಮಗೊಂಡ ಮನಸ್ಸು ದೇವರ ಗುಣಾತಿಶಯವನ್ನು ಎಣಿಸಹೋದರೆ—ಅದರ ಚಳಕ ಮತ್ತಷ್ಟು ಕಡಿಮೆ. ಬಿಂಬಗಳು ಮಾಡಲಾರದ ಹಲವು ಕೆಲಸಗಳಿವೆ : ಶಬ್ದಗಳು ಅವನ್ನು ಪೂರೈಸಬೇಕಾಗು ತ್ತದೆ. ದೇವರ ಗುಣಾತಿಶಯಗಳನ್ನು ಕುರಿತು ಚಿಂತಿಸುತ್ತೇವೆ—ಎಂದು ತಿಳಿಯಿರಿ. ಆಗ ಔದಾರ್ಯ, ಪ್ರೇಮ ಮೊದಲಾದುವುಗಳ ಮಾತುಗಳು ನಮಗೆದುರಾಗುತ್ತವೆ. ಅವು ಗಳನ್ನು ಕುರಿತು ಇನ್ನಷ್ಟು ವಿಚಾರ ಮಾಡಿದಲ್ಲಿ—ಪ್ರೀತಿಸುವ ಜನಗಳ, ತಾಯ್ತಂದೆಗಳ ಚಿತ್ರವೋ, ಉದಾರಿಗಳ ಕೃತಿಯ ಬಿಂಬವೋ ಎದುರಾಗುತ್ತದೆ. ಹೀಗೆ ಯಾವ ಬಗೆ ಯಿಂದ ನಾವು ಚಿಂತನೆ ಮಾಡುತ್ತ ಹೋದರೂ—ಆಗ ನಮ್ಮ ನಿತ್ಯ ಜೀವನದ

ಒಂದೊಂದು ಅನುಭವವೂ ಈ ಬಿಂಬಗಳ ರಚನೆಗೆ ಕಾರಣವಾಗುತ್ತದೆ. ನಾವು ಕಂಡ ಉದಾರಿಗಳ ಮೇಲಿಂದ, ದೇವರ ಔದಾರ್ಯದ ಕಲ್ಪನೆಯಾಗಬೇಕು. ನಾವು ಸವಿದ, ಕಂಡ ಪ್ರೇಮದ ನೋಟಗಳಿಂದ, ದೇವರ ಪ್ರೇಮದ ನೋಟ ಕೆರಳಬೇಕು. ಈ ರೀತಿ ಅನುಭವದಿಂದ ನಿಲ್ಲಲಾರದ ಯಾವತ್ತು ಗುಣನಿರೂಪಣೆಗಳು, ಬರಿಯ ಶಬ್ದಗಳಾಗಿಯೇ ಉಳಿಯುತ್ತವೆ. ಕೇವಲ ಅರ್ಥವಿಲ್ಲದ ಶಬ್ದಗಳಿಗೂ ಅವಕ್ಕೂ ವ್ಯತ್ಯಾಸ ಉಳಿಯು ತ್ತದೆ.

## ವಿಸ್ತೃತ ಜೀವನದಿಂದ

ನಾವು ಕೃಷ್ಣನ ಮಧುರ ಭಾವವನ್ನು ಧ್ಯಾನಿಸುವಾಗ, ಅದರ ನೆಲೆಗಟ್ಟು ನಾವು ಕೇಳಿದ ಕತೆಗಳ ಮೇಲೆ ನಿಲ್ಲಬೇಕಾಗುತ್ತದೆ. ರಾಧಾಕೃಷ್ಣರ ಕತೆ ನಮಗೆ ತಿಳಿದುದಾದರೂ, ಅವರ ಮಧುರಭಾವವೇನೆಂದು ಕಲ್ಪಿಸುವಾಗ, ನಾವು ಕಂಡ ಉತ್ತಮ ದಾಂಪತ್ಯ ಜೀವನದ ನೆನಪೇ ಅದನ್ನು ಬಿಂಬಿಸಬೇಕು. ರಾಮನ ಶೌರ್ಯವು, ನಾವು ಜೀವನದಲ್ಲಿ ಕಂಡ ಜೀವನದ ಯಾವುದಾದರೂ ಒಂದು ಶೂರಕೃತಿಯಿಂದ ಬಿಂಬಿತವಾಗಬೇಕು. ಆದರೆ ನಾವು ಮೂಲತಃ ಸುಂದರವಾದ ದಾಂಪತ್ಯವನ್ನೂ, ಶೂರತನದ ಯಾವ ಕೃತಿ ಗಳನ್ನೂ ಕಾಣದವರಾಗಿದ್ದರೆ—ಆಗ ಕೃಷ್ಣನ ಮಧುರ ಭಾವ, ರಾಮನ ಶೌರ್ಯಗಳು ಬರಿಯ ಸದ್ದುಗಳಾಗಿಯೇ ಉಳಿಯುತ್ತವೆ. ಹುಟ್ಟು ಕಿವುಡನೊಬ್ಬನು ಕೃಷ್ಣನ ಕೊಳಲ ಗಾನದ ಕಲ್ಪನೆ ಮಾಡಲಾರನು. ಕಿವಿಯುಳ್ಳವನು ಸಹ, ಕೃಷ್ಣನ ಕೊಳಲ ಸವಿಯನ್ನು ನೆನೆಯಲು ಹೋದರೆ, ಜೀವನದಲ್ಲಿ, ಕೇಳಿದ ಏನಾದರೊಂದು ಕೊಳಲ ಗಾನದಿಂದಲೇ ಅದು ಬಿಂಬಿತವಾಗಬೇಕಾಗುತ್ತದೆ. ಹೀಗೆ ನಮ್ಮ ಜೀವನದ ಅನುಭವವು ಎಷ್ಟೆಷ್ಟು ವಿಸ್ತೃತವಾಗುವುದೋ ಅಷ್ಟು ಹೆಚ್ಚಿಗೆ ನಮ್ಮ ಭಾವನೆಯು ಕೆರಳಲು, ಬೆಳೆಯಲು, ಸಫಲವಾಗಲು—ಅನುಕೂಲವಾಗುತ್ತದೆ.

## ಜೀವನ ಮುಖ್ಯ

ಇದರಿಂದ ನನಗೆ ಹೊಳೆದ ಮುಖ್ಯವಾದೊಂದು ವಿಷಯವೆಂದರೆ ನಮ್ಮ ಬದುಕೇ ನಮ್ಮ ಭಾವನೆಗಳಿಗೆ ಅಡಿಗಲ್ಲು. ನಮ್ಮ ದೇವರು ಭಾವನೆಗಳಲ್ಲಿ ದೊಡ್ಡವನಾಗುವು ದಕ್ಕೆ, ಜೀವನ ದೊಡ್ಡದಾಗಬೇಕೆಂದು. ಎಷ್ಟು ಸವಿಯಾದ, ಸವಿಸ್ತಾರವಾದ ಜೀವನದ ಹಿನ್ನೆಲೆಯು ನಮಗಿರುತ್ತದೋ ಅಷ್ಟು ವಿಸ್ತಾರವಾದ ದೇವನು, ನಮಗೆ ಇದಿರಾಗು ತ್ತಾನೆ. ದೇವನು ನಮ್ಮ ಅನುಭವಗಳ ಮಿತಿಗೆ ಒಳಗಾಗಿರಲು, ಅನುಭವಗಳನ್ನು ನಿರಾ ಕರಿಸುವ ಸಿದ್ಧಾಂತ ನನಗೆ ಸಲ್ಲದೆನಿಸಿತು. ಜೀವನದಿಂದಲೇ ದೇವರು ಉದ್ಭವಿಸಬೇಕು, ಬೆಳೆಯಬೇಕು, ಹಿರಿಯನಾಗಬೇಕು. ಎಷ್ಟು ಎಷ್ಟು, ಜೀವನ ಹಿರಿದೋ, ಅಷ್ಟು ಅಷ್ಟು ದೇವರು ಹಿರಿದು. ಆದುದರಿಂದಲೇ ದೇವರಿಗಿಂತ ಜೀವನ ದೊಡ್ಡದು. ಅದೇ ದೇವರ ಮೂಲ.

ಈ ತನಕ ಸೃಷ್ಟಿಸಿದ ಸಾಕಾರ, ನಿರಾಕಾರ ದೇವರುಗಳನ್ನು ಕುರಿತು ವಿಚಾರಿಸುವ. ಇದರಲ್ಲಿ—ಎರಡನೆಯ ವರ್ಗದ ದೇವರನ್ನು ತತ್ವತಃ ನಿಲ್ಲಿಸಬೇಕಾಗಿದೆ. ತರ್ಕದಂಥ

ಆದರ ನೆಲೆ. ಅನೇಕ 'ನಿರ್'ಗಳ ಮೇಲೆ ದೇವರ ಗುಣ ನಿಂತಿದೆ. ನಮ್ಮ ಮನಸ್ಸು 'ಗುಣ'ಗಳ ಒಂದೊಂದು ರೂಪ ಕಲ್ಪಿಸಬಲ್ಲುದು. ಅದರ ಸ್ವಭಾವವೇ ಹಾಗಿದೆ. ಹೀಗಿರಲು–"ನಿರ್" ವರ್ಗದ ನೂರು ಗುಣಗಳಿರಲಿ, ಸಾವಿರವಿರಲಿ, ನಮ್ಮ ಎಟುಕಿಗೆ ಸಿಲುಕದ ವಸ್ತುಗಳಾಗುತ್ತವೆ. ಹೀಗಾಗಿ ಸಗುಣ ದೇವರೇ ನಮಗೆ ಪ್ರಿಯನಾಗಿದ್ದಾನೆ. ಆದರೆ ಜನತೆ ಎಂಥ ಸಗುಣ ದೇವರನ್ನು ನಿರ್ಮಿಸಿದ್ದಾನೆ–ಎಂದು ವಿಚಾರ ಮಾಡಿದಲ್ಲಿ–ಯಾವಾವ ಜನರಲ್ಲಿ, ಯಾವಾವ ನೆಲೆಯಲ್ಲಿ, ಯಾವಾವ ಕಾಲದಲ್ಲಿ, ಅವನ ಕಲ್ಪನೆ ತೊಡಗಿತೋ ಅವೆಲ್ಲವುಗಳ ಮಿತಿಯನ್ನು ತೊಟ್ಟು ಆತ ನಿರ್ಮಿತನಾಗಿದ್ದಾನೆ. ಯಹೂದಿಯರ ದೇವರು ಅವರಿಗೂ, ಇರಾಣಿಯರ ದೇವರು ಅವರಿಗೂ ಮಾತ್ರ ಆಗಲು ಇದೇ ಕಾರಣ. ಆರ್ಯಾವರ್ತದ ದೇವರುಗಳಲ್ಲಿ ಭರತಖಂಡದ ಹೊರಗೆ ಕಾಲಿಡದುದಕ್ಕೆ ಅದೇ ಕಾರಣ. ತಿರುಗಿ—ಸೂರ್ಯ ಚಂದ್ರ, ನರಕ, ಸೃಷ್ಟಿ—ಇವೆಲ್ಲವುಗಳು ಆಯಾಯ ಕಾಲದ ಜನಗಳ ತಿಳುವಳಿಕೆಯ ಮಿತಿಯನ್ನು ತಾಳಿವೆ.

**ಅನುಭವ, ಊಹೆ**

ವಿಷ್ಣುವಿನ ಪೀತಾಂಬರ, ಒಂಕಿ, ಸರಿಗೆ, ಕಿರೀಟಗಳು ಅವನ ಜನ್ಮಭೂಮಿ, ಜನ್ಮಕಾಲದ ಒಡವೆಗಳು. ಅವನನ್ನು ನಿರ್ಮಿಸಿದ ಜನಗಳು ದೇವರನ್ನು ಎಣಿಸಿದಾಗಲೆಲ್ಲ–ಬರಿಯ ಮನುಷ್ಯ ಕುಟುಂಬದ ಸುಖದುಃಖ ಚಿಂತಿಸಿದವರಾದುದರಿಂದ, ವಿಶ್ವಪಾಲಕನಿಗೂ—ತಾವು ತಿಳಿದ, ಉತ್ತಮ ಶರೀರವೆಂಬ ಮನುಷ್ಯಶರೀರವನ್ನು ಒದಗಿಸಿ ಕೊಟ್ಟರು. ಹೆಚ್ಚೆಂದರೆ ಕಲ್ಪನೆಯನ್ನು ಹೊಸೆದು–ನಾಲ್ಕು ಕೈಗಳನ್ನೋ, ನಾಲ್ಕು ತಲೆಗಳನ್ನೋ ಮೂರು ಕಣ್ಣನ್ನೋ ಸೇರಿಸಿಟ್ಟರು. ಆ ದೇವರಿಗೆ ಈಜಾಡಲು ಬಾರದಾಗ, ಅವನು ಮೀನಾಗಬೇಕಾಯಿತು. ಶೀರ ಕ್ರೂರಿಯಾಗಬೇಕಾದಾಗ ಸಿಂಹನಾಗಬೇಕಾಯಿತು. ಈ ಎಲ್ಲ ದೇವರುಗಳ ಕಲ್ಪನೆಯನ್ನು ಮಾಡಿದ ಜನಗಳು–ಇನ್ನೂ ವಿಶ್ವದ ದೇವರನ್ನು ಕಲ್ಪಿಸಲು ಅನುಭವ ಸಾಲದವರು, ಕಲ್ಪನೆ ಒದಗದವರು–ಎಂಬುದೇ ಚಿತ್ರಿತವಾಗುತ್ತದೆ.

**ನಮ್ಮಿಂದಾದ ದೇವರು**

ನಮ್ಮ ಭಾವನೆಗಳಿಂದ ಉಗಮವಾಗುವ ದೇವರು, ಅವನ ಚಿಂತನೆ ನಮ್ಮನ್ನು ಎತ್ತಬಹುದೇ—ಎಂಬ ಪ್ರಶ್ನೆ ಇದರ ಹಿಂದೆ ಹೊರಡುವುದು ಸಹಜ. ನಮ್ಮ ಮಿತಿಯಿಂದ ನಮ್ಮ ದೇವರಿಗೂ ಮಿತಿ, ನಮ್ಮ ದೇವರಿಂದ ನಮಗೂ ಮಿತಿ. ಆದರೆ ಇಲ್ಲೊಂದು ವ್ಯತ್ಯಾಸವಿದೆ. ನಮ್ಮಿಂದ ನಮ್ಮ ದೇವರ ಮಿತಿ–ಎನ್ನುವಾಗ ನಮ್ಮ ಅನುಭವ, ಊಹೆ—ಎರಡರ ಉತ್ಪನ್ನವಾಗಿ ನಮ್ಮ ದೇವರ ನಿರ್ಮಾಣವಾಗುವುದರಿಂದ, ಮಾನವನ ಊಹೆ ವಿಸ್ತರಿಸುವಷ್ಟರ ಮಟ್ಟಿಗೆ ಅವನ ಜೀವನ ಹಿರಿದಾಗಬಹುದು. ಮನುಷ್ಯ ಜೀವನ ಬೆಳೆಯುತ್ತಿರುವ ರೀತಿಯಾದರೂ ಹಾಗೇನೆ. ಅದರೆಡೆಯಲ್ಲಿ ದೇವರು. ದೊರತೇನೆ ಈ ಕೆಲಸ ಆಗಬೇಕೆಂಬ ನಿಯಮವಿಲ್ಲ. ಇನ್ನು—ದೇವನೊಬ್ಬನಿದ್ದಾನೆ–ಎಂದು ಒಪ್ಪಿದಲ್ಲಿ ನಾವು ಆತನಿಗೆ ಅಂಜಿ ನಡೆಯುತ್ತೇವೆ ಎನ್ನುವುದ

ರಿಂದಲೂ ದೇವರ ಭಾವನೆ ನಮಗೆ ಸಹಾಯಕವಾಗದೇ ಎನ್ನುವವರುಂಟು. ದೇವರು, ಅನವ ಭಕ್ತಿ, ಆರಾಧನೆ—ಇವೆಲ್ಲ ಎಷ್ಟು ಪರಿಯಂತ ನಿತ್ಯಜೀವನದ ನಡವಳಿಕೆಗೆ ಬಾರದೆ, ಕೇವಲ ನಮ್ಮ ಅವನ ಮನೋಸಂಬಂಧವಾಗಿರುತ್ತದೋ, ಅಲ್ಲಿಯು ತನಕ, ನಮ್ಮ ಬಾಳು ವಿತರಿಂದಲೂ ವಿಸ್ತರಿಸುವಂತೆ ನನಗೆ ಕಾಣಿಸದು. ದೇವರಿರುವನೆಂಬುವ ವನು ಬದುಕಿನಲ್ಲೆಲ್ಲ ಅದನ್ನು ಕಾಣದೆ, ತಿಳಿಯದೆ, ಮಾಡುವ ಯಾವತ್ತು ಪೂಜೆ ಗಳಿಂದ ಏನೂ ಆಗುವಂತಿಲ್ಲ.

**ದರ್ಶನ**

ನನ್ನ ಕೆಲವು ತೀರ ಆಪ್ತ ಗೆಳೆಯರಿದ್ದಾರೆ. ಅವರು ತಮಗೆ ದೇವರ ದರ್ಶನ ವಾಗಿದೆಯೆಂದೂ ಅಂದುದುಂಟು. ನನಗೆ ಅದೊಂದು ಸೋಜಿಗವೆನಿಸುವುದಿಲ್ಲ. ನಮ್ಮ ಯಾವುದೇ ಕಡುವಾದ ಚಿಂತನೆಯ ವಿಷಯವಾಗಿ ನಮಗೆ 'ದರ್ಶನ'ವಾಗಬಲ್ಲುದು. ನನಗೆ 'ಬೇನೆಯಿದೆ' ಎಂಬುದೇ ಮನಸ್ಸಿಗೆ ತೀರ ಹೊಳೆದರೆ, ಅದೇ ನಿಜವೆನಿಸಿ, ನಾವು ಬೇನೆಯಿಂದ ನರಳಬಹುದು. ಬೇನೆಯುಳ್ಳಿರುವಾತ ತನಗೆ ಬೇನೆಯಿಲ್ಲವೆಂದು ಮನಸ್ಸನ್ನು ನಿಲ್ಲಿಸಲು ಹಟತೊಟ್ಟರೆ, ಅದು ಹೋಗಬಹುದು. ಅದರಂತೆ ಅನೇಕ ಸುಂದರ ಕೃತಿ, ಕವನ, ಗಾನಗಳು—ಭಾವದಲ್ಲಿ ಮುಳುಗಿದಾಗ, 'ದರ್ಶನ'ಗಳಾಗಿಬಿಡುತ್ತವೆ. ಈ ಭಾವನೆ ಗಳ ಮಟ್ಟ, ಭವ್ಯತೆ, ಇವುಗಳೆಲ್ಲ–ಭಾವುಕನ ಅನುಭವದ ಮಿತಿಯನ್ನು, ಕಲ್ಪನೆಯ ಮಿರುಗನ್ನು ದಾಟಲಾರವು. ಜೀವನದ ಉಳಿದುದೆಲ್ಲವನ್ನು ಅಲ್ಲಗಳೆದು "ದೇವನೊಬ್ಬನೇ" ನಿಜವೆಂದು ಅಡಿಗಡಿಗೆ ಚಿಂತಿಸುವ ವ್ಯಕ್ತಿಯು ಮುಂದೆಯೂ ದೈವ "ದರ್ಶನ"ಕ್ಕಿಗ ಬಹುದು. ರಾಮಕೃಷ್ಣ ಪರಮಹಂಸರಿಗಾದಂತೆ, ಇದೇ ದರ್ಶನ ಮೇಲಿಂದ ಮೇಲೆ ಆಗ ಬಹುದು. ಆದರೆ ಈ ದರ್ಶನ ಬಿಂಬಿತರಾದ ರಾಮ, ಲಕ್ಷ್ಮಣ, ಸೀತೆಯರು ಯಾರೆಂದರೆ —ಅವರ ಅನುಭವದಿಂದ ಉಂಟಾದವರು. ಅವರು ಕೇಳಿದ ರಾಮಾಯಣದ ಕತೆ ಯಿಂದ ಕಲ್ಪಿತರಾದವರು. ಈ ಕಲ್ಪನೆಯ ಮಿತಿಯೇ ಅವರ ಜೀವನದ ಅನುಭವದ ಮಿತಿ. ಹೀಗೆ—ದರ್ಶನ ದೊರೆತ ನನ್ನ ಗೆಳೆಯರೂ ಇದ್ದಾರೆ. ಆದರೆ ಇಷ್ಟೇ ಸೋಜಿಗ –ಅವರ ಧರ್ಮ, ದೇವರ ಮೇಲಿನ ಖಾಸಗಿ ಪ್ರೇಮಗಳು. ಅವರ ಜೀವನದಲ್ಲಿ ಕೇವಲ ಸ್ವಜಾತಿಯ ಜನರೇ ಅವರ ಗೆಳೆಯರು. ಅದುದರಿಂದ "ದರ್ಶನ"ವಾದ ಬಳಿಕವೂ ಅವರ ಗುಣ ನಡತೆ, ವಾತ್ಸಲ್ಯಗಳು ಅವರ ಜನ, ಮನಗಳಿಗಿಂತ ಮೀರಿ ಹೋಗಿಲ್ಲ. ಇಸ್ರೇಯಲರನ್ನು ಉದ್ಧರಿಸಿ, ಈಜಿಪ್ಟಿನವರನ್ನು ದಂಡಿಸುವ ದೇವರು, ಕೇವಲ ನಂಬಿ ಗಸ್ಥರನ್ನು ಕಾಪಾಡುವ ದೇವರು, ಕೇವಲ ಭೂಸುರರ ಸಲುವಾಗಿ ಕಾದಿರಿಸಿದ ದೇವರು —ಹೀಗೆಲ್ಲ ನಿರ್ಮಾಣಗೊಂಡಿಲ್ಲವೇ? ಅಂತಹ ದೇವರುಗಳ ಸ್ವರ್ಗದಲ್ಲಿ ಇತರ ಜಾತಿಯ, ನಂಬಿಕೆಯ ಜನರು ಕಾಲಿಟ್ಟು ನಿಂತ ಬಣ್ಣನೆಯೂ ಅವರ ಪುರಾಣಗಳಲ್ಲಿ ಕೇಳಿಸುವುದಿಲ್ಲ. ಶ್ರೀ ರಾಮಕೃಷ್ಣರ ಜೀವನದಲ್ಲಿ ನಾವು ಕಾಣುವ ಇನ್ನೊಂದು ಸೆರಗಿದೆ. ಆರಂಭದಿಂದ ಬಡವರು, ದುಃಖಿಗಳು—ಎಂದರೆ ಅವರಿಗೆ ಕನಿಕರ. ಅವರ ಆರಂಭದ ನಡೆಗಳೂ—ದೇವರು ಎಲ್ಲದರಲ್ಲಿರುವನೆಂಬ ನಂಬಿಕೆಯಿಂದ ಬಂದುವು. ವ್ಯಕ್ತಿ ತನ್ನ

ಸುತ್ತಲಿನ ಪ್ರಪಂಚದೊಡನೆ ಹೇಗೆ ತನ್ನನ್ನು ಬಿಗಿದುಕೊಳ್ಳುತ್ತಾನೆಯೋ, ಅದರ ಮೇಲಿಂದ ಅವನ ಅನುಭವಗಳು ಹಿರಿದಾಗುತ್ತದೆ. ಹಿರಿಯ ಅನುಭವಗಳಿಂದ ತುಂಬಿದುದೇ ದೊಡ್ಡ ಜೀವನ, ಅಂಥ ಭಕ್ತರ ದೇವರೂ ದೊಡ್ಡವನು.

**ದರ್ಶನದ ಮಿತಿ**

ನಾವು ನಮ್ಮ ಚಿಂತನೆಯಿಂದ, ಚಿಂತನೆಗೆ ಗುರಿಯಾದ ವಸ್ತುವಿನ ದರ್ಶನ ಹೊಂದಬಹುದು. ಅದರಿಂದ ಜೀವನಕ್ಕೆ ಸೊಗಸನ್ನು ತರಬಹುದು. ವಿಜ್ಞಾನಿಯಾದವನು ತನ್ನ ದರ್ಶನಗಳಿಂದ ತನಗೂ ಇತರರಿಗೂ ಜ್ಞಾನ ದೊರಕಿಸಿ, ಈ ಸೊಗಸನ್ನು ಹಲವರಿಗುಣಿಸಬಹುದು. ಆದರೆ ಈ ದರ್ಶನದಿಂದ, ನಮ್ಮ ಮುಂದಿನ ಜನ್ಮ ತಪ್ಪೀತೇ—ಎಂದರೆ, ಅದು ಉಳಿದವರಿಗಿದ್ದರೆ, ನಮಗೂ ತಪ್ಪದು. ಇತರ ಜೀವಿಗಳಿಗಿಲ್ಲದ್ದು ನಮಗೂ ಬರಲಾರದು. ಆ ಪ್ರಶ್ನೆ ಇಂಥ "ದರ್ಶನ"ದ ಮೇಲೆ ಅವಲಂಬಿಸಿಲ್ಲ,

**ನಿರಾಕರಣೆ ತಪ್ಪು**

ಬದುಕು ವಿಸ್ತರಿಸಲು ಯಾವುದು ನಮಗೆ ಅವಶ್ಯ ? ನಮ್ಮೆಲ್ಲ ಶಕ್ತಿಗಳು, ಸುತ್ತಲಿನ ಪ್ರಪಂಚದಲ್ಲಿ ಅವುಗಳನ್ನು ನಾವೆಷ್ಟು ಎಷ್ಟು ನಿರಾಕರಿಸುತ್ತೇವೆಯೋ, ಅಷ್ಟು ಅಷ್ಟು ನಮ್ಮ ಅನುಭವಗಳು ಮಿತಗೊಳ್ಳುತ್ತವೆ. ಅನುಭವ—ಎಂದರೆ ಒಳಿತೂ ಇದೆ; ಕೆಟ್ಟದೂ ಇದೆ. ಎಚ್ಚರದಿಂದ ಪ್ರತಿಯೊಂದನ್ನೂ ತಿಳಿದು ಮುಂದುವರಿಯುವ ಜೀವಿ, ಯಾವ ಅನುಭವದಿಂದ ಬದುಕು ಸುಖಮಯವಾದೀತೆಂದು ತಿಳಿಯುತ್ತಾನೆ, ಯಾವ ದೃಷ್ಟಿಯಿಂದ ಬದುಕು ಹಿಗ್ಗುವದು ಎಂಬುದನ್ನು ತಿಳಿಯುತ್ತಾನೆ. ಈ ವಿಷಯವಾಗಿ ಇನ್ನೊಮ್ಮೆ ಚರ್ಚಿಸುವ. ಪ್ರಸ್ತುತಃ, ಅನುಭವದಿಂದ ಬದುಕು ಬೆಳೆಯಲು ನಾವು ಜೀವನ ನಿರಾಕರಿಸುವುದಾಗಲಿ, ಬಾಳ್ವೆಯು ಅರ್ಥವಿಲ್ಲದ್ದು—ಎಂದು ತಿಳಿಯುವುದಾಗಲಿ ಸಮನಾದ ಮಾರ್ಗವಲ್ಲ—ಎಂದಂತಾಯಿತು. ಇಳೆಯ ಬಣ್ಣ ಬೆಡಗುಗಳು ಮಾಯವೆಂದೋ, ಅರ್ಥವಿಲ್ಲದ್ದೆಂದೋ ನಾವು ನಮ್ಮ ಕಣ್ಣಿಗೆ ಪಾಠ ಕಲಿಸಿ, ಮನಸ್ಸಿಗೂ ಬೋಧಿಸಿದ್ದಾದರೆ—ಆಗ ನಾವು ನಮ್ಮ ಕಣ್ಮುಂದೆ ನಿಲ್ಲಿಸುವ ದೇವರ ಗೊಂಬೆಯ ನೀಲ ಮೇಘದ ಬಣ್ಣಕ್ಕೆ ಯಾವ ಮೋಹಕತೆಯೂ ಬರಲಾರದು. ಇಳೆಯ ಅರಿವೆ, ಆಭರಣಗಳಲ್ಲಿ ಚೆಲುವನ್ನು ಕಾಣಲಾರದೆ ಹೋದರೆ, ಇಲ್ಲಿನ ಹೂವುಗಳಲ್ಲಿ ಮೋಹಕತೆ ಇಲ್ಲವೆಂದು ನಮ್ಮ ಮನ ಹೇಳುವಲ್ಲಿ, ಅವೇ ನಿರುಪಯೋಗಿ ವಸ್ತುಗಳ ಕಂತೆಯನ್ನು ನಮ್ಮ ದೇವರ ಗೊಂಬೆ ಹೊತ್ತುನಿಂತರೂ ಅಸಹ್ಯವಾದೀತು. ಇಲ್ಲಿ ಚೆಲುವು ಮಾಯೆಯಾದರೆ, ನಮ್ಮನ್ನು ದುರ್ಬಲಗೊಳಿಸುವುದಾದರೆ—ಈ ಚೆಲುವಿನ ಅನುಭವಗಳಿಂದಲೇ ಹೊರಡುವ ದೇವನ ಚೆಲುವು, ಅದೇ ಕೆಲಸ ಮಾಡಬೇಕು. ಲೋಕದಲ್ಲಿ ಬದುಕಿರುವ ಮನುಷ್ಯ—ತನ್ನ ಕಣ್ಣು, ಕಿವಿ, ರಸನೆ. ಮೂಗು ತ್ವಚೆಗಳನ್ನು ಬರಡಾಗಿಸಿದುದರಿಂದ, ಏನೂ ಮಾಡಿದಂತಾಗುವುದಿಲ್ಲ. ಇಂದ್ರಿಯಗಳೇ ನಮ್ಮ ಬಂಧನಕ್ಕೆ ಕಾರಣವಾಗುವುದಾದರೆ, ಭಕ್ತರು ಕುರುಡರೂ, ಕಿವುಡರೂ, ಮೂಗು ಹರಕರೂ, ಆಗುವುದು ತಮ್ಮ ಸಾಧನದ ಪ್ರಥಮ ಮೆಟ್ಟಿಲೆನಿಸಬಹುದು. ಹಾಗಲ್ಲ—ಪ್ರೇಕ್ಷಕನ ನೋಟದ ರೀತಿಯಲ್ಲಿ

ಕೊರತೆ ಹುದುಗಿರಬಹುದು. ಅದನ್ನು ತಿಳಿದು ನಿವಾರಿಸುವ ಗುರಿ ನಮಗಿರಲಿ.

**ಗುರಿ—ಸಂತೋಷ**

ಮನುಷ್ಯನು "ಈಶ ಚಿಂತನೆಯೊಂದೇ ಸುಖ, ಉಳಿದೆಲ್ಲವೂ ದುಃಖಮಯ" ಎಂಬ ತೀರ್ಮಾನವನ್ನು ತಂದುಕೊಂಡು, ತಾನು ನಂಬಿದುದನ್ನು ಸಾಧಿಸಿ ಸಂತೋಷ ಪಡಬಹುದು. ಅತೀವ ಸಾಧನೆಯಿಂದ ಬರುವ ಯಾವ ಬಗೆಯ ಯಶಸ್ಸೂ, ಹೆಚ್ಚಿನ ನೆಮ್ಮದಿಯನ್ನು ಕೊಡಬಹುದು. ಕೆಲವರು ತಮ್ಮ ಸಾಧನೆಯ ಗುರಿಯನ್ನು ಪದವಿ ಯನ್ನಾಗಿಯೋ, ಹಣವನ್ನಾಗಿಯೋ ಇರಿಸಿಕೊಳ್ಳುತ್ತಾರೆ. ಇನ್ನೂ ಕೆಲವರ ಗುರಿ ದೇವರೋ, ಇನ್ನಾವುದೋ ಒಂದು ಸತ್ಯ ಶೋಧನೆಯೋ ಆಗಿಬಿಡುತ್ತದೆ. ಆ ಗುರಿ ಯನ್ನೇರುವ ತನಕ ಮನುಷ್ಯನಿಗೆ ತಾಳ್ಮೆಯಿಲ್ಲ, ಸಂತೋಷವೂ ಇಲ್ಲ ; ಗುರಿಯನ್ನೇರಿ ದಲ್ಲಿ ಆನಂದವುಂಟಾಗುತ್ತದೆ. ಈಶನನ್ನು ಹೊಂದುವೆವು ಎಂಬ ಅಭಿಲಾಷೆಯಲ್ಲಿಯೂ ಹಾಗೇನೆ. "ದರ್ಶನ"ವಾಗದೆ ಹೋದರೆ ದುಃಖವೇ. ದರ್ಶನವಾಯಿತೆಂದರೆ ಸಂತೋಷ. ಈ ದರ್ಶನವು ತನ್ನಲ್ಲೇ, ತನ್ನಿಂದಲೇ ಕಾಣುವ ದರ್ಶನ. ಅನೇಕ ಬಗೆಯ ಸತ್ಯಾ ನ್ವೇಷಣೆಗಳೆಲ್ಲವೂ ಈ ರೀತಿಯ ದರ್ಶನದಲ್ಲಿ ಪರಿಣಮಿಸಬಹುದು. ಚಿರಿಯ ರೂಪು ಪೊಂದರ ಕಲ್ಪನೆಯನ್ನು ಅತಿಕರಿಸಿ ಅದನ್ನು ದರ್ಶನವಾಗಿ ಮಾಡಿಕೊಳ್ಳುವುದಕ್ಕಿಂತ, ಜೀವನದ ಸತ್ಯ, ಸೊಗಸುಗಳ ಕಿಂಚಿತ್ತಾದರೂ ಅರಿವನ್ನು ತಂದುಕೊಡುವ, ಅನ್ವೇ ಷಣೆಯೂ ಇನ್ನೂ ಸೊಗಸಿನದು ; ಅದಕ್ಕಿಂತಲೂ ಸೊಗಸಿನದು. ಈ ಸೊಗಸಿನ ದರ್ಶನವಾಗಲು, ಬಾಡದಲ್ಲಿಯೇ ವಿಸ್ತಾರ ಜೀವನ ಬೇಕಾಗುತ್ತದೆ ; ಬರಿಯ 'ಈಶ'ನ ರೂಪ ಸಿದ್ಧಿಗೆ ಇದು ಬೇಕಿಲ್ಲ. ವಿಸ್ತೃತವಾದ ಜೀವನವಿಲ್ಲದವನ 'ಈಶ' ದರ್ಶನವು ಸಹ ಸಂಕುಚಿತ ರೂಪದ್ದೇ.

**ಶಾಂತಿ**

ಈ ತನಕ ದೈವವನ್ನು ಗುರಿಯಾಗಿರಿಸಿಕೊಳ್ಳುವ ವಿಚಾರ ಹೇಳಿದೆ. ಈಶನ ದರ್ಶನ ವಾಗಲಿ, ಆಗದಿರಲಿ—ಆ ರೀತಿಯ ಚಿಂತನೆ. ಘಟನೆಗಳು ಮನಸ್ಸಿಗೆ ನೆಮ್ಮದಿಯನ್ನು ಕೊಡುವುದಿಲ್ಲವೆ ? ಮನುಷ್ಯನಿಗೆ ಬೇಕಾದುದು ಶಾಂತಿ. ಅದು ದೊರೆತರಾಯಿತಲ್ಲ— ಎನ್ನುವವರುಂಟು. ಶಾಂತಿಯನ್ನು ದೊರಕಿಸಲು ಯಾವುದು ಬೇಕು, ಯಾವುದು ಬೇಕಿಲ್ಲ—ಎಂಬುದನ್ನು ಈಗ ವಿಚಾರಿಸೋಣ. ಮನಸ್ಸು ಬಹುಮುಖಿವಾಗಿ ಓಡುವುದ ರಿಂದ ಅಶಾಂತಿ ಬರುವುದುಂಟು. ಅದನ್ನು ಯಾವುದಾದರೊಂದು ಉದ್ದೇಶದ ಕಡೆಗೆ ಹರಿಯಗೊಟ್ಟರೆ—ಶಾಂತಿ ಉಂಟಾಗಬಹುದು. ಆ ಗುರಿಯನ್ನು ಸೇರುವ ತನಕ ಮನಸ್ಸು ತಳಮಳವಾಗಿಯೇ ಇರುತ್ತದೆ. ಆದರೂ ಗುರಿಯ ಅನ್ವೇಷಣದಲ್ಲಿ, ಅನೇಕ ಜ್ಞಾನಗಳು ಉಂಟಾಗಿ, ಅದರಿಂದಲೂ, ಒಂದೊಂದು ಬಗೆಯ ತಿಳಿವು ಪ್ರಾಪ್ತಿಸಿ— ಶಾಂತಿ ದೊರೆಯಬಹುದು. ಇದು ಈಶ ಚಿಂತನೆಯೊಂದಕ್ಕೇ ಅಲ್ಲ, ವೈಜ್ಞಾನಿಕ ಶೋಧೆಗೂ, ಯಾವುದೇ ಕಲಾಸೃಷ್ಟಿಗೂ ಅನ್ವಯಿಸುವಂತಹ ಮಾತು. ಗಣಿತಜ್ಞನಿಗೆ ಅದರಿಂದ ಶಾಂತಿ ದೊರೆಯಬಲ್ಲದು. ವಿಜ್ಞಾನಿಗೆ ತನ್ನ ಸಂಶೋಧನೆಯಿಂದ ಹೆಚ್ಚಿನ

ಶಾಂತಿ ದೊರೆತಿರಬಹುದು. ಮನಸ್ಸು ಯಶಸ್ಸನ್ನು ಗಳಿಸಿದಲ್ಲಿ ಶಾಂತಿ ಆಹ್ಲಾದವಾಗಿ ಬಿಡಬಹುದು. ಆದರೆ ಈ ಬಗೆಯ ಶಾಂತಿ ಬಂದರೂ 'ಜೀವನ'ವೇನೆಂಬ ಪ್ರಶ್ನೆ ಉಳಿದೇ ಉಳಿಯಬಹುದು. ಬದುಕುವುದು ಗಣಿತಕ್ಕಾಗಿ, ಬದುಕುವುದು ಜ್ಞಾನಕ್ಕಾಗಿ, ಇಲ್ಲವೆ ಬದುಕುವುದು ದೇವರಿಗಾಗಿ–ಎಂಬ ತೀರ್ಮಾನ ಇದರಿಂದಾಗದಷ್ಟೆ.

**ಎಲ್ಲಿಂದ ಶಾಂತಿ ?**

ಈಗ ನಾನು ಚಿಂತನೆಯ ನನ್ನ ಸಾಧನವನ್ನು ಪರಿಶೀಲಿಸುತ್ತೇನೆ. ಈ ಸಾಧನೆಗಳಲ್ಲಿ ಏಕಾಗ್ರಚಿತ್ತತೆಯು ಒಂದು ಅಂಶ. ಅದನ್ನು ಕುರಿತೇ ಮೇಲೆ ಹೇಳಿದ್ದು, ಇನ್ನೊಂದು ಭಾವಪ್ರಕಟನೆಯ ಸಾಧನವಾದ "ಗೀತ" ಭಜನೆಯಿಂದಲೇ ಶಾಂತಿ ದೊರೆಯಬಹುದು. ಹಾಡಿನ ಒಂದು ಶಬ್ದವೂ ತಿಳಿಯದೆ, ಗೀತೆಯ ಅರ್ಥ ತಿಳಿಯದೆ, ಬರಿಯ ಯಾಂತ್ರಿಕ 'ರಾಮ ರಾಮ'ಗಳಿಂದಲೂ ಶಾಂತಿ ಬರಬಹುದು. ಕೆಲವು ಬಾರಿ ಬರುತ್ತದೆ. ಇವುಗಳಲ್ಲಿ—ಎರಡು ಕಾರಣಗಳು ಸೇರಿವೆ. ಒಕ್ಕೊರಲ ಗೀತ, ಶ್ರುತಿ ಬದ್ಧವಾದ ಲಹರಿಗಳು ಮನಸ್ಸನ್ನು ಒಂದೇ ಕಡೆಗೆ ಸೆಳೆಯುವುದರಿಂದ ಆ ಶಾಂತಿ ಬರುತ್ತದೆ; ಲಾಲಿಯ ಅರ್ಥ ತಿಳಿಯದೆ ಕೂಸಿಗೆ ನಿದ್ರೆ ತರುವ ಶಾಂತಿಯಂತೆ. ಇನ್ನೊಂದು ಗೀತದಿಂದ ಪ್ರೇರಿತವಾಗುವ ಶಾಂತಿ. ಆ ಗೀತದಿಂದ ನೀವು ರಾಮ–ಕೃಷ್ಣರನ್ನು ಕಿತ್ತರೂ, ಆ ಶಾಂತಿ ಬರುತ್ತದೆ; ಅದನ್ನು ಮಾತಿನ ಬದಲು ವಾದ್ಯದಲ್ಲಿ ನುಡಿಸಿದರೂ ಆ ಶಾಂತಿ ಬರುತ್ತದೆ. ಅದಕ್ಕೆ ಕಾರಣವಾದದ್ದು ಆ ಗೀತದ ರೂಪ, ಆ ಗೀತದ ರೂಪಕ್ಕೆ ಕಿವಿಯೊಡ್ಡಿ ಸುಖಿಸಬಲ್ಲ ಕಿವಿಯ ಸಂಸ್ಕಾರ.

ಭಜಕನು "ಅಮಲ ಮುಖ ರಾಮ ಭಜನ ಕೋ ದಿಯಾ" ಎಂದು ಆಲಪಿಸುವಾಗ, ಆ ಮಾತುಗಳ ನೆನವರಿಕೆ, ನಮ್ಮ ಅನುಭವಗಳು, ರಾಮನ ವಿಷಯದಲ್ಲಿ ಮನ ಓಡಿಸಲು ಸಹಾಯ ಮಾಡಬಹುದು. ಆ ಬರಿಯ ರಾಗ ಲಹರಿಯೇ ತನ್ನ ಸ್ವಭಾವ ಶಕ್ತಿಯಿಂದ ನಮ್ಮ ತಲೆದೂಗಿಸಬಹುದು. ಆದುದರಿಂದ ನಮಗೆ ಭಜನೆಯಿಂದ ದೊರೆಯುವ ಶಾಂತಿಯು 'ರಾಮ'ನಿಂದ ದೊರೆಯಿತೇ, ರಾಮನಾಮಕ್ಕೆ ಬಳಸಿದ ಗಾನದಿಂದ ದೊರೆಯಿತೇ, ಎಂದು ಮೊದಲು ನಿರ್ಣಯಿಸಿಕೊಳ್ಳುವುದು ಲೇಸು.

ಮುಂಜಾನೆಯ ಹಕ್ಕಿಗಳ ಉಲಿ, ಹರಳುಗಲ್ಲಿನ ಮೇಲೆ ಓಡುವ ನದಿಯೊಂದರ ನಾದ, ಸಂಜೆಯ ಗಾಳಿಗೆ ಮಿದುವಾಗಿ ಉರುಳುವ ಕಡಲಿನ ಮೊರೆತ, ಅಲೆಗಳು ಮರಳ ದಿನ್ನೆಯನ್ನೇರಿ ತಿರುಗಿ ಕಡಲನ್ನು ಸೇರುವ ಜೋಗುಳ—ಇವೆಲ್ಲ ನಮ್ಮ ಅನಂತ ಜೀವನದ ಕಲ್ಪನೆಯಿಂದ ಸಂಸ್ಕಾರಗೊಂಡ ಕಿವಿಯ ಮೇಲೆ, ಭಜನೆ ಕೀರ್ತನೆಗಳು ಮಾಡುವುದಕ್ಕಿಂತ ಇಮ್ಮಡಿ ಕೆಲಸ ಮಾಡಬಹುದು. ಏನಿಲ್ಲವಾದರೆ—ತಾಯಿ ಮಗುವಿನ ಮುಂದೆ ಹಾಡುವ ಜೋಗುಳದ ಶಾಂತಿಯನ್ನಾದರೂ ನಮಗೆ ಉಣಿಸಬಹುದು.

**ಇಂದ್ರಿಯಾನುಭವ ಸಹಾಯ**

ಶಾಂತಿಯ ಸಂಧಾನವು ಮೂಲತಃ ನಮ್ಮ ಗುರಿಯಾದಲ್ಲಿ—ಇಂದ್ರಿಯಗಮ್ಯವಾದ ಶಕ್ತಿಗಳು–ಕಿವಿ, ಕಣ್ಣು, ನಾಲಿಗೆ, ಮೂಗು, ತ್ವಚೆಗಳೇ ಅದನ್ನು ತಂದು ಕೊಡಬಲ್ಲುವು.

ನಮ್ಮಗಳ ಅನುಭವವು ನಮಗೆ ಎಷ್ಟೆಷ್ಟು ಸೂಕ್ಷ್ಮವಾಗಿ ಉಂಟಾಗುವದೋ ಅಷ್ಟಷ್ಟು ತೀಕ್ಷ್ಣ, ಸವಿಸ್ತಾರ, ಸೂಕ್ಷ್ಮವಾದ ಸುಖಗಳ ಕಲ್ಪನೆಯಾಗುತ್ತದೆ. ನಮ್ಮ ಇಂದ್ರಿಯಗಳಿಗೆ ದೊರೆತ ಅನುಭವ, ನಮ್ಮನ್ನು ಜಗತ್ತಿನ ಒಡವೆಗಳ, ಎಷ್ಟೆಷ್ಟು ಹೆಚ್ಚಿನ ಪರಿಚಯ ಮಾಡಿಕೊಟ್ಟಿವೆಯೋ, ಅಷ್ಟಷ್ಟು ಭಾವನೆಗಳೂ ಕೆರಳುವವು. ಇವೆರಡರ ಮೇಳದಿಂದ ಶಾಂತಿ, ಆಹ್ಲಾದ, ತೃಪ್ತಿ ಇವುಗಳ ವಿವಿಧ ಪಾಕಗಳನ್ನು ನಾವು ಪಡೆಯಬಹುದು.

**ಇಲ್ಲಿಂದ ತಪೋರಾಜ್ಯಕ್ಕೆ**

ಅಮಾವಾಸ್ಯೆಯ ಕಗ್ಗತ್ತಲಲ್ಲಿ, ಬಾನಿಗೆ ಮುಖಮಾಡಿಕೊಂಡು ಮಲಗಿರುತ್ತ, ಚುಕ್ಕಿಗಳ ವಿಸ್ತಾರ ರಾಜ್ಯವನ್ನು ನೋಡುತ್ತಿರಲು ಭವ್ಯಶಾಂತಿಯು ಅನುಭವವಾಗುವುದಿಲ್ಲವೆ ? ಕಡಲಿನ ಮಳಲ ದಂಡೆಯ ಮೇಲೆ ಕುಳಿತು ದಿಗಂತದ ಹರಹನ್ನೆಲ್ಲ ತುಂಬುವ ಸಾಗರದ ನೀಲಿಮತೆಯನ್ನು ಕಂಡರೆ ಎದೆಯು ತುಂಬುವುದಿಲ್ಲವೆ? ಬಾನನ್ನು ಮುಟ್ಟುವ ಬೆಟ್ಟದ ಇದಿರಿನಲ್ಲಿ ನಿಂತು, ಅದರ ಉನ್ನತಿಯನ್ನು ನೆನೆಯುತ್ತಿದ್ದರೆ ಮನಸ್ಸಿಗೆ ಯಾವುದೋ ಒಂದು ಬಗೆಯ ಗಂಭೀರ ಶಾಂತಿಯು ಬೋಧೆಯಾಗುವುದಿಲ್ಲವೆ ? ಸೃಷ್ಟಿಯ ಅಪಾರತೆಯನ್ನು, ಅನುಪಮತೆಯನ್ನು ನೋಡಬಲ್ಲ ಕಣ್ಣನ್ನು ಬೆಳೆಯಿಸಿಕೊಂಡಲ್ಲಿ—ನಾವು ಶಾಂತಿಯನ್ನು ಹೊಂದಲಾರೆವೇ ? ಒಮ್ಮೆ ನೋಡಿದ ಅಂಥ ಅನುಭವಗಳನ್ನು ನೆನೆದಾಗಲೆಲ್ಲ, ಅದೇ ಭವ್ಯತೆಯ ಪುನರ್ ಸೃಷ್ಟಿ ಮನದ ಎದುರಿಗೆ ನಿಂತು ಆನಂದವನ್ನುಂಟು ಮಾಡುತ್ತದೆ ; ಶಾಂತಿಯನ್ನು ಕೊಡುತ್ತದೆ. ಜೀವನದ ವಿಸ್ತಾರವಾದ ಯಾವುದೊಂದು ನೋಟವು ಸಣ್ಣಪುಟ್ಟ ವಿಷಯಗಳಿಂದ ನಮ್ಮ ಮನಸ್ಸನ್ನು ಸೆಳೆದು, ಇನ್ನಾವುದೋ ಭವ್ಯತೆಯ ದರ್ಶನ ಮಾಡಿಸಿಕೊಡಬಲ್ಲುದು. ಈ ಬಗೆಯ ಸೊಗಸು, ಆನಂದ, ಶಾಂತಿಗಳು—ಗೀತ, ಭಜನೆಗಳಿಂದ ದೊರಕುವ ಶಾಂತಿಗೆ ಕಡಮೆಯಾದುವಲ್ಲ. ದೈವ ಚಿಂತನೆಯಿಂದಲೂ ಮನಸ್ಸು ಹೆಚ್ಚಿನ ಶಾಂತಿಯನ್ನು ಪಡೆಯಲು ಪ್ರಕೃತಿಯ ಅನೇಕ ಭವ್ಯವಸ್ತುಗಳ, ಅನುಪಮ ಸೊಗಸುಗಳ ಪರಿಚಯ ನಮಗಾಗಿರಬೇಕು. ಬರೀ ಚಂದನದ ಗೊಂಬೆಗಿಂತ ಹೆಚ್ಚಿನ ಸುಂದರ ಒಡವೆಯನ್ನು ಕಾಣದವನು, ದೈವಮೂರ್ತಿಯ ಭವ್ಯ ಸೊಗಸಿನ ಕಲ್ಪನೆಯನ್ನು ತಂದುಕೊಳ್ಳುವುದಕ್ಕೆ ಅಶಕ್ತನಾಗುತ್ತಾನೆ. ಸೃಷ್ಟಿಯ ಸವಿಯುಂಬಿಗಳ, ಇಂಚರಗಳ ಪರಿಚಯ ಪಡೆಯದವನು, ದೈವಗಾನದ ಸವಿಯನ್ನು ತಂದುಕೊಳ್ಳಲಾರನು. ಇಲ್ಲಿ ಬೆಳೆದ ಬದುಕಿನ ಮೇಲಿಂದಲೇ, ನಮ್ಮ ತಪೋರಾಜ್ಯದ ಬದುಕು ಬೆಳೆಯಬೇಕು. ಇಲ್ಲಿಯ ಬದುಕು ನೀರಸತೆ, ನಿರ್ಗಂಧತೆಗಳ ಮೇಲೆ ಕಟ್ಟಲ್ಪಟ್ಟಿದ್ದಾದರೆ ತಪೋರಾಜ್ಯದ ಸವಿಯು ದುರ್ಗಮದ ಪ್ರತೀಕವಾಗಬಹುದು.

ವಿಸ್ತೃತವಾದ ಬದುಕಿನ ಪರಿಚಯವು ಜೀವನಕ್ಕೆ ತಂದುಕೊಡಲಾರದ ಸುಖವನ್ನು, ಬದುಕಿಂದ ಹಿಂದೆಗೆದ ಮನಸ್ಸಿನ ತಪಸ್ಸೂ ತಂದುಕೊಡಲಾರದು. ಇಹದ ರೂಪರಸ ಗಂಧಗಳ ಅನುಭವಗಳ ಮರೆಯಾದ ಹೊರತೆ, ಅದರ ಮೇಲೆ ಯಾವೊಂದು [illegible]

# ೪ ಬಾಳ್ವೆ ಸ್ವೀಕಾರಕ್ಕಿದೆ, ನಿರಾಕರಣೆಗಲ್ಲ

**ಬದುಕಿನ ಮಿತಿಯಿಂದ**

ಜೀವನದ ಸಮನಾದ ಪರಿಚಯ ಮಾಡಿಕೊಳ್ಳದವನು, ಸಮನಾದ ದೇವನನ್ನು ಕಟ್ಟಲಾರನು ಎಂದದ್ದಾಯಿತು. ಮನುಷ್ಯರು ಕಟ್ಟಿದ ನೂರಾರು ದೇವದೇವತೆಗಳು ಹೇಗಿವೆ? ದೇವದೇವರುಗಳ ವೈರ, ಅಸೂಯೆ, ಅವರುಗಳ ಹೆಣ್ಮರುಳುತನ, ಅವರೊಳಗಿನ ಕೋಪಾಟೋಪಗಳನ್ನು ಸಾರುವ ಪುರಾಣಗಳನ್ನು ಪರೀಕ್ಷಿಸಿದರೆ—ಮನುಷ್ಯ ಪ್ರಪಂಚದ ದ್ವೇಷ, ಅಸೂಯೆ, ಕಾಮುಕತೆಗಳೆಲ್ಲ ಹೇಗೆ ಅವರ ದೇವರ ರಾಜ್ಯವನ್ನು ಕಾಡಿವೆಯೆಂಬುದು ಸ್ಪಷ್ಟವಾಗುತ್ತದೆ. ಬಹುವಾಗಿ ಯಾವೊಂದು ಜನಸಮುದಾಯದ ದಂತಕತೆ (Legend), ಪುರಾಣ (Mythology) ಗಳೆಲ್ಲ ಇದೇ ಸಂಗತಿಯನ್ನು ಹೇಳುತ್ತವೆ. ದೇವರ ಮಿತಿಯು ಬದುಕಿನ ಮಿತಿಯ ಪರಿಣಾಮ.

**ಬದುಕು ವಿಕಸಿಸಲು**

ಹೀಗಿರುತ್ತ—ನಮ್ಮ ಪ್ರಪಂಚದ ಜೀವನವು, ಅದು ನಮಗೆ ದೊರಕಿಸಿಕೊಡುವ ಅನುಭವಗಳು ತೀರ ಅವಶ್ಯವಾದುವುಗಳಲ್ಲವೆ! ಬಾಳ್ವೆ ಬಂದಿರುವುದೇ ನಮ್ಮ ಪ್ರಯೋಜನಕ್ಕೆ. ಆದರಿಂದ ಲಾಭವಿದೆಯೆಂದೇ ನಾವು ಇಲ್ಲಿದ್ದೇವೆ; ಬಾಳ್ವೆ ಬಂದಿರುವುದು ಅದರ ನಿರಾಕರಣೆಗಲ್ಲ. ವ್ಯಕ್ತಿ ಜೀವನದ ವಿಕಾಸ ಬದುಕುವುದರಿಂದಲೇ ಆಗಬೇಕಾಗುತ್ತದೆ. ಬದುಕಿನಲ್ಲಿ ಜೀವಿ ಎಷ್ಟೆಷ್ಟು ಹೆಚ್ಚಾಗಿ, ಸೂಕ್ಷ್ಮವಾಗಿ, ಬದುಕನ್ನು ಸವಿಯುವ ಶಕ್ತಿಗಳನ್ನು ಬೆಳೆಯಿಸಿಕೊಳ್ಳುತ್ತಾನೋ—ಅಷ್ಟಷ್ಟು ಹೆಚ್ಚಾಗಿ ತನ್ನ ಅನುಭವಗಳಿಂದ ಪರಿಣಾಮಗೊಳ್ಳುತ್ತಾನೆ. ಅವನು ತನ್ನ ಶಕ್ತಿಗಳನ್ನು ಬೆಳೆಯಿಸಿ ಎಷ್ಟೆಷ್ಟು ವಿಸ್ತಾರವಾದ ಬಾಳ್ವೆಗೆ ಎದುರೊಡ್ಡುತ್ತಾನೆಯೋ ಅಷ್ಟಷ್ಟು ಬಹುಮುಖವಾದ, ಪ್ರಯೋಜನಕಾರಿಯಾದ 'ಅನುಭವ'ಗಳನ್ನು ಅವನು ಪಡೆಯಬಹುದು. "ವಿಸ್ತಾರವಾದ ಬಾಳ್ವೆ"—ಎಂಬ ಮಾತನ್ನು ವಿವರಿಸಬೇಕಾಗುತ್ತದೆ. ತನ್ನನ್ನು ವಿಶ್ವದ ಇತರ ಜೀವಿ, ಬದವೆಗಳೊಡನೆ ಹೆಚ್ಚು ಹೆಚ್ಚಾದ ಪರಿಚಯಕ್ಕೆ ಅವಕಾಶ ಕೊಡುವ ಎಲ್ಲ ನಡತೆ, ಪ್ರಸಂಗಗಳನ್ನು ನಾನು ವಿಸ್ತಾರವಾದ ಬಾಳ್ವೆಯೆಂದು ತಿಳಿಯುತ್ತೇನೆ. ಇನ್ನು "ಅನುಭವ" ಎಂಬ ಮಾತನ್ನು ವಿಶದಗೊಳಿಸುವ. ವಸ್ತುಗಳ ರೂಪದಿಂದ, ಆಕಾರ–ಬಣ್ಣಗಳಿಂದ ದೊರೆಯುವ ಯಾವತ್ತು ಪ್ರೇರಣೆಗಳು–ಸೌಂದರ್ಯಾನುಭವಗಳೇ. ಗೀತ, ಗಾನ, ಆರ್ಭಟೆ, ಅಬ್ಬರ ಮೊದಲಾದ ಯಾವೆಲ್ಲ ಬಗೆಯ ಧ್ವನಿಗಳಿಂದ ಪ್ರೇರಿತವಾಗುವ ಭಾವನೆಗಳೂ—ಶ್ರವಣದ ಅನುಭವಗಳು. ಇದರಂತೆ ರಸನೆಯ ಅನುಭವಗಳು, ಗಂಧದ ಅನುಭವಗಳು, ಸ್ಪರ್ಶದ ಅನುಭವಗಳೂ ಇವೆ. ಈ ಎಲ್ಲ ಬಗೆಯ ಪ್ರೇರಣೆಗಳು—ಮನಸ್ಸಿನ ಮೇಲೆ ಬಿಡಿ ಬಿಡಿಯಾದ, ಇಲ್ಲವೆ ಸಾಮೂಹಿಕವಾದ ಪರಿಣಾಮ

ಉಂಟು ಮಾಡುತ್ತವೆ. ಭಾವನೆಗಳನ್ನೂ, ಯೋಜನೆಗಳನ್ನೂ, ತರ್ಕಗಳನ್ನೂ ಪ್ರೇರಿಸು ತ್ತವೆ. ಅವುಗಳ ಪರಿಣಾಮವಾಗಿ–ಅನುಕಂಪ, ಕರುಣೆ, ಶಾಂತಿ, ಆಹ್ಲಾದ ಮೊದಲಾದ ಹೆಚ್ಚಿನ ಸೊಗಸುಗಳಿಗೆ ಕಾರಣವಾಗುತ್ತವೆ. ಒಳಗಿನ ಈ ಎಲ್ಲ ಸುಖ, ಸಂತೋಷ, ತಳ ಮಳ, ಇವುಗಳು—ಸ್ವತಂತ್ರವಲ್ಲ. ಹೃದಯ ರಾಜ್ಯದ ಈ ಪರಿಣಾಮಗಳನ್ನೇ ನಾವು "ಅನುಭಾವ"ಗಳೆನ್ನಬಹುದಾದಲ್ಲಿ, ಅವನ್ನು ನಿರ್ಮಿಸಲು ಮನಸ್ಸು, ಅದನ್ನು ಕೆಲಸಕ್ಕೆ ತೊಡಗಿಸಲು ಇಂದ್ರಿಯಗಳೂ ತೀರ ನಮಗೆ ಅವಶ್ಯ. ವಿಶ್ವಕ್ಕೂ ವ್ಯಕ್ತಿಗೂ ಸಂಬಂಧ ವನ್ನು ಉಂಟುಮಾಡುವ ಹೆದ್ದಾರಿಯೇ ಅನುಭವ. ಇಂದ್ರಿಯಗಳನ್ನು, ಅವುಗಳ ಕೆಲಸವನ್ನು, ಅವುಗಳ ವಿಹಾರ ಕ್ಷೇತ್ರವನ್ನು ಅಲ್ಲಗಳೆಯುವವನು ತನಗೇ ತಿಳಿಯದಂತೆ ಹೃದಯ ರಾಜ್ಯವನ್ನು ನಿರಾಕರಿಸುತ್ತಾನೆ. ಎಂಥ ಭಕ್ತನೂ, ದೈವಿಕನೂ, ವಿರಕ್ತನೂ—ಉಣ್ಣುತ್ತಾನೆ, ಉಡುತ್ತಾನೆ, ನೋಡುತ್ತಾನೆ, ಸವಿಯುತ್ತಾನೆ—ಎಂಬುದರಿಂದಲೇ ಬದುಕನ್ನು ನಿರಾಕರಿಸುತ್ತಿದ್ದೇನೆ–ಎಂದು ಬಾಯಿ ಮಾತಿನಿಂದ ಆತ ನುಡಿಯುತ್ತ ಲಿದ್ದರೂ, ಕಾರ್ಯರಾಜ್ಯದಲ್ಲಿ ಬೇರೆಯೇ ತೆರನಾಗಿ ಬಾಳುತ್ತಿದ್ದಾನೆ. ಪ್ರಾಪಂಚಿಕ ನೆಂಬುವನು—ಎಂದೂ ಪೂರ್ಣ ಪ್ರಾಪಂಚಿಕನಾಗಿರುವುದಿಲ್ಲ; ವಿರಕ್ತನೆಂಬವನು ನೇಕಡಾ ನೂರರಷ್ಟು ವಿರಕ್ತನಾಗಿರಲು ಶಕ್ಯವೂ ಇಲ್ಲ. ಹಾಗಿರಲು ಬದುಕಿರುವಾಗ ಕಣ್ಣು ಕಾಣ ದಿರಬೇಕು, ಕಿವಿ ಕೇಳದಿರಬೇಕು, ಮೂಗು ಮೂಸದಿರಬೇಕು. 'ಇದ್ದರಾಯಿತು, ಇಲ್ಲ ದಿದ್ದರಾಯಿತು'—ಎನ್ನುವುದನ್ನು ವಿರಕ್ತಿಯೆಂದು ನಾವು ತಿಳಿಯಬೇಕಾಗಿಯೂ ಇಲ್ಲ. ಇದ್ದಾಗ ಸವಿಯುವ ಶಕ್ತಿ ಶೂನ್ಯವಾಗುವುದಿಲ್ಲವಲ್ಲ.

### ಪರಾನುಭವ, ಸ್ವಾನುಭವ

ಮನುಷ್ಯನ ಅನುಭವಗಳು ಎರಡು ಬಗೆಯಿಂದ ಹೆಚ್ಚುತ್ತವೆ. ತಾನೇ ಬದುಕಿನ ಸಂಸರ್ಗದಿಂದ ದೊರಕಿಸಿಕೊಳ್ಳುವ ಅನುಭವಗಳು ಒಂದು ಬಗೆ. ಇನ್ನೊಂದು ಬಗೆ—ಪರಿಣತರ ಅನುಭವಗಳನ್ನು ಓದಿ, ಕೇಳಿ ತಿಳಿಯುವುದು. ಆದರೆ ಈ ಎರಡನೆಯ ವರ್ಗದ ಅನುಭವ ನಮಗೆ ಉಪಯುಕ್ತವಾಗಲು, ನಮ್ಮಲ್ಲಿ ಅರಗಲು, ಸ್ವಂತ ಅನುಭವ ಸಾಮ್ಯವಾದರೂ ಬೇಕು. ನಮ್ಮ ಅನುಭವಗಳಿಗೂ ನಾವು ಕೇಳಿ ತಿಳಿಯುವ ಅನುಭವ ಗಳಿಗೂ ಹೊಂದಿಕೆಯಿಲ್ಲವಾದರೆ, ಅವುಗಳು ನಮಗೆ ಹೆಚ್ಚಿನದೇನನ್ನು ಕೊಡಲಾರವು. ಗ್ರಹಗಳಲ್ಲಿ ಜೀವಕೋಟಿಯಿದೆಯೆಂಬರೂ, ಅದೇನೆಂದು ನಮಗೆ ತಿಳಿಯದ ಮಾದರಿ ಯಲ್ಲಿ, ಈ ಅನುಭವಗಳಾಗುತ್ತವೆ. ಸ್ವಂತ ಅನುಭವಪುಷ್ಟನಾದವನು ಪರರ ಅನುಭವ ಗಳನ್ನು ತೂಗಿ ತನಗಿಲ್ಲದ ಅನುಭವಗಳನ್ನು, ತಿಳಿಯಲು ಪೂರ್ವಸಿದ್ಧತೆ ಪಡೆಯ ಬಹುದು. ಬದುಕಿನ ಬೇರೊಂದು ಅನುಭವದಿಂದ, ತನಗೆ ಬಂದ ಅನುಭವದ ತೂಕ ವನ್ನು ಇನ್ನೂ ಚೆನ್ನಾಗಿ ಮಾಡಿಕೊಳ್ಳಲು ಸಹಾಯವಾಗಬಹುದು.

### ವಿಶಾಲ ಜೀವನ

ನಮಗೆ ಬದುಕಿನಿಂದ ಉಪಯೋಗವಾಗಬೇಕಾದರೆ–ಜ್ಞಾನ ದೊರೆಯ ಬೇಕಾ ದರೆ, ನಮ್ಮ ಜೀವನ ಆದಷ್ಟು ವಿಶಾಲವಾಗಬೇಕು. ನಮ್ಮನ್ನು ನಮ್ಮ ಮನೆಯವ

ರನ್ನೂ, ಸಮಾಜದವರನ್ನೂ ಮೀರಿಸಿ, ಅದು ಮನುಷ್ಯ ಕುಟುಂಬಕ್ಕೇ ಹರಿಯಬೇಕು. ಅಲ್ಲಿಯೂ ಮೇರೆಯನ್ನು ಹೊಂದದೆ, ಜೀವ ಕುಟುಂಬಕ್ಕೂ, ಯಾವತ್ತು ಸೃಷ್ಟಿಗೂ ವಿಶಾಲಿಸಲು ಪ್ರಯತ್ನಿಸಬೇಕು. ವಿಶ್ವದ ಗುಟ್ಟೇ ಇದರಿಂದ ನಮ್ಮ ಕರಗತವಾಗುವು ದೆಂಬ ಆಸೆ ಬೇಡ. ನಮ್ಮ ಶಕ್ತಿಗಳಿಗೂ ಮಿತಿಯಿದೆ. ಅವುಗಳ ಎಟುಕಿನ ದೂರಕ್ಕೂ ಒಂದು ಮಿತಿಯಿದೆ. ಆ ದೂರದ ತನಕ ಹೋಗಲು ನಾವು ಹಿಂಜರಿಯಬೇಕಾಗಿಲ್ಲ. ಅದಕ್ಕೂ ಮೀರಿದ ರಾಜ್ಯವನ್ನು ಬಿಡುವ.

**ಬೇಕಾದ ಸಂಸಾರ**

ಹೀಗೆ ಬದುಕಿ ತಿಳಿಯಬಹುದಾದ ಪ್ರಪಂಚವನ್ನು ಕಾಣಬಯಸದ ವ್ಯಕ್ತಿಯು ಸಂಕುಚಿತನು. ಅವನ ಜೀವನ ಬರಡಾಗುತ್ತದೆ. ಪ್ರಪಂಚದಲ್ಲಿ ಬಾಳಲು ಅವಕಾಶ ದೊರಕಿರುವಾಗ, ತಿಳಿಯಲು ಸಾಧನಗಳಿರುವಾಗ, ಅದೇ ವ್ಯರ್ಥವೆನ್ನುವದು ಏತರ ಮಾತು ? 'ಪ್ರಪಂಚ ಒಂದು ಬಂಧನ' 'ಅಲ್ಲಿರುವುದೇ ಒಂದು ತೊಳಲಾಟ' ಎನ್ನು ವುದು ಜಾಣ್ಮೆಯೇ ? ದೇವರನ್ನು ಒಪ್ಪುವವರು—ಈ ತೊಳಲಾಟಕ್ಕೆ ದೇವರೇ ನಮ್ಮನ್ನು ತೊಡಕಿಸಿದನೆಂದರೆ ಏನು ಭೂಷಣ ? ನಮ್ಮ ಕರ್ಮ ಇದಕ್ಕೆ ಕಾರಣ ವೆಂದರೆ, ಆಗ ಕರ್ಮಕ್ಕೆ ಕಾರಣನಾದ ದೇವರೇ ಅದಕ್ಕೂ ಕಾರಣನೆನ್ನುವ ಮಾತು ಸ್ಥಾಪನೆಯಾಗದೇ ? ಸೃಷ್ಟಿಯು ನಿರ್ಮಾಣಕನಿರುವಲ್ಲಿ ಅನವಶ್ಯಕವಾದ ಇಲ್ಲವೆ ಕಿತ್ತೊ ಗೆಯಬೇಕಾದ ಸಂಸಾರವನ್ನು ಅವನು ರಚಿಸಿದನು ಎನ್ನುವುದು ಸರಿಯಲ್ಲ. ಅವನು ಬದುಕೆಂಬ ಮಾಯೆಯನ್ನು ನಮ್ಮ ಮುಂದೆ ಹರಡಿರುವನಾದರೆ, ಅವನೊಬ್ಬ ಉಪ ದ್ವ್ಯಾಪಿಯೆನ್ನಿಸಿಕೊಂಡಾನು !

**ಅನಾನುಕೂಲತೆ**

ವ್ಯಕ್ತಿ ಪ್ರಪಂಚದೊಡನೆ ವಿಹರಿಸುವ ಬಗೆಯಲ್ಲಿ ಕೆಡುಕಿರಬಹುದು. ಅದರಿಂದ ಅವನಿಗೆ ಅನೇಕ ತೊಡಕು, ದುಃಖಗಳು ಬರಬಹುದು. ವ್ಯಕ್ತಿಯು ಯಾವ ಸಮಾಜದ ಅಂಗವೋ ಅದು ವ್ಯವಹರಿಸುವ ರೀತಿಯು ತಪ್ಪಾಗಿ ಬಂದರೂ ಇದೇ ಪರಿಣಾಮವಾಗ ಬಹುದು. ಈ ದೊಡ್ಡ ವಿಶ್ವದ ವ್ಯಾಪಾರವು ನಮ್ಮ ತಿಳಿವಿಗೆ ಸಿಗದಿರಬಹುದು. ಇಂಥೆಲ್ಲ ಕಾರಣಗಳಿಂದ ಬದುಕು ನಮಗೆ ಅರ್ಥವಾಗದೆ ಹೋದರೆ, ಇಲ್ಲವೆ ಬದುಕಿನಲ್ಲಿ ಕ್ಲೇಶ ಉಂಟಾದರೆ, ಅದರಿಂದ ಬದುಕೇ ನಿರರ್ಥಕ, ಮಾಯೆ : ಅದರಲ್ಲಿ ಮನವಿರಿಸು ವುದು ತಪ್ಪು ಎಂದು ತೀರ್ಮಾನವಾಗಬೇಕಿಲ್ಲ.

**ಸಿಗದ್ದು ಹುಳಿಯೋ ?**

ವಿಶ್ವದ ಇಂದಿನ ವ್ಯಾಪಾರವನ್ನೇ ಎಣಿಸುವ. ಅದು ಎಷ್ಟು ದೊಡ್ಡದಾಗಿಲ್ಲ. ಅದರಲ್ಲಿ ನಮಗೆ ಕಾಣಿಸುವುದು ಎಷ್ಟು ಸ್ವಲ್ಪ ; ಕಾಣಿಸದೆ ಇರುವ ಅಂಶ ಎಷ್ಟು ಅಧಿಕ. ಅವುಗಳಲ್ಲಿ ಕಾಣಿಸುವ ಸಂಗತಿಗಳಲ್ಲೂ ನಮಗಿರುವ ಪರಿಚಯು ಅಷ್ಟು ಕಡಮೆಯಾಗಿದೆ. ನಮ್ಮ ಕಾಣುವ ಕಣ್ಣುಗಳಲ್ಲೂ ಅಷ್ಟು ಅಲ್ಪ ಶಕ್ತಿಯಿದೆ. ಭೂಮಿಯ ಎಷ್ಟೋ ತೀರ ಸಮೀಪದ ಒಡವೆಗಳೂ ಅವಕ್ಕೆ ಕಾಣವು. ಕೆಲವು ಬೆಳಕುಗಳು ಕಂಡರೆ, ಕಾಣದ ಬೆಳಕು

ಗಳು ಬಹಳ. ವಸ್ತು ತೀರ ಸೂಕ್ಷ್ಮವಾದರೂ ಕಾಣಿಸದು. ತೀರ ದೂರವಾದುದೂ ಕಾಣಿಸದು. ನಮ್ಮ ಶಕ್ತಿಯು ಅಳವಿಗೆ ಬರುವುದೂ, ಬಂದುದೂ ತೀರ ಸ್ವಲ್ಪ ಭಾಗವಾಗಿರುವಾಗ, ಅದರ ಮೇಲಿಂದಲೇ ಬದುಕು ಮಾಯೆ, ಬಂಧನ ಎಂದು ನಿರ್ಧರಿಸುವ ಆತುರವೇಕೆ ? ನಮಗೆ ಯಾವುದೋ ವಸ್ತು ದೊರೆಯಲಿಲ್ಲ, ನಮಗೆ ಯಾವುದೋ ಕಷ್ಟವಾಗಿದೆ—ಎಂಬುದರ ಮೇಲಿಂದ ಬದುಕು ಬಂಧನವೆನಿಸಬೇಕೆ ! ನಿರರ್ಥಕವೆನಿಸಬೇಕೆ !

ಇಂದಿನ ನಮ್ಮ ಬದುಕೂ, ನಮಗೆ ಅಪೂರ್ಣವಾಗಿ ಕಾಣಿಸುವ ವಿಶ್ವವೂ ನಿನ್ನೆಯ ಮೇಲೆ ಹೊಂದಿದೆ. ಆ ನಿನ್ನೆಯ ದೃಶ್ಯವೂ ನಮಗೆ ತಿಳಿಯದ್ದು. ಆ ನಿನ್ನೆಯ ಕಲಾಪಗಳೂ ಬಹುವಾಗಿ ಅರಿವಿಗೆ ಬಾರದಷ್ಟು ವಿಸ್ತಾರವಾಗಿವೆ. ಹೀಗಿರುವಲ್ಲಿ ಇವೆಲ್ಲ—ಬಂಧನ, ನಿಂದ್ಯ ಎನ್ನುವುದೇ ! ಅವುಗಳು ಎಂಥವು, ನಮಗೂ ಅವಕ್ಕೂ ಏನು ಸಂಬಂಧವಿದೆ ? ಆ ವಿಶ್ವದ ವಿಸ್ತರಣದಲ್ಲಿ—ನಾವು ಹೇಗಿದ್ದರೆ ಒಪ್ಪಬಹುದು–ಎಂಬುದನ್ನು ತಿಳಿಯಲೆತ್ನಿಸುವುದೇ ಸಮನಾದ ಮಾರ್ಗವಲ್ಲವೇ ? ಹಿಂದೆ ಜೀವರಾಶಿಗಳು ಬದುಕಿ ಇಂದಿಗೆ ವಿಕಸಿತವಾದ ಬಗೆಯನ್ನರಿತರೆ, ಇಂದಿನ ನಮಗೆ ದಾರಿ ಸೂಚಿಸಬಹುದು.

**ಬದುಕಿನ ಪ್ರವಾಹ**

ಬದುಕಿನ ಪ್ರವಾಹ ಬಲು ಹಿರಿದು. ಬದುಕನ್ನು ನಿರಾಕರಿಸಿ ಮೂಕರಾಗಬಲ್ಲ, ಜಡರಾಗಬಲ್ಲ ಎಷ್ಟೋ ಪ್ರಾಣಿಗಳನ್ನು ಅದು ಕಳೆದುಕೊಂಡೂ ಮುಂದಕ್ಕೆ ಸಾಗಬಲ್ಲದು. ಈ ವಿಶ್ವದ ಓಟದಲ್ಲಿ, ನಮ್ಮ ಭೂಮಿಯೇ ಇನ್ನೊಂದು ಲೋಕಕ್ಕೆ ಡಿಕ್ಕಿ ಹೊಡೆದು, ಧೂಳಾದರೂ ವಿಶ್ವದ ಓಟ ಸಾಗಬಲ್ಲಷ್ಟು ವಿಸ್ತಾರವಾಗಿದೆ. ಹೀಗಿರುತ್ತ—ಜೀವನದ ನಿರಾಕರಣೆಯಿಂದ ಅದಕ್ಕೆ ಕೇಡು ಬರಲಾರದು. ಎಲ್ಲಿಯ ತನಕ ನಾನು ಎಂಬ ವ್ಯಕ್ತಿ, ಅರಿವಿಂದ ಕೂಡಿದ್ದು ವ್ಯವಹರಿಸಬಲ್ಲುದೋ, ಈ ಜಡತೆಯಿಂದ ಅದರ ಸುಖಕ್ಕೆ, ತಿಳಿವಿಗೆ, ವಿಸ್ತರಣೆಗೆ—ಕುಂದಿದೆ. ನಾನೆಂಬ ಅರಿವುಳ್ಳ ಜೀವ, ಬದುಕನ್ನು ನಿರಾಕರಿಸಿ ಪಡೆಯುವ ಸುಖಕ್ಕಿಂತ, ಮಿತ ಸಾಧನ ಸ್ವೀಕರಣೆಯೇ ಯೋಗ್ಯ ಹಾದಿಯೆಂದು ನನಗನಿಸುವುದು. ಅದರಿಂದ ನಮ್ಮಿಂದ ಸಾಗುವ ಮುಂದಿನ ಜೀವನಕ್ಕೆ ನಮ್ಮದೂ ಒಂದು ಸೇವೆ ಸಲ್ಲಬಹುದು.

**ಭ್ರಮೆಯೇ ?**

ಜೀವನವನ್ನು ಪರಮಾತ್ಮನ ಲೀಲೆಯೆಂದು ಕರೆಯುತ್ತಾರೆ. ವ್ಯಕ್ತಿಯಾದವನು ಪ್ರಪಂಚದ ವ್ಯವಹಾರಗಳಲ್ಲಿ ಭಾಗಿಯಾಗುವುದರಿಂದ ತೊಳಲಾಟಕ್ಕೆ ಗುರಿಯಾಗುವನು—ಎಂಬುದನ್ನು ನಾವು ಜತೆಯಲ್ಲೇ ನಂಬುವೆವಾದರೆ, ಆಗ ಈ 'ಲೀಲೆ' ಎಂಬುದರ ಅರ್ಥವೇನು ? ಬೆಕ್ಕಿಗೆ ಆಟ ಇಲಿಗೆ ಪ್ರಾಣಸಂಕಟ—ಎನ್ನಬಹುದಲ್ಲವೇ. ಆಗ ಈ ತೊಳಲಾಟ, ಇಲ್ಲಿನ ನೋವುಗಳು—ಎಂಬುವು ಬರಿಯ ಮಾಯೆ, ಎಂದು ನಮಗೆ ಸಮಾಧಾನ ಹೇಳುವವರುಂಟು. ನಿಜ—ಎಲ್ಲಿಯ ತನಕ ಅನುಭವಿಸುವ ಪ್ರಾಣಿಯ ಪಾಲಿಗೆ ಈ ನೋವು ನಿಜವೆನಿಸುತ್ತಿರುವುದೋ, ಭ್ರಮೆಯೆನಿಸದೋ, ನೋವು ಕೊಡು

ವವನ ಪಾಲಿಗೆ ಅದು ಭ್ರಮೆ, ಮಾಯೆಯೆಂದು ತಿಳಿದರೂ ತಿಳಿಯದಿದ್ದರೂ—ಒಂದೇನೆ. ಅವನು ಪರಹಿಂಸೆಯಿಂದ ತೃಪ್ತಿ ಹೊಂದುತ್ತಿರುವವನೇ.

**ಸಲ್ಲುವುದರಿಂದ ಹುಟ್ಟು**

ನಾವು ಹುಟ್ಟಿದ್ದೇವೆ–ಎನ್ನುವ ಒಂದೇ ಕಾರಣದಿಂದ ನಮ್ಮ ಹುಟ್ಟು ನಮಗೆ ಪ್ರಯೋಜನಕಾರಿಯೆಂದು ತಿಳಿಯಬೇಕು. ನಾವು ಯಾವ ಜೀವನದ ಅಂಶವಾಗಿರುವೆವೋ ಅದಕ್ಕೂ ನಮ್ಮಿಂದ ಪ್ರಯೋಜನವಿದೆ. ಜೀವಿಗಳು ಇಲ್ಲಿ ಬೆಳೆಯಬೇಕು. ಆ ಬದುಕಿನಿಂದ ಏನೋ ಲಾಭಗಳಿಸಬೇಕು–ಎಂದು ತಿಳಿಯುವುದರಿಂದಲೇ ಹೆಚ್ಚಿನ ಹಿತವಿದೆ. ಇಲ್ಲಿಗೆ ನಾವು ಸಲ್ಲದ ಜೀವರಾದರೆ, ಇಲ್ಲಿ ಹುಟ್ಟುತ್ತಿರಲಿಲ್ಲ; ಎಲ್ಲಿಗೂ ಸಲ್ಲದವರಾದರೆ ಹುಟ್ಟು ಬರುತ್ತಿರಲಿಲ್ಲ. ಈ ವಿಶ್ವದ ವ್ಯಾಪಾರವು ನೀರ ಮೇಲಣ ಗುಳ್ಳೆಯಂತೆ ಕ್ಷಣಿಕವಾಗಿರಬಹುದು. ಮೂರು ನಿಮಿಷದ್ದಿರಬಹುದು – ಆದರಿಂದ ನಿಷ್ಪ್ರಯೋಜನವೆಂಬ ತೀರ್ಮಾನವಾಗಬೇಕಿಲ್ಲ. ನೂರು ವರ್ಷದೊಳಗೇನೆ ಸವೆಯುವ ಕಾಯ ನಮಗೆ ಇರುವುದಾದರೆ, ಅಷ್ಟರೊಳಗೇನೆ ನಾವು ಸಾಧಿಸಬಹುದಾದ ಕೆಲಸದ ಸಲುವಾಗಿ ಇದೆ ಎಂದು ಅರ್ಥವಾಯಿತು. ಅಂಥ ಹತ್ತುನೂರು ವರ್ಷ ತಾಳಿಕೆಯ ಜೀವಿಗಳು, ಮೂರು ದಿನ ಬದುಕಬಲ್ಲ ಕ್ರಿಮಿಗಳು, ತಮ್ಮ ದೀರ್ಘಕಾಲದ ಸಂತಾನಯಾತ್ರೆಯಿಂದ ಚಿರಂತನವಾದ, ನಮ್ಮ ಕಲ್ಪನೆಯ ಪಾಲಿಗಾದರೂ ಚಿರಂತನ ಎನಿಸುವಷ್ಟು ದೀರ್ಘವಾದ, ಏನನ್ನೋ ಕಟ್ಟುತ್ತಿದ್ದಾವೆ. ಮಣ್ಣಿನ ಇಟ್ಟಿಗೆ ಒಂದೇ ಗೇಣಿನದ್ದಾದರೂ–ಸಾವಿರಾರು ಇಟ್ಟಿಗೆಗಳಿಂದ ಒಡಗೂಡಿದ ಸೌಧ ಕಟ್ಟಬಹುದು. ಅದು ವ್ಯರ್ಥವಾಗಬೇಕಿಲ್ಲ.

**ವೈಜ್ಞಾನಿಕ ದೃಷ್ಟಿ**

ಇಂದು ನಮಗೆ ವಿಜ್ಞಾನವೂ ಈ ಭೂಮಿಯ ರಚನೆ, ಜೀವಕೋಟಿಯ ವಿಕಾಸಗಳ ವಿಷಯದಲ್ಲಿ ತುಂಬ ಅನುಭವ ಕೊಟ್ಟಿದೆ. ಇನ್ನು ಕೊಡಬಹುದು, ಇನ್ನೂ ವಿಸ್ತೃತವಾಗಬಹುದು. ಕೊಟ್ಟುದರ ಮೇಲಿಂದ—ಭೂಮಿಯ ಯಾತ್ರೆಯಲ್ಲಿ ಜೀವಿಗಳ ಸಂತಾನಯಾತ್ರೆಯು ಒಂದು ಅಂಗವಾಗಿದೆಯೆಂದೂ, ಯುಗಯುಗದ ಬದುಕಿನಿಂದ ಅವು ಇಂದಿನ ರೂಪ, ಸ್ಥಿತಿಗಳಿಗೆ ಪರಿಣಮಿಸಿವೆಯೆಂದೂ ಕಂಡುಬರುತ್ತದೆ. ವಿಶ್ವವಂತಿರಲಿ—ಬರಿಯ ಭೂಮಿಯೊಂದರ ವಿಸ್ತಾರ, ಗಹನತೆ, ಮಾಟ–ಇವುಗಳೇ ಬಹು ಅಗಾಧವಾಗಿವೆ. ನಮ್ಮ ಎಟುಕಿಗೆ ಸಿಗಲಾರದಷ್ಟು ವಿಶೇಷವಾಗಿವೆ. ಅದನ್ನು ತಿಳಿದಲ್ಲಿ–ಈ ಜೀವ ಜಗತ್ತಿನ ಓಟವಾಗಲಿ, ಅದಕ್ಕೆ ಹಿನ್ನಲೆಯಾದ ಜಡಜಗತ್ತಿನ ಆಟವಾಗಲಿ—ಒಂದು ದಿನಕ್ಕಾಗಿ ಇಲ್ಲ, ಒಂದು ಜೀವಕ್ಕಾಗಿ ಇಲ್ಲ. ಹಿಂದಿನ ಯಾವತ್ತೂ ಜೀವಿಗಳಿಂದ ತೊಡಗಿ, ಇಂದಿನ ಜೀವನದ ಮೂಲಕ ಹರಿದು, ಎಂದಿನದೋ ಬದುಕಿನ ಕಡೆಗೆ ಅದು ಸಾಗುತ್ತಿದೆ. ಅದರಲ್ಲಿ ನಾವು ತಿಳಿದು ಮುಗಿಸದಷ್ಟು ಚೆಲುವಿದೆ, ಸತ್ಯವಿದೆ, ಗಹನತೆಯಿದೆ. ಆ ವಿಸ್ತೃತ ಜೀವನದ ಪ್ರವಾಹದಲ್ಲಿ ನಾವು ಎಷ್ಟು ಚೆನ್ನಾಗಿ ಬದುಕಬಹುದೋ ಅಷ್ಟು ಚೆನ್ನಾಗಿ ತಿಳಿದು ಬದುಕುವ. ಅದಕ್ಕೂ ಹೆಚ್ಚಿನ ಕೆಲಸ ನಮಗಿದೆಯೆಂದು ಹೇಗೆ ಸಿದ್ಧಮಾಡಬಲ್ಲೆವು?

**ಇಂದಾಗಲು ನಾಳೆ**

ಈ ಮನುಷ್ಯ ಜೀವಿ ಎಂಬತ್ತು, ನೂರು ವರ್ಷಗಳ ಕಾಲ ಬದುಕಬಲ್ಲನಾದರೇನು ? ಅಷ್ಟು ಕಾಲದಲ್ಲೇ ಮಾಡಬಹುದಾದ ಜೀವನ ಸಾಕಷ್ಟು ದೊಡ್ಡದಾಗಿದೆ. ಅದರಿಂದ ಹೊಂದಬಹುದಾದ ಅನುಭವ ವಿಸ್ತಾರವಾಗಿದೆ. ಅದರೊಳಗೆ ಧುಮುಕಿ ತಿಳಿಯುವುದನ್ನೆಲ್ಲ ತಿಳಿಯುವ. ಇಂದನ್ನು ಮುಗಿಸಿದವನ ಪಾಲಿಗೆ ನಾಳೆಯೊಂದು ಇರುವಲ್ಲಿ, ಆ ನಾಳೆ ಬಂದೇ ಬರುತ್ತದೆ.

**ಸತ್ಯ**

ಜೀವನ ದಾರುಣವಾದುದು ; ಅದು ಕಣ್ಣೀರಿನ ಸಂತೆ, ಅದನ್ನು ನೆಚ್ಚಿದವನಿಗೆ ದುಃಖವಲ್ಲದೆ ಸುಖವಿಲ್ಲ—ಎಂಬ ತೀರ್ಮಾನ ನನಗಂತು ಒಪ್ಪಿಗೆಯಿಲ್ಲ. ಈ ಜೀವಕೋಟಿಯ ಜೀವವು ಅಷ್ಟು ಕೊಳೆ, ಕಿಲುಬುಗಳಿಂದ ತುಂಬಿರುವುದಾದರೆ, ಅದು ಇಷ್ಟು ದಿನ ಉಳಿಯಲಾರದು. ತನ್ನ ಸಾವನ್ನು ಎಂದೋ ತಂದುಕೊಳ್ಳುತ್ತಿತ್ತು. ಜೀವನ ಇನ್ನೂ ತಡೆದು ಹಿಡಿದಿದೆ, ಉಳಿದಿದೆ, ಸಾಗುತ್ತಿದೆ—ಎನ್ನುವುದರಿಂದ ಅದರಲ್ಲಿ ಹಾನಿಕಾರಕ ಶಕ್ತಿಗಳು ಇರಬಹುದಾದರೂ, ತಡೆಯಬಲ್ಲ, ತಾಳಬಲ್ಲ, ಉಳಿದು ಪ್ರವಹಿಸಬಲ್ಲ ಶಕ್ತಿಗಳೂ ಸಾಕಷ್ಟು ಬಲವಾಗಿವೆಯೆಂದು ಊಹಿಸಬಹುದು. ನಾವು ಕಾಣುತ್ತಿರುವ ಜೀವನ ಶಕ್ತಿಗಳಲ್ಲಿ ಅಂತಹ ತಾಳಿಕೆಯುಳ್ಳ ಶಕ್ತಿಗಳು ಇವೆಯೆಂದೂ—ಮಿಥ್ಯಕ್ಕಿಂತ ಸತ್ಯ ಅಧಿಕವಾಗಿದೆಯೆಂದೂ ನನಗೆ ಅನಿಸುತ್ತದೆ.

**ಸಿಹಿ, ಕಹಿಗಳ ಪಾಕ**

ಬದುಕು ಪೂರ್ಣ ಸಿಹಿಯೂ ಅಲ್ಲ, ಪೂರ್ಣ ಕಹಿಯೂ ಅಲ್ಲ. ಅವುಗಳ ವಿವಿಧ ಪ್ರಮಾಣದ ಪಾಕ. ಕಹಿಯನ್ನು ಸಹಿಸುವ ಶಕ್ತಿ ಗಳಿಸಿದಂತೆ ಜೀವನ ಮತ್ತಷ್ಟು ಬಲಗೊಳ್ಳುತ್ತದೆ. ಕಹಿಯ ಅನುಭವದಿಂದ ಸಿಹಿಗೆ ಮತ್ತಷ್ಟು ಕಳೆಯಿದೆ. ಮನುಷ್ಯ ಸಮಾಜವೊಂದನ್ನೇ ಎಣಿಸಹೋದರೆ ಕಹಿಯ ಪ್ರಮಾಣ ಅಲ್ಲಿ ತುಂಬಿರುವಂತೆ ಕಾಣುವುದೇನೋ ಸಹಜ. ಅಲ್ಲಿ ಅತಿಯಾಗಿ ಸಿಹಿಯನ್ನುಂಡು, ಮತಿಯ ತೋಲವನ್ನು ಕೆಡಿಸಿಕೊಂಡವರೂ ಉಂಟು. ಕಹಿಯೇ ದಿನದ ಉಸಿರಾಗಿ ಬಂದು, 'ಬಾಳ್ವೆಗೆ ಅರ್ಥವಿಲ್ಲ' ಎಂದವರೂ ಉಂಟು. ಇತರ ಜೀವಿಗಳ ಸಂಸಾರದಲ್ಲಿ ಕಾಣುವಷ್ಟು ಕಹಿ ಸಿಹಿಗಳ ವಿತರಣೆಯ ತಾರತಮ್ಯ, ಮನುಷ್ಯ ಸಮಾಜದಲ್ಲಿದೆ. ಈ ಸಮಾಜವು ಎಷ್ಟೆಷ್ಟು ನಾಗರಿಕವೆನಿಸಿಕೊಂಡಿದೆಯೋ, ಅಷ್ಟಷ್ಟು ಅಧಿಕವಾದ ಪ್ರಮಾಣದಲ್ಲಿ ಈ ಅವ್ಯವಸ್ಥೆ ಕಾಣುತ್ತಿದೆ. ಹೀಗೆ ನಮ್ಮ ಬದುಕು ಕೆಡಲು, ನಮ್ಮ ಹಿಂದಿನಿಂದ ಬಂದಿರುವ ಸಂಪ್ರದಾಯಗಳು ಎಷ್ಟು ಕಾರಣವೆಂದು ನಾವು ಯೋಚಿಸುವ. ಯಾವ ಭಾವನೆಗಳಿಂದಾಗಿ ಹೀಗೆ ವಿತರಣೆ ಕೆಟ್ಟಿದೆ, ಅನಿವಾರ್ಯವಾದ ದುಃಖಗಳು ಮನುಷ್ಯನ ಪಾಲಿಗೆ ಬಹುವಾಗಿ ಬಂದು ಕಾಡುತ್ತಿವೆ—ಎಂಬುದನ್ನು ನಾವು ಪರಿಶೀಲಿಸಿ, ಇದಿರಿಸಬೇಕು. ಈ ಕೊರತೆಯ ಕಾರಣವು, ಜೀವನ ಪ್ರವಾಹದೊಂದಿಗೆ ಸೇರಿಕೊಂಡಿರುವ ತನ್ನನ್ನು ಬೇರೆಯೇ ಸ್ವತಂತ್ರ ಅಸ್ತಿತ್ವವಾಗಿ ತಿಳಿದುದರಿಂದ—ಎಂದು ನನ್ನ ಊಹೆ. ಈ ವಿಚಾರವನ್ನು ಇನ್ನೊಮ್ಮೆ ಪರಿಶೀಲಿಸುವ.

**ಅಲ್ಲಗಳೆಯುವಿಕೆ**

ಜೀವನ ಕ್ಷಣಿಕ, ಮಾಯೆ, ಮಿಥ್ಯ—ಎನ್ನುವ ಎಲ್ಲ ಪ್ರಶ್ನೆಗಳು ಬದುಕನ್ನು ಇದಿರಿಸುವ ಸಲುವಾಗಿ ಉಂಟಾದುವಲ್ಲ. ಅದರಲ್ಲಿನ ಘೋರಗಳಿಗೆ ಅಂಜಿ ಪ್ರಶ್ನೆಯನ್ನೇ, ಅಲ್ಲಗಳೆಯುವ ವಿಧಾನಗಳಾಗಿವೆ. ಬದುಕಿನ ಘೋರವೂ ಬೇಡ, ಸೊಗಸೂ ಬೇಡ—ಎನ್ನುವುದರಿಂದ 'ಬದುಕು' ತಪ್ಪುವುದೇ ? ನಾವೇನು ಮಾಡಿದಂತಾಯಿತು ?

ಜೀವನವು ಕ್ಷಣಿಕ, ಚಿರವಲ್ಲ—ಎಂಬುದರಿಂದ ಪ್ರಪಂಚ ಮಾಯೆ—ಎನ್ನಬಹುದು. ನಮ್ಮ ಜೀವನಕ್ಕೆ ಎದುರಾಗುವ ಎಲ್ಲ ವಸ್ತುಗಳೂ, ನಾವೂ ಸಹ ಚಿರವಲ್ಲವಾದರೆ, ಅದೊಂದೇ ಕಾರಣದಿಂದ ಬದುಕು ನಿರರ್ಥಕ, ಬೆಲೆಯಿಲ್ಲದ್ದು, ಅನುಭವಕ್ಕೆ ನಿರಾಕರಣೀಯ—ಎಂದು ತೀರ್ಮಾನವೇ ? ಅದರಿಂದ ಅದು ಮಾಯೆಯೋ ಮಿಥ್ಯವೋ ಆಗಬೇಕಿಲ್ಲ. ಈಗ ನೋಡಿದ ಒಂದು ರೂಪು ಇನ್ನೊಂದು ಗಳಿಗೆಗೆ ಮಾಯವಾಗಬಹುದು. ಈಗ ಕೇಳಿದ ಒಂದು ಧ್ವನಿ, ಕೇಳಿಸಿದ ಮರುಕ್ಷಣದಲ್ಲೇ ಮಾಯವಾಗಬಹುದು. ಇದರಿಂದ ಅವುಗಳ ಯಾವ ಅನುಭವವನ್ನೂ ಜೀವನಿಗೆ ಉಂಟು ಮಾಡಲಾರವೇ ? ಸೊಗಸನ್ನು ಕಲ್ಪಿಸಲಾರವೇ ? ಬದುಕೆಂಬುದು ಅನೇಕ ಚಿರವಲ್ಲದ ಘಟನೆಗಳಿಂದ ಕೂಡಿಕೊಂಡಿದೆ. ಈ ವಿಶ್ವವೂ ಅಂತಹ ಅನೇಕ ಅಚಿರ ವಸ್ತುಗಳ ಮಾಲೆಯಾಗಿದೆ. ಆದರೆ ಒಂದೊಂದು ಅಚಿರವಸ್ತುವೂ, ಆಯಾ ಕಾಲಕ್ಕೆ ತಕ್ಕುದಾದ ಮಾಸದಿಂದ ಉಪಯುಕ್ತವಾದ ಸತ್ಯವನ್ನು ಸಾರಬಲ್ಲುದು. ಅದರಿಂದ ಒಟ್ಟು ಸತ್ಯವೊಂದು ಸ್ಥಾಪಿತವಾಗಬಹುದು.

**ಚಿರ ಸತ್ಯ—ಭ್ರಮೆ**

ಎಲ್ಲ ಕಾಲಕ್ಕೂ ಅನ್ವಯಿಸುವ ಎಲ್ಲವನ್ನೂ ತಿಳಿಸುವ, "ಸತ್ಯ"ವೆಂಬುದು ಕೇವಲ ಒಂದು ಪ್ರಮೇಯ. ಮಿತಕಾಲ ಬದುಕುವ ಜೀವಿಗಳ ಹತೋಟಿಗೂ, ಅನುಭವಕ್ಕೂ ಅದು ಸಿಲುಕದ ಒಂದು ವಸ್ತು. ವಿಶ್ವದ ಗತಿ ನಿಂತ ಮೇಲೆ, ಅದರ ನಿಲುಕಿಗೆ ಅದು ಸಿಗಬಹುದೋ ಏನೋ! ನಮಗಲ್ಲ, ನಿಮಗಲ್ಲ.

ಅಚಿರವಾದ ಅನೇಕ ಬಾಳ್ವೆಗಳು ಇಂದಿನ ತನಕ ಹೇಗೆ ವಿಕಾಸಗೊಂಡುವು ಎಂಬುದನ್ನು ಪರಿಶೀಲಿಸಬಾರದೇ ? ಪ್ರಾಚೀನ ಯುಗದ ಮೀನು, ಹಾವಾಗಿ, ಹಕ್ಕಿಯಾಗಿ ಇಂದಿನ ರೂಪಕ್ಕೆ ಕಾರಣವಾಯಿತು. ಇನ್ನೊಂದು ಜೀವ ಅದರಂತೆ ಕಾಲಕಾಲಗಳ ವಿಕಾಸದಿಂದ ಇಂದಿನ ಮಾನುಷ್ಯ ಸಂತಾನಕ್ಕೆ ಕಾರಣವಾಯಿತು. ಇದೂ ಚಿರವಲ್ಲ—ನಾಳೆ ತಿರುಗಿ ಇನ್ನಾವುದೋ ವಿಕಸಿತ ಜೀವನಕ್ಕೆ ಇವು ಸಾಗುತ್ತವೆ. ಒಂದೊಂದು ಜೀವದ ಹತ್ತು, ನೂರು ದಿನಗಳ ಬಾಳ್ವೆಯು, ಇಂದು ಚಿರವೆಂಬಷ್ಟು ದೀರ್ಘವಾದ, ಮನುಷ್ಯ ಕುಟುಂಬದ ಬಾಳ್ವೆಗೆ ಕಾರಣವಾಗಿದೆ.

**ಕ್ಷಣಿಕವಾದರೂ ಸತ್ಯ**

ಅನೇಕ ಪಶು ಸ್ವಭಾವ, ಶೀಲ, ಪ್ರತಿಕ್ರಿಯೆ (Reflex) ಗಳು ಯುಗ ಯುಗಗಳ ವಿಕಾಸದಿಂದ ಇಂದಿನ ಮನುಷ್ಯನ ಯೋಚನಾಶಕ್ತಿಗೂ, ಸ್ವಭಾವಕ್ಕೂ, ಸಂಸ್ಕೃತಿಗೂ,

ನಂಬಿಕೆ, ಮತ, ಪಾರಮಾರ್ಥಗಳಿಗೂ ಸಹ ಕಾರಣವಾಗಿರಲು, ಇವುಗಳ ಒನ್ನಲೆಯಾಗಿರುವ ಒಂದೊಂದು ಜೀವಿಯ ಮನ, ಕ್ರಿಯೆಗಳೆಲ್ಲ–ವ್ಯರ್ಥವೆನ್ನುವುದು ಏತರ ಮಾತು ? ಅಚಿರವಾದುದು ಅಸತ್ಯ—ಎಂಬ ಮಾತು ಶಬ್ದ ಚಮತ್ಕೃತಿ. ಏಕೆಂದರೆ—ಎಂದಿನ ತನಕ 'ಸತ್ಯ'ವೆಂಬುದು ಚಿರತೆಯ ದೃಷ್ಟಿಯಿಂದ ನಮಗೆ ತಿಳಿದಿಲ್ಲವೋ, ಅಚಿರ ವಸ್ತುಗಳ ಒಡನಾಟವೇ ನಮಗೆ ಗತಿಯಾಗಿದೆಯೋ—ಅಲ್ಲಿಯ ತನಕ, ಅದು ಬರಿಯ 'ಶಬ್ದ'. ನಮ್ಮಲ್ಲಿ ಯಾವುದೊಂದು ಕಲ್ಪನೆಯನ್ನೂ ಕೆರಳಿಸಲಾರದ ಮಾತು.

**ಚೈತನ್ಯ—ಅಚಿರತೆ**

ಇನ್ನೊಮ್ಮೆ ಯೋಚಿಸುವ—ಯಾವುದನ್ನು ನಾವು ಮೆಚ್ಚಬೇಕು ? ಚಿರವಾದ, ಸ್ಥಿರವಾದ ಒಡವೆಯನ್ನೇ ? ಯಾವುದು ಹಾಗಿದೆ ? ನಮಗೆ ತಿಳಿಯದ ಯಾವುದೋ ಒಂದು ಹಾಗಿದೆಯೆಂಬುದು ಊಹೆ. ಇರಲಿ. ನಮಗೆ ತಿಳಿದ ಮಟ್ಟಿಗೆ ನಾವು ಅಳೆಯಲು ಶಕ್ತರು. ಹಾಗೆ ಅಳೆದರೆ–ಅಲುಗಾಡದ, ಬದಲಾಗದ, ವಸ್ತುಗಳು ಬೆಳವಣಿಗೆಯ ಸೂಚನೆಯೆನಿಸವು ; ಚೈತನ್ಯದ ಗುರುತೆನಿಸವು. ಅದು ಜಡತೆಯ ಲಕ್ಷಣ. ಜೀವನದ ಸ್ವಭಾವ ಅದರಿಂದ ಭಿನ್ನವಾದುದು. ಜೀವನದಲ್ಲಿ ಚೈತನ್ಯ ಕೆಲಸಮಾಡುತ್ತಿರುವುದರಿಂದಲೇ ಚಲನೆ, ಏಳು, ಬೀಳುಗಳು. ಕಾಲದ ದೃಷ್ಟಿಯಿಂದ ಇವು ಅಚಿರತೆ. ಚೈತನ್ಯಮಯವಾಗಿರುವ ಜೀವಿಯು ಬೆಳೆಯಬೇಕು. ಬೆಳವಣಿಗೆಯ ದಾರಿಯಲ್ಲಿ ಇದಿರಾಗುವ ಅನುಭವಗಳಿಂದ ವಿಸ್ತರಿಸಬೇಕು. ಇದಿರಾಗುವ ಆವರಣಕ್ಕೆ ಸಮನಾಗಿ ಬದಲಿಸಬೇಕು. ಕಂಡ ನೋಟವನ್ನೇ ಕಾಣುತ್ತ, ಕಂಡ ಬಳಗದಲ್ಲಿಯೇ ಬೆರೆಯುತ್ತ, ಪಡೆದ ಅನುಭವಗಳನ್ನೇ ಪಡೆಯುತ್ತ ಇರುವ ಜೀವಿಗೆ ಚೇತನದ ಉಪಯೋಗವೇನು ? ಅದರಿಂದ ಬಾಳು ಬೆಳೆದೀತೆ ?

**ಮಿತವಾದ ಹೊಣೆ ನಮ್ಮದು**

ಪ್ರಪಂಚವು ನಮಗೆ ತಿಳಿದ ಮಟ್ಟಿಗೆ-ಚೈತನ್ಯಮಯವಾಗಿಯೇ ಹರಿಯುತ್ತಿದೆ. ನಮ್ಮ ಜೀವನದ ಅಳತೆಯಲ್ಲಿ, ಕದಲದೆ ನಿಂತಿರುವ ಬೆಟ್ಟಗಳೂ ಸಹ—ಯುಗಮಾನದ ದೃಷ್ಟಿಯಿಂದ ಚಲನೆಯ ಪರಿಣಾಮಗಳಾಗಿವೆ. ಪ್ರಪಂಚದ ಪಯಣದ ಉದ್ದೇಶ ನಮಗೆ ತಿಳಿಯದೆ ಹೋಗಬಹುದು. ಕಾಳಗದ ಸೇನಾನಿಯ ಮನಸ್ಸನ್ನು ಪ್ರತಿಯೊಬ್ಬ ಪದಾತಿಯೂ ಅರಿಯಬಲ್ಲನೇ ? ನಮ್ಮ ಕೆಲಸವೆಂದರೆ–ನಮ್ಮ ಆದರ್ಶ, ಶಕ್ತಿ, ಮಿತಿಗಳಿಗೆ ಸಮನಾಗಿ ನಮ್ಮ ಸ್ಥಾನವನ್ನೂ, ಕರ್ತವ್ಯವನ್ನೂ ತಿಳಿಯುವುದು. ಅಲ್ಲಿಗೆ ನಮ್ಮ ಹೊಣೆ ಮುಗಿಯಿತು. ಪ್ರಪಂಚದ ಕೊನೆಮೊದಲೆಂಬುದಕ್ಕೆ ಹೊಣೆಯಾಗುವ ಹಿರಿತನವನ್ನು ವಹಿಸಬೇಕಿಲ್ಲ. ನಮ್ಮ ಪಾಲಿನ ಪ್ರಪಂಚದಲ್ಲಿ ಬಾಳಿ, ಅದು ಕೊಡುವ ಅನುಭವಗಳಿಂದ ನಾವು ಅರಳುವುದಾದರೆ, ನಮ್ಮ ಕೆಲಸ ಮುಗಿಯಿತು.

**ತೀರ ನಂಟು ಬೇಕಿಲ್ಲ**

ಇವೆಲ್ಲವನ್ನು ಬಿಟ್ಟು—ನಾನು ಬರಿಯ ಮಾಯೆಯೆಂದರೆ–ಹೆತ್ತವರ ಪಾಲಿಗೆ ನಾವೊಂದು ಹೊರೆಯೆಂದೇ ಅರ್ಥ. (ಆಗ ಹುಟ್ಟೂ ಮಾಯೆ, ಬದುಕೂ ಮಾಯೆ,

ಸಾವೂ ಮಾಯೆ,—ಎನ್ನುವವರುಂಟು. ಹಾಗಿದ್ದರೆ ಯಾರು ಏನೂ ಚಿಂತಿಸಬೇಕಿಲ್ಲ. ಮಾಯಾ ರಾಜ್ಯದ ಸಾವುಗಳು ಮಾಯೆ ಮೀರಿದ ತತ್ವರಚನೆ ಮಾಡಲಾರೆವು.) ಮನುಷ್ಯ ಜೀವ ಬಾಳಿನಲ್ಲಿ ವಿಹರಿಸುವಾಗ—ಇವೆಲ್ಲವೂ ಶಾಶ್ವತವೆಂದು ತಿಳಿದಲ್ಲಿ, ಅವನ ಆಸೆಗಳು ಹೆಚ್ಚುತ್ತವೆ. ಆಸಕ್ತಿಗಳು ಅಳತೆ ಮೀರುತ್ತವೆ. ಒಟ್ಟಿಂದ ಅವನ ಸ್ವಾರ್ಥವು ಮಿತಿಮೀರಿ—ಅವನು ದುಃಖಕ್ಕೆ ಗುರಿಯಾಗುತ್ತಾನೆ. ಅವನ ಸುತ್ತಲಿನ ಜನಕ್ಕೆ ಅವನು ದುಃಖಕಾರಣನಾಗಬಹುದು-ಎಂದು ಹಾಗೆಂದಿರಬೇಕು. ಒಂದು ಪುಟ್ಟ ಉದಾಹರಣೆ : ಮನುಷ್ಯ ಬದುಕುವ ಮಿತಿ-೧೦೦ ವರ್ಷ ಎಂದು ತಿಳಿಯುವ. ಆದರೆ ಅವನು ಸಂಪತ್ತು ಕೂಡಿಹಾಕುವ ಬಗೆಯನ್ನು ಕಂಡರೆ, ತನ್ನ ಗಳಿಮೆಯು ಮುಂದಿನ ಮೂರು ಶತಮಾನದ ಜನರಿಗೂ ಬರಬೇಕೆಂದು ಬಯಸುವಂತೆ ಕಾಣುತ್ತದೆ. ಇದರಿಂದ ಅವನ ಸಂತಾನ, ನ್ಯಾಯವಾಗಿ ದುಡಿಯಬೇಕಾದಷ್ಟು ಶ್ರಮಿಸುವುದಿಲ್ಲ, ನಮ್ಮ ಅತಿ ಗಳಿಕೆಯಿಂದ ನಮ್ಮ ಆಚೀಚಿನ ಅನೇಕರ ಸುಖಗಳು ಇಲ್ಲದಾಗುವುವು. ಅಲ್ಲದೆ, ಬಾಳ್ವೆಗೆ ಬಲವಾಗಿ ಅಂಟಿದಾತನೂ, ಅದರ ಮಿತಿಯನ್ನು ಮನಗಾಣದಾತನೂ ಸಾವಿನ ಭೀತಿಗೆ ಗುರಿಯಾಗಬೇಕಾಗುತ್ತದೆ. ಈ ದೃಷ್ಟಿಯಿಂದ ಬಾಳ್ವೆಯು ಮಾಯೆ, ಅಚಿರ-ಎಂದು ತಿಳಿಯಬಹುದು.

ಬದಲು ಪ್ರಪಂಚವೇ ಮಾಯೆವಾಗಿ, ಬದುಕೆಲ್ಲ ಭ್ರಮೆಯಾದರೆ, ಮಾಯವಾದ ಸ್ಥಾಪಿಸಲು ಹೋದ ಶಂಕರರ ಯತ್ನ ಯಾರ ಸಲುವಾಗಿ. ಪಾಂಡಿತ್ಯವೂ ಮಾಯೆ, ಮಡದಿಯೂ ಮಾಯೆಯೆಂಬಂತೆಯೆ, ಶಿಷ್ಯರೂ ಮಾಯೆ, ಮಠ, ಗುಡಿಗಳೂ ಮಾಯೆ ಯಲ್ಲವೇ ? ನಮಗೆ ಬೇಕಾದುದನ್ನು ಬಿಟ್ಟು ಉಳಿದುವು ಮಾಯೆಯೆಂದರ್ಥವೇ ? ಬದುಕು ಇಂಥ ಮಾಯಾವಾದವನ್ನು ಕೇಳಿ ಲಾಭಹೊಂದಬಹುದಾದಷ್ಟರ ಮಟ್ಟಿಗೆ ಸತ್ಯವಾಗಿದ್ದರೆ, ಆಗ ಪ್ರಪಂಚದ ಜೀವನವು, ಅನುಭವಗಳಿಂದ ಲಾಭ ಪಡೆಯಬಹು ದಾದಷ್ಟು ಸತ್ಯ—ಎನ್ನಲು ಅಡ್ಡಿಯಿಲ್ಲ.

**ಅತಿ ಲೌಕಿಕರಿಗೆ**

ಶಂಕರಾಚಾರ್ಯರು—ಕೇವಲ ಸ್ವಾರ್ಥಮಯ ಬದುಕಿಗೋ, ಅತ್ಯಾಸಕ್ತಿ ಬದುಕಿಗೋ ಬಲಿಯಾದ ಜನಗಳನ್ನು ಎಚ್ಚರಿಸಲು, ಬದುಕಿನ ಅನೇಕ ಕಠಿಣ ಸತ್ಯ ಗಳನ್ನು ಹೇಳಿದರು. ಯಾವ ಮನೋಧರ್ಮದಲ್ಲಿ ಹೇಳಿದರು ? ಯಾವ ಮನೋ ಧರ್ಮದ ಜನರಿಗೆ ಹೇಳಿದರು—ಎಂಬುದೂ ಅವರ ಮಾತಿನ ತತ್ವಗ್ರಹಣಕ್ಕೆ ಅವಶ್ಯ ವಾಗುತ್ತದೆ.

**ಜಲಕಣ—ಪ್ರವಾಹ**

ಜೀವನದಲ್ಲಿ ವ್ಯವಹರಿಸುತ್ತಿರುವ ವ್ಯಕ್ತಿಗಳು—ಚಿರ, ಅಚಿರ ವಸ್ತುಗಳೆಂದು ಹೇಗೆ ತೀರ್ಮಾನಿಸಬೇಕು ? ತಾನು ಜೀವನ ಪ್ರವಾಹದ ಒಂದು ಅಂಶ, ತನಗೂ ಒಟ್ಟು ಜೀವನಕ್ಕೂ ಸಂಬಂಧವಿದೆ—ತಾನು ಮಿತಕಾಲ ಬಾಳುವವನು. ಒಟ್ಟು ಜೀವನ ವೆಂಬುದು ಅನಂತವಾದ ಪ್ರವಾಹ. ಇವುಗಳ ಪರಸ್ಪರ ಹೋಲುವೆಗಳು ಚಿರ-ಅಚಿರ

ವೆಂಬ ಮಾತಿಗೆ ಅರ್ಥಪುಷ್ಟಿ ಕೊಡಬಹುದು. ಇಲ್ಲಿನ 'ಅಚಿರ'ವೂ ಸಾಪೇಕ್ಷವಾದುದು. ನಮ್ಮ ಮಾನದಿಂದ ಅದು ಅಚಿರ. ದೀರ್ಘವಾಗಿ, ಬಹುಕಾಲದಿಂದ ಹರಿಯುವ ನದಿಯೊಂದರಲ್ಲಿ, ನಾವು ಈ ಗಳಿಗೆಯಲ್ಲಿ ಯಾವುದಾದರೊಂದು ಜಲಕಣವನ್ನೋ ಜಲಭಾಗವನ್ನೋ ಗುರುತಿಸಲಾರೆವೇ ? ಆ ಕ್ಷಣಕ್ಕೆ ಗುರುತಿಸಬಲ್ಲೆವು. ಮರುಕ್ಷಣ ಅದರ ಸ್ಥಾನದಲ್ಲಿರುವುದು ಬೇರೆಯೇ ನೀರು. ಆ ನೀರು ಅಲ್ಲಿಂದ ಮಾಯೆಯಾಯಿತು. ಆದರೆ ಅದು ನಾಶವಾಯಿತೇ ? ನಿರರ್ಥಕವಾಯಿತೇ ? ಈ ಪ್ರವಾಹದ ಒಂದೊಂದು ಜಲಭಾಗವನ್ನು ಒಂಟಿಯಾಗಿ ನೋಡುವಾಗ ಅಚಿರವಾಗಿ ಕಾಣುವುದಿಲ್ಲವೇ ? ಜಲಕಣಗಳ ಚಟುವಟಿಕೆಗಳು ಕ್ಷಣಿಕವೆನಿಸಿಕೊಂಡರೂ, ನದಿಯ ಪ್ರವಾಹ ಮಾತ್ರ ಚಿರಂತನವಾಗಿ ಕಾಣುವುದಿಲ್ಲವೆ ? ಪ್ರವಾಹಕ್ಕೆ ಬೆಲೆಯಿರುವುದಾದರೆ, ಅದರೊಳಗಣ ಪ್ರತಿ ಜಲಕಣಕ್ಕೂ, ಅದರ ಓಡಾಟಕ್ಕೂ ಬೆಲೆಯಿರಬೇಡವೇ ?

ಮನುಷ್ಯ, ಪ್ರಪಂಚದಲ್ಲಿ ಮಾಡುವ ಅನೇಕ ವಿಮರ್ಶೆಗಳು, ತನ್ನನ್ನು ಬೇರೆಯಾಗಿ ಇರಿಸಿಕೊಂಡು ಮಾಡುವುದರಿಂದಾಗುತ್ತದೆ. ಆಗ ಮಾನವನು ತನಗೆ ಅನುಕೂಲ, ಪ್ರತಿಕೂಲ—ಎಂದು ಈ ಪ್ರಪಂಚವನ್ನೂ ಅದರೊಳಗಣ ಬದುಕನ್ನೂ ವಿಂಗಡಿಸುತ್ತಾನೆ. ಇದರ ಮೇಲಿಂದ ತೀರ್ಮಾನಿಸುತ್ತಾನೆ. ಈ ಬಗೆಯ ದೃಷ್ಟಿಯಿಂದ ಅವನು ಬದುಕನ್ನು ಅಳೆಯಲಾರನು ; ಅದರಿಂದ ಅವನ ಬದುಕಿಗೆ ಬೆಳಕೂ ದೊರೆಯಲಾರದು. ಈ ಬಗೆಯ ಅಳತೆ, ಅವನ ಐಹಿಕವಾದವನ್ನು ಹೊಂದಿದ್ದರೂ ಸರಿ, ಪಾರಮಾರ್ಥಿಕವನ್ನು ಹೊಂದಿದ್ದರೂ ಸರಿಯೆ—ಎರಡೂ ತಪ್ಪುಹಾದಿಗಳು. ತನ್ನ ಆತ್ಮವನ್ನು ಜೀವನಪ್ರವಾಹದಿಂದ ಬೇರ್ಪಡಿಸಿ, ಅದರ ಸುಖ ದುಃಖ, ಬಿಡುಗಡೆಗಳನ್ನು ಬೇರ್ಪಡಿಸಿ ನೋಡುವ ನೋಟವು—"ಪಾರಮಾರ್ಥವಲ್ಲ". ನಮ್ಮ ಕಡು ಸ್ವಾರ್ಥಕ್ಕೆ ನಾವು ಕೊಡಬಹುದಾದ ಒಂದು ಭವ್ಯ ಹೆಸರಷ್ಟೆ.

### ತನಗಾಗಿಯೇ ಅಲ್ಲ

ಪ್ರಪಂಚವೆಲ್ಲ ತನಗಾಗಿ ಹುಟ್ಟಿದೆ, ತನಗೆ ಅದು ಅರ್ಥವಾಗುವಂತಿರಬೇಕು. ಹಾಗಿಲ್ಲದೆ ಹೋದರೆ ಅದು ಬೆಲೆಯಿಲ್ಲದ ವಸ್ತು—ಎಂಬ ನೋಟವು ಸಂಕುಚಿತ ನೋಟ. ತನ್ನ ಆಸೆಯ ಹಿಡಿತಕ್ಕೆ ಬಾರದಿರುವುದರಿಂದ ಬದುಕು "ಮಾಯೆ" ಎನಿಸಬೇಕಿಲ್ಲ. ಸಾವೆಂಬುದಿದೆ. ತನಗೆ ಸಾವು ಅಪ್ರಿಯ ಎಂಬುದರಿಂದ ಜೀವನ ನಿಸ್ಸಾರವಲ್ಲ. ಈ ರೀತಿಯ ತೀರ್ಮಾನಗಳು, ಈ ರೀತಿಯ ಯಾವುದೇ ನಿರ್ಣಯಗಳು ಬದುಕಿನ ಅರ್ಥವನ್ನು ನಮಗೆ ಕೊಡಲಾರವು. ಪ್ರಪಂಚ ತನಗಾಗಿ ಇದೆ ಎನ್ನುವ ಸ್ವಾರ್ಥಕ್ಕೂ, ಅದು ತನ್ನ ವೈರಿ ಎಂದು ತಿಳಿಯುವ ಪಾರಮಾರ್ಥಕ್ಕೂ ಮೂಲತಃ ವ್ಯತ್ಯಾಸವಿಲ್ಲ. ಒಂದೇ ಮನೋಧರ್ಮದ ಎರಡು ಪಾರ್ಶ್ವಗಳಿವು. ಒಂದು ಹೆಗ್ಗರಿಮೆ (Superiority complex) ಯ ಪ್ರಭಾವ, ಇನ್ನೊಂದು ಕೀಳರಿಮೆಯ (Inferiority complex) ಪ್ರಭಾವ. ನಮ್ಮ ಶರೀರದ ಯಾವುದೇ ಒಂದು ಅವಯವ, ಈ ಶರೀರದ ಉಳಿದೆಲ್ಲ ಅಂಗಗಳು ತನ್ನ ಸಲುವಾಗಿ ಬದುಕಿವೆ, ಎಂದು ಹೇಳಿದರೆ ಹೇಗೆ ? ಅದರಂತೆ—ಈ

ಲೋಕದಲ್ಲಿ ನನಗೇನು ಬೆಲೆ, ನಾನೆಷ್ಟು ವ್ಯರ್ಥ—ಎಂದರೂ ಹಾಗೆ. ವ್ಯಕ್ತಿಯು ತನ್ನನ್ನು ಜೀವನ ಪ್ರವಾಹದಿಂದ ಕಿತ್ತುತೆಗೆದು, ಎಣಿಸುವ ಲಾಭ ಹಾನಿಗಳ ವಿಮರ್ಶೆ ಸಮನಾದುದಲ್ಲ. ಹಾಗೆ ಮಾಡದೆ, ತಾನು ಜೀವನ ಪ್ರವಾಹದೊಡನೆ ಸೇರಿದವನು ಎಂಬ ಅರಿವನ್ನು ತಂದುಕೊಂಡಲ್ಲಿ, ಜೀವನವೆಂಬುದು ಸಾರ್ಥಕವೆನಿಸುತ್ತದೆ. ನಾವು ಹುಟ್ಟಿರುವೆವು ಎಂಬುದೇ ಬದುಕು ತಕ್ಕುದು, ಸಲ್ಲುವುದು—ಎಂಬುವುದಕ್ಕೆ ಕಾರಣಗಳಾಗುತ್ತವೆ. ಮಾನವನ ಬದುಕು ಒಂದು ಹೊರೆಯಾದಲ್ಲಿ, ಅದು ನಿಸರ್ಗದಲ್ಲಿ ಉಳಿಯುತ್ತಿರಲಿಲ್ಲ. ಪ್ರಕೃತಿಯು ತನ್ನ ವಿಕಾಸಮಾರ್ಗದಿಂದ, ಯಾವಾಗಲೂ ಬೇಡವಾದುದನ್ನು ತೊಡೆದು ಹಾಕುವಂಥ ರೀತಿ ನಮಗೆ ಕಾಣುತ್ತದೆ. ಕಪಿಯಿಂದ ವಿಕಸನಗೊಂಡ ಮಾನವ, ತನಗೆ ಬೇಡವಾದ ಬಾಲವನ್ನು ತೊಡೆದಂತೆ, ಹಲ್ಲಿಯ ಕಾಲು ಹಾವಿನಲ್ಲಿ ಕುಂಠಿತವಾಗುವಂತೆ, ವಿಶ್ವಹಿತಕ್ಕೆ ಮನುಷ್ಯ ಬೇಡವಾದರೆ, ಅವನು ಕ್ರಮೇಣ ಮಾಯವಾಗುತ್ತಾನೆ. ಜೀವನ ಕೋಟಿಯೇ ಬೇಕಿಲ್ಲದೆ ಹೋದರೆ, ಅದನ್ನೂ ತೊಡೆದುಹಾಕುವ ಶಕ್ತಿ ನಿಸರ್ಗಕ್ಕಿದೆ. "ಮಾನವ ಜನ್ಮ ವ್ಯರ್ಥ"ವೆಂದು ನಾವು ಅಳಬೇಕಾಗಿಲ್ಲ.

**ಜಗದೊಡನೆ ಬೆರೆಯಬೇಕು**

ಇತ್ತ ಬದುಕನ್ನು ಅಲ್ಲಗಳೆಯುವುದು, ಅತ್ತ ಬದುಕಿನ ಕಾಲವೆಲ್ಲ ದೇವರ ಹೊಗಳಿಕೆಗೇ ಎಂದು ತಿಳಿಯುವದು—ಇವು ಒಳ್ಳೆಯ ಆಸ್ತಿಕ ಭಾವನೆಗಳೂ ಆಗಲಾರವು. ಹಲವು ಧರ್ಮಗಳಲ್ಲಿ ಈ ಬಗೆಯ ಪಲ್ಲವಿಯನ್ನು ಕೇಳುತ್ತಿದ್ದೇವೆ. ಸೃಷ್ಟಿಕರ್ತನೊಬ್ಬನಿರುವನೆಂದೇ ತಿಳಿಯುವ. ಅವನಿರುವುದಾದರೆ, ಉಳಿದ ಜೀವಿಗಳ ಜತೆಯಲ್ಲಿ ಹುಟ್ಟಿದ ನಾವು, ಕೇವಲ ಅವನನ್ನೇ ಪ್ರೀತಿಸಬೇಕೆಂದು ಬಯಸುವವನೇ ? ಉಳಿದೆಲ್ಲ ಜಗತ್ತು 'ಹೇಸಿಕೆ'ಯೆಂದು ಜಿಗುಪ್ಸೆಪಟ್ಟರೆ ಯಾರ ಕೃತಿಗಾಗಿ ಜಿಗುಪ್ಸೆಗೊಂಡಂತಾಯಿತು ? ಹತ್ತೆಂಟು ಮಕ್ಕಳನ್ನು ಪಡೆದ ತಾಯಿಯೋ, ತಂದೆಯೋ—ತನ್ನ ಒಂದು ಕೂಸು, ಉಳಿದ ಮಕ್ಕಳೊಡನೆ ಸೇರಿ ಆಟವಾಡುವುದನ್ನು ಕಂಡು ಕುಪಿತರಾದಾರೇ ? ದೇವರು ಅಸೂಯಾಪರನೇ, ಸ್ವಾರ್ಥಿಯೇ, ಹೊಗಳ್ತೆಬಾಕನೇ ? ಮಗು ತನ್ನ ಅಣ್ಣ ತಮ್ಮಂದಿರೊಡನೆ ಬೆರೆಯದೆ, ಒಡನಾಡಿಗಳ ಜತೆ ಸೇರದೆ—ಹೊಸ್ತಿಲ ಮೇಲೆ ಕುಳಿತು "ಅಮ್ಮ, ಅಪ್ಪ" ಎಂದು ಅತ್ತುದಾದರೆ—ತಾಯಿಗೆ ಹಿತವೆನಿಸೀತೆ ? ಈ ಮಗುವಿಗೆ ಏನೋ ಕಾಹಿಲೆಯೆಂದು ತಿಳಿಯಬೇಕು. ಅತಿಯಾಗಿ ತಾಯಿಯನ್ನೇ ಹಂಬಲಿಸುವ ಮಗುವನ್ನು ಕಂಡು ಸಾಮಾನ್ಯ ತಾಯಂದಿರು "ಇದಕ್ಕೇನು ಸಂಕಟ ! ತಣ್ಣಗೆ ಅಣ್ಣ ತಮ್ಮಂದಿರೊಡನೆ ಆಟವಾಡಬಾರದೆ" ಎನ್ನಬಹುದು. ತನ್ನ ಮಕ್ಕಳೆಲ್ಲರು ಗಳಿಗೆ ಗಳಿಗೆಗೂ ತನ್ನತ್ತ ಮೋರೆಮಾಡಿ ಕೂಗುತ್ತಿರಲಿ—ಎಂಬ ದೇವರು ಸಹ ಆರೋಗ್ಯವಂತ ದೇವನೆನಿಸಲಾರ. ದೇವರನ್ನು ಕಲ್ಪಿಸುವಾತ—ಇನ್ನೂ ಉದಾರವಾದ, ವಿಶಾಲನಾದ ದೇವರನ್ನು ಕಲ್ಪಿಸಬೇಕು. ಹುಟ್ಟಿದ ಕೂಸು ತನ್ನ ಒಡನಾಡಿಗಳೊಡನೆ ಬೆರೆತು ನಲಿಯುವುದರಿಂದ ತಾಯಿ ತಂದೆಗಳು ಸಂತೋಷಪಡುವಂತೆ, ಹುಟ್ಟಿದ ವ್ಯಕ್ತಿ ಬಾಳಿನಲ್ಲಿ ಬೆರೆತು ಜೀವನದ ಆಟವನ್ನು ರಸವತ್ತಾಗಿ ಆಡುವದಕ್ಕಿಂತ ಹೆಚ್ಚಿನ ಬಯಕೆಯು ದೇವರಿಗಿರಲಾರದು.

## ಪ್ರೀತಿ—ಭೀತಿ

ವಿಶ್ವದ ವ್ಯಾಪಾರವನ್ನು ತಿಳಿಯುವುದು ದೊಡ್ಡ ಕೆಲಸ. ಚೆನ್ನಾಗಿ ಬದುಕಿ, ತನ್ನ ಜೀವನದ ಸುತ್ತು ಬರುವ ಇತರ ಜೀವನಗಳನ್ನು ಚೆನ್ನಾಗಿ ತಿಳಿದು, ಅವುಗಳೊಡನೆ ಹಿತವಾಗಿ ತನ್ನ ವ್ಯವಹಾರವನ್ನಿರಿಸಿಕೊಳ್ಳುವುದು ಕಡಿಮೆಯ ಕೆಲಸವೇನು ? ಜೀವನ ರಾಜ್ಯದ ಅನೇಕ ಸೊಗಸುಗಳನ್ನು ಕಂಡು ಮೈಮರೆತು ಆನಂದಿಸುವುದು ಕಡಿಮೆಯೇನು ?

ಮನುಷ್ಯನಿಗೆ ಸ್ವಾಭಾವಿಕವಾಗಿ ಈ ಭಾವನೆಗಳು ಬಾರದಿರಲು ಕಾರಣವೇನೆಂದರೆ —ಮೂಲ ಮನುಷ್ಯನ ಬಳಗದವರು, ದೇವರನ್ನು ಕಲ್ಪಿಸುವಾಗಲೇ, ಈ ಭಾವನೆ ಯಿಂದ ಕಲ್ಪಿಸಲಿಲ್ಲ. ಮಾನವ ಸಂಸ್ಕೃತಿಯ ಪ್ರಥಮ ದೇವರು—ಭೀತಿಜನ್ಯನು. ಅವನಿಗೆ ಹೆದರಿ, ಬೇಡಿ, ಕಾಡಿ ಮನುಷ್ಯ ತನ್ನ ನಂಬುಗೆಯನ್ನು ಸಾಗಿಸಿದ. ಕ್ರಮೇಣ, ಕೆಲವು ಸ್ವತಂತ್ರರು ಅವನಿಗೆ ಕ್ರೂರ ಬಿರುದುಗಳನ್ನು ಸಲ್ಲಿಸುವ ಬದಲು, ವಾತ್ಸಲ್ಯ ಗುಣವನ್ನು ಆರೋಪಿಸಿದರು. ದೇವರು ದಯಾಮಯನಾದನು, ಕರುಣಾಮಯ ನಾದನು. ಅವನನ್ನು ಕುರಿತು ನಾವು ಮಾಡುತ್ತಿರುವ ಸ್ತುತಿ ಸ್ತೋತ್ರಗಳೆಲ್ಲ ಈ ಮನೋಧರ್ಮದ ಛಾಯೆಗಳು. ಭೀತಿ ಮನಸ್ಕನು—ದೇವರ ರೌದ್ರವನ್ನು ಚಿತ್ರಿಸಿ, ಅವನಿಗೆ ಮಣಿದನು. ತಿರುಗಿ ತನಗಾಗಿ 'ಅದು ಕೊಡು, ಇದು ಕೊಡು'—ಎಂದೂ ಬೇಡಿದನು. ಇದೇ ಮನೋಭಾವವೇ ಮುಂದುವರಿದು ಪ್ರೀತಿಮನಸ್ಕನ ಭಕ್ತಿ ಬೆಳೆ ಯಿತು. ಅವನೂ ಹೊಗಳು ವಿದ್ಯೆಯನ್ನು ಕಲಿತನು. ಈ ಸ್ತುತಿಸುವಿಕೆಯ ಹಿಂಗಡೆ ಯಲ್ಲಿ ಭೀತಿ—ಇನ್ನೂ ಹೋಗಿಲ್ಲ. ಇಂಥ ಪ್ರೀತಿಯೂ ಸಮನಾದ ದಾರಿಯೆಂದು ಹೇಳಬರುವುದಿಲ್ಲ. ನಿಸರ್ಗವನ್ನು ನೋಡುವಾಗ ಭೀತಿ, ಪ್ರೀತಿಗಳು—ಒಂದು ಜೀವನದ ಇಮ್ಮೈಗಳಾಗಿ ಕಾಣದೇನು ? ಹಸುವನ್ನು ಕೊಂದು ತನ್ನ ಮರಿಗಳನ್ನು ಪೋಷಿಸುವ ತಾಯಿ ಹುಲಿಯ ಪ್ರೀತಿ ಕಡಮೆಯೇ, ಹೆಚ್ಚೇ ?

ಬದುಕಿನ ಬೆಲೆಯನ್ನು ವಿಮರ್ಶಿಸುವ ಬುದ್ಧಿಯು—ಪ್ರೀತಿ, ಭೀತಿಗಳೆರಡರ ಯೋಗ್ಯ ತೂಕವನ್ನು ಮಾಡಲು ಕಲಿಯಬೇಕಾದೀತು. ಆಗ ಜೀವನದ ಸುಖದುಃಖ ಗಳನ್ನರಿಯುವ ಶಕ್ತಿ ನಮಗೆ ದೊರಕೀತು.

# ೫ ನಮ್ಮ ನೋಟದ ಮುಖ್ಯ ಕೊರತೆಗಳು

**ತಾನು ಬೇರೆಯಲ್ಲ**

ಮನುಷ್ಯನು ಪ್ರಪಂಚವನ್ನು ಕುರಿತಾಗಿ ಮಾಡುವ ವಿಮರ್ಶೆಗೆ ತೀರ ಬಾಧಕವಾಗಿ ಬಂದಿರುವುದು ಅವನು 'ತನ್ನನ್ನು' ಬೇರೆಯೇ ಒಂದು ಜೀವಿಯಾಗಿ ತಿಳಿಯುವುದರಿಂದ. ಇತರ ಜೀವಿಗಳಿಂದ ಅವನಿಗೆ ದೊರೆಯಬಹುದಾದಷ್ಟು ಸುಖ ಸಿಗದಿರುವುದಕ್ಕೆ, ಅವುಗಳೊಡನೆ ಇವನ ವ್ಯವಹಾರ ಕೆಡುವುದಕ್ಕೆ. ಅವನ ಈ ಬೇರೆತನದ ಭಾವನೆಯೇ ಕಾರಣವಾಗಿದೆ. ತನ್ನ ಉಸಿರು, ಕ್ರಿಯೆ, ಮನಸ್ಸುಗಳೆಲ್ಲ ಸುತ್ತಲಿನ ಪ್ರಪಂಚದ ಮೇಲೆ ಹೊಂದಿರಬೇಕಾದುವು ಎಂದು ಎಲ್ಲಿಯ ತನಕ ಅವನು ತಿಳಿಯಲಾರನೋ, ಅಲ್ಲಿಯ ತನಕ ತನ್ನ ಜೀವನದ ಬೆಲೆಯೂ ಅವನಿಗೆ ತಿಳಿಯದು.

**ಸ್ವಾರ್ಥದ ಮಿತ**

ವ್ಯಕ್ತಿಗೆ ಸ್ವಾರ್ಥ ಬೇಡವೆಂದರೂ—ತನ್ನ ಬದುಕನ್ನು ಹಸನು ಮಾಡಿಕೊಳ್ಳುವಷ್ಟು, ತನ್ನ ಜೀವವನ್ನು ಉಳಿಸಿಕೊಳ್ಳುವಷ್ಟು, ಸ್ವಾರ್ಥವಾದರೂ ಬೇಕಾಗುತ್ತದೆ. ಆದರೆ ತನ್ನ ಪಾಲು, ಯಾವತ್ತೂ ಜೀವಗಳ ಪಾಲನ್ನು ಹೊಂದಿದೆ ಎನ್ನುವುದನ್ನು ತಿಳಿಯದೆ ಹೋಗುವಾತ, ತನ್ನ ಪಾಲಿನ ಮಿತಿಯನ್ನು ತಿಳಿಯಲಾರ. ಇತರ ಪ್ರಾಣಿಗಳ ಜೀವನಕ್ಕೂ ನಮ್ಮ ಜೀವನಕ್ಕೂ ಕಾಣುವ ಮುಖ್ಯ ತಾರತಮ್ಯವೇ ಇದು. ಉಳಿದ ಜೀವಿಗಳು ತಮ್ಮ ಹೊಟ್ಟೆಯ ಪೂರೈಕೆಯಾದ ಬಳಿಕ ಸುಮ್ಮನಿರುತ್ತವೆ. ತಮ್ಮ ಮಿತಿಯನ್ನು ತಿಳಿದು, ಕೂಡಿಡುವುವೂ ಉಂಟು. ತಿಂದು ಉಳಿದುದನ್ನು ಬಿಡುವುವುಂಟು. ಮನುಷ್ಯ ಹಾಗಲ್ಲ—ತನಗೆ ಬೇಕಾದುದಕ್ಕಿಂತಲೂ ಇಲ್ಲವೆ ತನ್ನ ಪಾಲಿಗೆ ಸಿಗಬೇಕಾದುದಕ್ಕಿಂತಲೂ ಹೆಚ್ಚಿಗೆ ಬಯಸುತ್ತಾನೆ. ಇದರ ಫಲವಾಗಿ—ಇತರ ಜೀವಿಗಳಿಗೆ ಇಲ್ಲದಂತೆ ಮಾಡುತ್ತಾನೆ. ಮನುಷ್ಯನ ವ್ಯಕ್ತಿತನದ ಸ್ವಾರ್ಥದ ಕಲ್ಪನೆಯಿಂದಲೇ ಧನಸತ್ತೆ ಉದಯಿಸಿತು. ಅದರ ಒಂದಲ್ಲ ಒಂದು ರೂಪವು ಇಂದು ಮನುಷ್ಯ ಕುಟುಂಬದ ಮುಕ್ಕಾಲು ಮೂರು ವೀಸ ಪಾಲು ಸುಖವನ್ನು ಅಪಹರಿಸಿಬಿಟ್ಟಿದೆ. ಮನುಷ್ಯನು ಇಂದು ಬದುಕನ್ನು ಕಣ್ಣೀರಿನ ಸಂತೆಯಾಗಿ ಮಾಡಲು—ಈ ಚಟವೇ ಕಾರಣ. ಇಂದು ಮಾನವ ಕೋಟಿಯ ಬಹು ಭಾಗದ ಶ್ರಮ, ಅವನ ಚಿಂತೆಗಳು, ಹೊಟ್ಟೆಯ ಪಾಡಿಗಾಗಿಯೇ ಮೀಸಲಾಗಿವೆ.

**ಬಲಶಾಲಿಗಳು**

ಪ್ರಾಣಿಗಳಿಗೂ ಸ್ವಾರ್ಥವಿದೆ. ಅವು ಬದುಕಲು ಆಹಾರ ಸಂಗ್ರಹಿಸುತ್ತವೆ. ಆದರೆ ನಾಳೆಗೆ, ನಾಡಿದ್ದಿಗೆ—ಎಂದು ಇಂದೇ ಊರನ್ನು ಸೂರೆ ಮಾಡುವುದಿಲ್ಲ. ಇಂದಿನ ಸಮೃದ್ಧಿಯಲ್ಲಿ ಎಲ್ಲರಿಗೂ ಪಾಲಿದೆ. ನಾಳಿನ ಕ್ಷಾಮದಲ್ಲೂ ಎಲ್ಲರಿಗೂ ಪಾಲಿದೆ.

ಆದರೆ ಮನುಷ್ಯ ಪ್ರಪಂಚದಲ್ಲಿ ಜೀವರು—ತಮಗೆ ಬೇರೆಯೇ ಆತ್ಮ ನಿರ್ಮಾಣ

ಮಾಡಿಕೊಂಡರು. ಅವರ ಇಹ ಪರಗಳೆರಡನ್ನೂ ಈ ಕಲ್ಪನೆ ಬಾಧಿಸಿತು. ಬಲಿಷ್ಠರಾದ ನಾಲ್ಕು ಆತ್ಮಗಳು ಸಾಮಾನ್ಯ ಜನರ ಸುಖ ಸಾಧನಗಳನ್ನೆಲ್ಲ, ತಮ್ಮ ಮುಷ್ಟಿಯಲ್ಲಿ ಇರಿಸಿಕೊಂಡು, ಉಳಿದವರಿಗೆ ದುಃಖವನ್ನು ಕೊಡುವಂತಾಯಿತು. ಇದರಿಂದ ಉಂಟಾದ ಬಡತನದ ಪ್ರಶ್ನೆಯಿಲ್ಲದಿದ್ದರೆ ಪ್ರಪಂಚದ ಹೆಚ್ಚಿನ ಸೊಗಸುಗಳ ಅರಿವು ಜನಕ್ಕೆ ದೊರೆಯುತ್ತಿತ್ತು. ಈಗ ಜನರ ಹೋರಾಟವೆಲ್ಲ ಅನ್ನಕ್ಕಾಗಿ. ಮೇಲೆ, ಏನಾದರೂ ಮಾನಸಿಕ ಸುಖದ ಒಡವೆಗಳನ್ನು ಬಯಸಿದರೂ, ಶಕ್ತಿಯುತರು ಅದನ್ನು ಪ್ರತ್ಯಕ್ಷ, ಪರೋಕ್ಷ ಮಾರ್ಗಗಳಿಂದ ಕಸಿದುಕೊಳ್ಳುವಂತಾಗಿದೆ. ವ್ಯಕ್ತಿಯು ಸಮಾಜದಿಂದ ಬೇರೆಯಲ್ಲ. ಅಪರ ಹಿತ, ತನ್ನ ಹಿತ—ಎನ್ನುವುದೇ ಆತನ ಬೆಳವಣಿಗೆಗೆ, ಸುಖಕ್ಕೆ ಅವಶ್ಯಕವಾದ ಹಾದಿ. ಇಲ್ಲಿ 'ಸಮಾಜ' ಎಂದರೆ ಮಾನವ ಸಮಾಜವೆಂದು ತಿಳಿದರೂ ಸಾಕು. ಆದರೆ ಜೀವನದ ಸುಖವನ್ನು ಕುರಿತು ಚಿಂತಿಸುವಾಗ–ಯಾವತ್ತು ಜೀವಕೋಟಿಯೂ ಒಂದೇ ಸಮಾಜವೆನಿಸುತ್ತದೆ.

**ಕೂಡಿಡುವ ಶಕ್ತಿ**

ಬಹು ಯುಗಗಳಿಂದ ಮನುಷ್ಯನ ಆರ್ಥಿಕ ಸಂಸಾರವನ್ನು, ರಾಜಕೀಯವನ್ನು ವ್ಯಕ್ತಿಯ ಸ್ವಾರ್ಥ ಆವರಿಸಿ ಬಂದಿದೆ. ಕೂಡಿಡುವ ಶಕ್ತಿ ಅವನಿಗೆ ಬಂದಂದಿನಿಂದ, ಬೆಳವಣಿಗೆಗೆ ಮೃತ್ಯುವಾಗಿ ಬಂದಿದೆ. ಆರಂಭದಲ್ಲಿ ಅನ್ನ ಕೂಡಿಡತೊಡಗಿದ ಮನುಷ್ಯ, ಕೊನೆಗೆ ಅಧಿಕಾರ ಕೊಡುವ ಯಾವತ್ತೂ ವಸ್ತುಒಡವೆಗಳನ್ನು ಕೂಡಿಟ್ಟ; ಈ ಸ್ವಾರ್ಥದ ವಿಸ್ತರಣವು ನಮ್ಮ ಅನಾದಿಕಾಲದ ಧರ್ಮಮತಗಳನ್ನೂ ಆವರಿಸಿಕೊಂಡಿತ್ತು. ಅದೇ ಇಂದು–ತನಗಾಗಿ ಸ್ವರ್ಗವನ್ನು, ಮೋಕ್ಷವನ್ನು ಕೂಡಿಡಲು ಪ್ರೇರಿಸುತ್ತಿದೆ. ಇಹದಲ್ಲಿ ವ್ಯಕ್ತಿ ಸುಖ ಜೀವಕೋಟಿಯ ಸುಖದೊಡನೆ ಬೆರೆತಿರುವಲ್ಲಿ, ಪರದಲ್ಲಿಯೂ ಅದು ಬೇರೆಯಾಗಿ ಉಳಿಯಲು ಶಕ್ಯವಿಲ್ಲ–ಪರ ಎಂಬುದು ಇರುವುದಾದರೆ.

ಲಕ್ಷೋಪಲಕ್ಷ ಜೀವಿಗಳ ಸಂಸಾರವಿದು. ಇವುಗಳಲ್ಲಿ ಕೆಲವೇ ಜೀವಿಗಳು ಪಾರಾಗಲು ಬಂದೀತೆ ? ತಮಗೆ ಬೇರೆಯೇ ಆತ್ಮವಿದೆ, ತಾವು ಮಾತ್ರ ಈ ಪ್ರಪಂಚದ ಗೊಂದಲದಿಂದ ಪಾರಾಗಬಲ್ಲೆವು—ಎಂದು ತಿಳಿಯುವುದಾದರೂ ಎಂಥ ಸ್ವಾರ್ಥ ! ಯಾವ ಜೀವಿಯೂ ವಿಶ್ವ ಶರೀರದಿಂದ ಕಳಚಿ–ಬೇರೆಯೇ ಸ್ವರ್ಗ, ಮೋಕ್ಷ ಕಲ್ಪಿಸಲು ಬರಲಾರದು. ಪ್ರಪಂಚವು ಬಂಧನದಲ್ಲಿರುವುದೆಂದು ತಿಳಿದರೂ—ಅದು ಸಾಧ್ಯವೇ ? ಸಮಂವೇ ?

**ಒಟ್ಟು ಸಮಾಜವೇ ಬಲಿ**

ಹಿಟ್ಲರನ ಜರ್ಮನಿಯಲ್ಲಿ, ಒಬ್ಬ ವ್ಯಕ್ತಿ ತನ್ನದೇ ಆದ ರಾಜಕೀಯವನ್ನು ಕಟ್ಟಿ ಸಾಧಿಸಬಲ್ಲನೇ ? ಗುಲಾಮತನಕ್ಕೆ ಬಲಿಯಾದ ನಮ್ಮ ದೇಶದಲ್ಲಿ ಒಬ್ಬೊಬ್ಬನೇ ಸ್ವತಂತ್ರನಾಗುವುದೆಂಬುದು ಸಾಧ್ಯವೇ ? ಈ ದಿನ ಜರ್ಮನಿಯಲ್ಲಿಂದೇ ತಿಳಿಯುವ –ಹಿಟ್ಲರನ ಜನಾಂಗ ನೀತಿಯನ್ನು ಒಪ್ಪದವರೂ ಇದ್ದರು. ಅವರೆಲ್ಲ "ನಮಗೆ ರಾಜ್ಯ ವಿಸ್ತರಣ ಬೇಡ ; ನಾವು ಎಲ್ಲರಂತೆಯೇ ಇರುತ್ತೇವೆ"—ಎಂದಿದ್ದರೆ ಆ ಮಾತು ನಡೆಯು

ಪಂತಿತ್ತೇ ? ಎಲ್ಲಿಯ ತನಕ ಅವರ ಮಾತು ಜನತೆಯ ಮಾತಾಗಿ ಪರಿಣಮಿಸದೋ ಅಲ್ಲಿಯ ತನಕ ಅದು ನಡೆಯಲಾರದು. ಅಲ್ಲಿಯ ತನಕ ಹಿಟ್ಲರಸಂಥವರ ರೀತಿಗಳ ಕಟ್ಟು ಅವರ ಮೇಲೆಯೂ ಬೀಳುತ್ತದೆ. 'ಹಿಟ್ಲರ' ಒಬ್ಬನೇ 'ನಾಜಿ' ನೀತಿಯನ್ನು ಸಾಧಿಸಿದನೇ ? ಹಾಗೆ ಸಾಧಿಸಲಾರ. ಜರ್ಮನಿಯು ಹಿಂದಿನ ಅಪಮಾನಗಳಿಂದ ನೊಂದಿತ್ತು. ಅಲ್ಲಿನ ಶ್ರೀಮಂತರು ವ್ಯಾಪಾರ ವಿಸ್ತಾರಕ್ಕಾಗಿ ಹಸಿದಿದ್ದರು. ಅಲ್ಲಿನ ಸೇನಾನಿಗಳು ಕದನಕ್ಕಾಗಿ ಕಾದಿದ್ದರು. ನೆರೆಕರೆಯ ದೇಶದವರೂ ಸಾಕಷ್ಟು ಅನುಮಾನ, ಈರ್ಷೆಗಳನ್ನು ಅವರ ಮೇಲೆ ತೊಟ್ಟಿದ್ದರು. ಇವೆಲ್ಲ ಮನೋಭಾವನೆಗಳ ಒಟ್ಟು ಮೊತ್ತವು 'ನಾಜಿ' ಉಲ್ಬಣದಲ್ಲಿ ಪರಿಣಮಿಸಿತು. ಕೆಲವರು ತಮ್ಮ ಪ್ರತ್ಯಕ್ಷ ಸಹಾಯದಿಂದ ಅದನ್ನು ಬೆಳೆಯಿಸಿದರು ; ಕೆಲವರು ತಮ್ಮ ಶಕ್ತಿಶೂನ್ಯತೆಯಿಂದ ಅದಕ್ಕೆ ತಲೆವಾಗಿದರು. ಹಲವರು ಮುಂದಿನ ಪರಿಣಾಮವನ್ನು ನಿರೀಕ್ಷಿಸಲಾರದೆ—ಉದಾಸೀನರಾದರು. ಇಂದು ಆ ಒಟ್ಟು ಸಮಾಜದ ಕ್ರಿಯೆಗೆ ಎಲ್ಲರೂ ಭೋಗಿಗಳಾಗಿದ್ದಾರೆ. ಪ್ರಪಂಚಕ್ಕೂ ಜರ್ಮನಿಗೂ ಇರುವ ಸಂಬಂಧವನ್ನು ಎಣಿಸಿದಲ್ಲೂ ಹೀಗೇನೆ.

**ನಮ್ಮ ದೇಶ**

ಅಹರಂತೆ ಹಿಂದುಸ್ಥಾನದ ಪಾಡನ್ನು ನೋಡುವ. ನಮ್ಮ ಹಿರಿಯರು, ಅಜ್ಜ, ಮುತ್ತಜ್ಜಂದಿರು—ಪರಕೀಯರನ್ನು ತಮ್ಮ ಸ್ವಾರ್ಥಕ್ಕಾಗಿ ಬರಮಾಡಿಕೊಂಡುದುಂಟು, ತಮ್ಮ ಕುತಂತ್ರ ಸಾಧಿಸಲು ಬರಮಾಡಿಕೊಂಡುದುಂಟು ; ಅಜ್ಞಾನದಿಂದ ಹೆರರಿಗೆ ಅವಕಾಶ ಕೊಟ್ಟುದುಂಟು ; ಷಂಢತನದಿಂದ ಮೌನವಾಗಿದ್ದು, ಹೆರರ ಬೆಳವಣಿಗೆಯನ್ನು ನೋಡಿದವರುಂಟು. ಒಟ್ಟಿಂದ ಅದು ದೇಶದ ದಾಸ್ಯದಲ್ಲಿ ಪರಿಣಮಿಸಿತು. ಒಟ್ಟು ನಮ್ಮ ಜನಾಂಗ ಈ ದಾಸ್ಯಶೃಂಖಲೆಯನ್ನು ಮುರಿಯುವ ಸಾಹಸ ಮಾಡುವ ತನಕ ಅದು ನಮಗೆ ವಿಧಿಯಾಯಿತು. ಹಾಗೆ ಮಾಡದಿರಲು ಏನು ಕಾರಣ ? ಸ್ವಾತಂತ್ರ್ಯ ಬಯಸಿ ಶ್ರಮಿಸುವವರು ಕೆಲರು ; ಅದು ಬಂದರೆ ಒಳ್ಳೆಯದು—ಎಂದು ಬರಿಯ ಬಯಕೆಯಲ್ಲಿ ತೃಪ್ತರು ಹಲರು ; ಅದಕ್ಕೆ ವಿರೋಧಿಗಳು ಕೆಲವರು. 'ಬರಬೇಕು ನಿಜ, ನಮ್ಮಂತಹವರು ನಮ್ಮ ಹೊಟ್ಟೆಯ ಪಾಲಿಗೆ ದುಡಿಯುವುದು ಮೊದಲ ಕರ್ತವ್ಯ'—ಎಂದವರು ಹಲವರು. ಆದುದರಿಂದ ಸ್ವಾತಂತ್ರ್ಯಕ್ಕಾಗಿ ದುಡಿಯುತ್ತಿರುವವರೂ ಬಹು ಕಾಲ ಗುಲಾಮರಾಗಿಯೆ ಉಳಿದರು. ಉಳಿದವರೂ ಹಾಗಾದರು. ಜೀವನದಲ್ಲಿ—ರಾಜಕೀಯ, ಆರ್ಥಿಕತೆ, ಧಾರ್ಮಿಕತೆ ಎಂದು ಪಾಲುಮಾಡುವ ಯಾವುದೂ ಇಲ್ಲ. ಎಲ್ಲವು ಒಂದರೊಡನೊಂದು ಹೆಣೆದು ನಿಂತಿರುವ ಜೀವನದ ಶಕ್ತಿಗಳು.

**ಎರಡನೆಯ ಮಹಾ ಯುದ್ಧ**

ಮೊನ್ನೆ ದಿನದ ಪ್ರಪಂಚದಲ್ಲಿ ಕಾಣಿಸಿದಂಥ ಮಹಾ ಉರಿಯು ರಾಷ್ಟ್ರೀಯ ಸ್ವಾರ್ಥ, ಜನಾಂಗಿಕ ಸ್ವಾರ್ಥ, ರಾಷ್ಟ್ರೀಯ ಪ್ರತ್ಯೇಕತೆ, ರಾಷ್ಟ್ರೀಯ ದಾಸ್ಯ, ಜನಾಂಗಗಳ ಪ್ರಾಬಲ್ಯ, ಅಜ್ಞಾನ—ಇವೆಲ್ಲವುಗಳ ಒಟ್ಟು ಮೊತ್ತದ ಪರಿಣಾಮ. ಇದರಿಂದ

ಒಬ್ಬೊಬ್ಬರಿಗೇನೆ ಬಿಡುಗಡೆಯಿಲ್ಲ. ಹಾಗೆ ಒಬ್ಬೊಬ್ಬರು ತಪ್ಪಿ ಬಹಳ ದಿನ ಸಮೃದ್ಧಿಯಾಗಿ ಉಳಿಯಲಾರರು.

ವ್ಯಕ್ತಿಯು ತನ್ನ ಜೀವನದ ಹೊಂದಿಕೆ ತನ್ನ ಕುಟುಂಬದವರ ತನಕ ಇದೆ ಎನ್ನುವಷ್ಟರ ಮಟ್ಟಿಗೆ ವಿಸ್ತರಿಸಿದ್ದಾನೆ. ಅನ್ನ ಅರಿವೆಗಳ ಜತೆಗೆ, ತನ್ನ ಮನೆ, ಬಳಗದವರ ಅನ್ನ ಅರಿವೆಗಳ ಸಲುವಾಗಿ ದುಡಿಯಲು ಕಲಿತಿದ್ದಾನೆ. ಧರ್ಮಗಳೂ ಹಾಗೇನೆ ಮಾಡುತ್ತಿವೆ. ವ್ಯಕ್ತಿಯ ಮೋಕ್ಷ ಸ್ವರ್ಗಗಳನ್ನು ಅವು ಒಪ್ಪುವವರಿಂದ, ಒಂದು ಜಾತಿಯವರಿಗೋ, ಪಂಗಡದವರಿಗೋ—ಸ್ವರ್ಗ ಕರುಣಿಸಲು ಒಪ್ಪುತ್ತಿವೆ. ಹಾಗಿಲ್ಲವಾದರೂ, ಅನ್ಯರಿಗೆ ಅದನ್ನು ಅಲ್ಲಗಳೆಯುವವರಲ್ಲಿ ಸಿದ್ಧವಾಗಿವೆ.

ಮನುಷ್ಯನು ತನ್ನನ್ನು ಬೇರೆಯೇ ಆತ್ಮವಾಗಿ ತಿಳಿದು, ಅದರ ಕರ್ಮಕ್ಕೆ ಅದೇ ಹೊಣೆ ಎಂದು ನಿರ್ಣಯಿಸಿ, ಸಮಾಜದ ಜವಾಬುದಾರಿಯನ್ನು ಹೇಗೆ ಕಳಚಿಕೊಳ್ಳಲು ಕಲಿತಿರಬಹುದು ? ವ್ಯಕ್ತಿ ಭವಪಾಶದಿಂದ ತಪ್ಪಲು ಬಯಸುವ ಮನೋವೃತ್ತಿ, ತನ್ನ ಏಕಾಕಿ ಆತ್ಮಸುಖ ಹುಡುಕುವ ಬಯಕೆ—ಇವೆಲ್ಲ ಎಂದೋ ತೊಡಗಿದ ಮಾನವ ಸ್ವಭಾವದ ವಕ್ರತೆಗಳು. ಈ ವಕ್ರತೆಯು ತಂದಿಕ್ಕುತ್ತಿರುವ ಅನೇಕ ಸಂಕಷ್ಟಗಳನ್ನುಂಡು ಅವನ ಮಾರ್ಗವು ತಿದ್ದಬೇಕಾಗಿದೆ. ಅವನ ಪ್ರತ್ಯೇಕತೆಯ ಭಾವನೆಯು ಬದಲಿಸಬೇಕಾಗಿದೆ.

## ವ್ಯಕ್ತಿ, ಗುಂಪು

ಮನುಷ್ಯ ಇತರ ಜೀವಿಗಳಂತೆಯೆ ಒಂದು ಜೀವಿ. ಆ ಜೀವಿಯು ತನ್ನ ಬಾಳ್ವೆಯಿರುವಷ್ಟು ದಿನ, 'ಸ್ವತಂತ್ರ'ವೆನಿಸಿಕೊಳ್ಳಬಹುದಾದ ಶಕ್ತಿಗಳಿಂದ ಕೂಡಿರುವುದು ನಿಜ. ಆಳವಾಗಿ ಪರಿಶೀಲಿಸಿದಲ್ಲಿ ಅವೂ ಸಾಮಾಜಿಕವಾಗಿವೆ. ಅದರೂ—ವ್ಯಕ್ತಿ ಜೀವನದಲ್ಲಿ ವ್ಯಕ್ತಿಯದೇ ಆದ ಕೆಲವು ಯೋಗ್ಯತೆಗಳು ಕುಡುಬರುತ್ತವೆ. ಇದರಿಂದ ಒಂದೊಂದು ವ್ಯಕ್ತಿ ಇನ್ನೊಂದು ವ್ಯಕ್ತಿಗಿಂತ ಭಿನ್ನವಾಗಿ ಕಾಣಿಸುತ್ತಾನೆ. ಆದರೂ ಅವನ ಸುಖದುಃಖ ಗುಂಪಿನ ಸುಖದೊಡನೆಯೇ ಬೆರೆತುಕೊಂಡಿದೆ. ವ್ಯಕ್ತಿಯ ಹಿರಿಮೆಯಿಂದ ಗುಂಪಿನ ಹಿರಿಮೆಯೂ, ವ್ಯಕ್ತಿಯ ಕಿರಿಮೆಯಿಂದ ಗುಂಪಿನ ಕಿರಿಮೆಯೂ ಉಂಟಾಗುತ್ತದೆ. ವ್ಯಕ್ತಿಗೆ 'ಗುಂಪು' ಬೆಂಬಲಕ್ಕಾಗಿ ಉಳಿಯಬೇಕು.

ಆದರೂ—ಎಷ್ಟೋ ಅವಾಂತರಗಳು ಮನುಷ್ಯನ ಗುಂಪಿಗೆ ಇದಿರಾಗುವಾಗ, ಯೋಚಿಸಬಲ್ಲ ಆತನ ಮನಸ್ಸಿಗೆ, ತಾನು ಸಣ್ಣವ, ತನ್ನ ಗುಂಪು ಚಿಕ್ಕದು—ಎಂಬ ಭಾವನೆಯಾಗುತ್ತದೆ. ತನ್ನಂತೆಯೇ ಗುಂಪಾಗಿ ಇದಿರು ಬರುವ ಗುಂಪಿನೊಡನೆ ಕಾದಾಡಿ, ತನ್ನ ಬಲುಮೆಯನ್ನು ಅವನು ಸ್ಥಾಪಿಸಬಯಸುವುದುಂಟು. ಆದರೆ ನಿಸರ್ಗದ ಆಕ್ರೋಶಗಳು ಅವನನ್ನು ಇದಿರಿಸುವಾಗ—ಅವನಿಗೆ ತನ್ನ ಸಣ್ಣತನ ಹೊಳೆಯುತ್ತದೆ. ಭೂಕಂಪ, ಜಲಪ್ರಳಯ ಅಗ್ನ್ಯುತ್ಪಾತ, ಸಿಡಿಲು, ಬಿರುಗಾಳಿ—ಇವುಗಳು ಅವನನ್ನು ಅಲ್ಪನನ್ನಾಗಿ ಮಾಡಿತೋರಿಸುತ್ತವೆ. ಆಗ ತನ್ನ ಗುಂಪೂ ತನ್ನನ್ನು ಉಳಿಸಲಾರದು—ಎಂದು ಅವನಿಗೆ ತೋರಿಸುತ್ತದೆ. ಗುಂಪಿನಿಂದ ತಾನು ಬೇರೆ ಉಳಿದರೂ ಪಾರಾಗಲಾರೆ-ಎಂದು ಅವನಿಗೆ ಗೋಚರಿಸಬೇಕಿತ್ತು. ಆದರೆ ತನ್ನ ಸಾವನ್ನು ತಾನು

ಇದಿರಿಸಲು ಅಂಜಿ, ತನ್ನನ್ನು ಕುರಿತು ಬಹುವಾಗಿ ಚಿಂತಿಸಿ, ಗುಂಪು ಬದುಕಲಿ, ಬದುಕದಿರಲಿ, ತಾನಾದರೂ ಬದುಕಿಯೇನೆ–ಎಂದು ಯೋಚಿಸಲು ಆತ ಕಲಿತ. ಸಾವು ಬರುವಾಗ 'ತನಗೆ ತಾನು' ಎಂಬ ಭಾವನೆ ಅವನಲ್ಲಿ ಮೊಳೆತಿರಬೇಕು. ಆ ಸಂಬಂಧವಾದ ಜ್ಞಾನವೆಲ್ಲ 'ವ್ಯಕ್ತಿ ಆತ್ಮ' ಎಂಬುದರ ತಳಹದಿಯ ಮೇಲೆ ಬೆಳೆದಿರಬೇಕು.

**ಸ್ವಾರ್ಥದ ರೀತಿ**

ಹೀಗೆ ತನ್ನ ಸಣ್ಣತನ, ತನ್ನ ಉಳಿಗಾಲ—ಇವುಗಳನ್ನು ಅವನು ಯೋಚಿಸುತ್ತ ಬರುವುದು ಸಹಜ; ಅವನ್ನು ರಕ್ಷಿಸಲು ಪ್ರಯತ್ನಿಸುವುದೂ ಸಹಜ. ತನಗೆ ಇದಿರಾಗಿ, ಮಹತ್ತಾಗಿ ಕಾಣಿಸುವ–ಈ ಪ್ರಪಂಚವೇನು, ಅದರ ಶಕ್ತಿಗಳೇನು—ಎಂದು ತನ್ನ ಇದಿರಾಳಿಗಳನ್ನು ಕುರಿತು ಯೋಚಿಸುತ್ತಾನೆ. ತನಗೆ ಅನುಕೂಲವಾಗುತ್ತಿರುವ ಶಕ್ತಿಗಳನ್ನು ಕುರಿತೂ—ಅಂದರೆ ಮಳೆಬೆಳೆಗಳನ್ನು ಕುರಿತೂ ಯೋಚಿಸುತ್ತಾನೆ. ಅವುಗಳಿಗೆಲ್ಲ ತನಗಿರುವಂತೆ ಒಂದೊಂದು, ಮಹಾ–ಆತ್ಮವನ್ನು ಆರೋಪಿಸಿ, ಅವುಗಳ ದೊಡ್ಡಿಸ್ತಿಕೆಯ ಎದುರು ತನ್ನ ಕಿರಿಮೆಯನ್ನು ಹಿಡಿದು ನೋಡುತ್ತಾನೆ. ಕೊನೆಗೆ ಒಂದಿಲ್ಲ ಒಂದು ದಿನ, ನಾಶವಾಗಲೇಬೇಕಾದ ತನ್ನ ಜೀವನದ ಗುರಿಯೇನು–ಎಂದು ಯೋಚಿಸುತ್ತಾನೆ. ಈ ಹುಟ್ಟು ಏತಕ್ಕಾಯಿತು, ಜೀವನ ಏತಕ್ಕಾಯಿತು—ಎಂದು ತಿಳಿಯುವುದೇ ತನ್ನ ಕರ್ತವ್ಯ–ಎಂದು ಭಾವಿಸುತ್ತಾನೆ. ಆ ಜೀವನಗಳನ್ನು ಹೊಂದಿರುವ ಜೀವನ ಯಾತ್ರೆಯ ಉದ್ದೇಶವೇನು ?–ಎಂದೂ ಪ್ರಶ್ನಿಸುತ್ತಾನೆ. ಇವುಗಳ ಗುಟ್ಟು ತನಗೆ ತಿಳಿದಲ್ಲಿ, ತಾನು ಈ ಬದುಕಿನ ಅನೇಕ ವೈರಿಗಳ ಎದುರು ತೊಳಲಾಡಬೇಕಾಗಿಲ್ಲವಲ್ಲ ಎಂದು ಎಣಿಸಿ, ತನ್ನ ಆತ್ಮ ರಕ್ಷಣೆಯ ಉಪಾಯವನ್ನು ಚಿಂತಿಸುತ್ತಾನೆ. ಅಲ್ಲಿಂದ ಮುಂದೆ—ಅವನಿಗೆ ತನ್ನ ಆತ್ಮ ರಕ್ಷಣೆಯ ವಿಚಾರ ಬಿಟ್ಟು ಉಳಿದ ಜೀವಿಗಳ ಸುಖ ದುಃಖಗಳಲ್ಲಿ ಪಾಲುಗಾರನಾಗುವುದಕ್ಕೆ ಇಷ್ಟಬರಲಾರದು.

**ಅಳತೆಗೆ ಮೀರಿದ್ದು**

ಮನುಷ್ಯ ತನ್ನ ಬಾಳ್ವೆಯ ಉದ್ದೇಶವನ್ನು ತಿಳಿಯಲೆತ್ನಿಸುವಂಥ ಹಂಬಲದಲ್ಲಿ ಸೋಜಿಗವಿಲ್ಲ; ಸಹಜತೆಯೂ ಇದೆ. ಅದಕ್ಕೂ ಮುಂದುವರಿದರೆ—ವಿಶ್ವದ ಉದ್ದೇಶವನ್ನು ಕುರಿತು ತಿಳಿಯಲು ಹಂಬಲಿಸುವುದರಲ್ಲಿ—ಮಾತ್ರ ಚೋದ್ಯವಿದೆ. ಅವನು ತನ್ನ ಅಳತೆಯನ್ನು ಅತಿಯಾಗಿ ಮಾಡಿ ತಿಳಿದಿರಬೇಕೆಂದು ಕಾಣುತ್ತದೆ. ವಿಶ್ವ ಚಿಕ್ಕದೂ ಅಲ್ಲ, ಅದರ ವ್ಯಾಪಾರಗಳೂ ಇಂದಿನವೂ ಅಲ್ಲ. ಈಗಾಗಲೇ ನಿರ್ಧಾರವಾಗಿ ಕರತಲಾಮಲಕವಾಗಿಬಿಡುವಂತಹದೂ ಅಲ್ಲ.

ನಮ್ಮ ಭೂಮಿಯೊಂದೇ ವಿಶ್ವವೇ ? ಇಂದು ವಿಜ್ಞಾನವು ನಮಗೆ ವಿಶ್ವದ ಅನೇಕ ಸಂಗತಿಗಳನ್ನು ತಿಳಿಸತೊಡಗಿದೆ. ಭೂಮಿಯು ಒಂದು ಧೂಳಿನ ಕಣ–ವಿಶ್ವದ ಮುಂದಕ್ಕೆ. ನಮಗೆ ಕಾಣಿಸುವ ವಿಶ್ವದ ವ್ಯಾಪಾರಗಳು ಕೋಟಿಗಟ್ಟಲೆ. ಅದರಲ್ಲಿ ಲೋಕಗಳು ಬ್ರಹ್ಮಾಂಡಗಾತ್ರದುವು. ಸೂರ್ಯನಿಗಿಂತ, ಹಿರಿದಾದ ಲೋಕಗಳಿವೆ. ಅವುಗಳ ರೂಪ ದರ್ಶನವೇ ನಮಗೆ ತಿಳಿಯದಷ್ಟು ದೂರವಾಗಿವೆ. ನಮಗೆ ಪರಿಚಿತ

ವಾದ ಭೂಮಿಯೂ ಪೂರ್ಣವಾಗಿ ನಮ್ಮ ಎಟುಕಿಗೆ ಸಿಕ್ಕಿಲ್ಲ. ಅಲ್ಲಿ ವಿಕಸನಗೊಂಡಿರುವ ಜೀವಕೋಟಿಗಳಲ್ಲಿ, ಬರಿಗಣ್ಣಿಗೆ ಕಾಣಿಸುವುವವೆಷ್ಟು ? ಕಾಣಿಸದುವೆಷ್ಟು ? ಕಂಡವುಗಳ ಪರಿಚಯವಾದರೂ ನಮಗೆಷ್ಟರ ಮಟ್ಟಿಗೆ ಇದೆ ? ಇನ್ನು, ನಿನ್ನೆಯ ಹಲವು ಯುಗಗಳ ಜೀವನವು ಇಂದಿನದಕ್ಕೆ ಕಾರಣವಾಗಿದೆ ಇಂದಿನದು ನಾಳೆಗೆ ಕಾರಣ........ತಿರುಗಿ ಅದು ನಾಡಿದ್ದಿನ ತಾಯಿ. ಹೀಗಿರುತ್ತ ಈ ಎಲ್ಲ ಜೀವಗಳ ಹೇತುವೇನು—ಎಂದು ತಿಳಿಯುಂ ವುದು, ನಮ್ಮ ಮಿಂತ ಶಕ್ತಿಗೆ ಎಟುಕದ ಸಂಗತಿ.

**ಬೆಳೆಯುತ್ತಿರುವ ಲೋಕ**

ಅಲ್ಲದೆ ವಿಶ್ವವು ಇದೀಗಲೆ ಮುಗಿವಂಥ ಸಂಗತಿಯೇ ? ವಿಜ್ಞಾನವು ನಮ್ಮ ಭೂಮಿಯ ಜೀವ ವಿಕಾಸದ ಮೇಲೆ ತೋರಿದ ಬೆಳಕಿನಿಂದ, ನಮಗೆ ತೀರ ನಾಳಿನ ನೋಟ ದೊರೆಯದೆಂದು ಸ್ಪಷ್ಟವಾಗುತ್ತದೆ. ನಿನ್ನೆಯ ದಿನ ಇಂದಿಗೆ ಕಾರಣವಾಗಿದೆ. ನಿನ್ನಿನ ಪರಿಸ್ಥಿತಿಗಳಿಂದ ಇಂದಿನದು ಕಲ್ಪಿತವಾಗಿವೆ. ಇಂದಿನದರಿಂದ, ನಾಳೆ ಎಂಬುದು ಉಂಟಾಗಬೇಕು. ನಿನ್ನೆಯಂತೆಯೇ ಇಂದು ಇಲ್ಲ. ವಿಕಾಸದ ಹಾದಿ ಇದನ್ನೆಲ್ಲ ತೋರಿಸು ತ್ತಿದೆ. ಕಪಿಯು ಮಾನವನ ಹಿರಿಯನಾಗಿದ್ದಂತೆ, ಇಂದಿನ ಮಾನವನು ನಾಳಿನ ಇನ್ನಾ ರದೋ ಹಿರಿಯನು. ಈ ದೂರವನ್ನು ಎಷ್ಟು ಮುಂದೆ ಹರಿಸುತ್ತೇವೆಯೋ ಅಷ್ಟು ಮುಂದಿನದು ಅನಿರ್ಣೀತ, ಅನಿಶ್ಚಯವಾಗುತ್ತದೆ. ಅವೆಲ್ಲ ಇಂದಿನ ಮೇಲಿಂದ ಮಾತ್ರ ವಲ್ಲ, ನಾಳೆಯ ಜೀವನದಿಂದ ರೂಪಿತವಾಗಬೇಕು. ಹೀಗಿರುವಲ್ಲಿ ವಿಶ್ವದ ಗುರಿಯು ನಮ್ಮ ಹವ್ವನ್ನು ಮೀರಿದ ಕಾಂಕ್ಷೆ ಎಟುಕದ ನೋಟ. ಅದೇನೆ ತನ್ನ ಗುರಿಯನ್ನು ನಿರ್ಣಯಿಸಿಕೊಂಡಿರಲಾರದು. ನಾವು ಬಲ್ಲವರಂತೆ—ಆ ಗುರಿ "ಸಂಸಾರದಿಂದ ಬಿಡುಗಡೆ ಗೊಂಡು ಪರಮಾತ್ಮನನ್ನು ಸೇರುವುದು" ಎಂದು ಸಾರಿದರೆ, ಅಪಹಾಸ್ಯವಾದೀತು. ಈ ಯಾವತ್ತು ಜೀವಕೋಟಿ, ತನ್ನ ವಿನಾಶದ ಕಡೆಗೆ, ಮಾಯೆಯಿಂದ ಬಂಧಿತವಾಗಿ ಓಡು ತ್ತಿದೆ, ಕೆಲವೊಂದು ಮಾನವ ಪಂಡಿತರು ಮಾತ್ರ ಇದನ್ನು ಅರಿತು ಪಾರಾಗಲೆತ್ನಿಸು ತ್ತಿದ್ದಾರೆ–ಎನ್ನಲೇ ? ನಿಜಕ್ಕೂ ಹಾಗಿರುವುದಾದರೆ, ನನ್ನಂಥ ಒಂದು ಜೀವಿ—ಹಲವರ ಸಾವುಗಳಲ್ಲಿ ನನ್ನದೂ ಸೇರಲಿ. ಅವರ ಹಾನಿಗಳಲ್ಲಿ ನನಗೂ ಪಾಲು ಇರಲಿ. ಅವರನ್ನು ಬಿಟ್ಟು ಪಡೆಯುವ ಯಾವ ಸುಖವೂ ನನಗೆ ಬೇಡ—ಎಂದಾನು.

**ತತ್ತಿಯಂತೆ**

ನಮ್ಮ ಪಾಲಿಗೆ ನಮ್ಮ ಭೂಮಿ ಬಲು ದೊಡ್ಡದು. ಕೋಳಿಮರಿಯ ಪಾಲಿಗೆ ಅದು ಮೊಟ್ಟೆಯೊಡೆಯುವ ಮೊದಲು ಮೊಟ್ಟೆಯೇ ಬಲು ದೊಡ್ಡದೆನಿಸಬಹುದು. ವಿಶ್ವದಲ್ಲಿ ಈ ಭೂಮಿ ಧೂಳಿನಕಣ. ಅಸಂಖ್ಯ ಗ್ರಹಗಳು, ತಾರೆಗಳು, ಸೂರ್ಯರು ಇರುವ ವಿಶ್ವದಲ್ಲಿ—ಜೀವಿಗಳೆಂಬುವೂ ಮಾನವರೆಂಬುವರೂ ಭೂಮಿಯಲ್ಲಿ ಮಾತ್ರ ಇದ್ದಾರೆನ್ನಲೇ ? ಅವರ ತಿಳಿವೇ ಪರಮಾವಧಿಯೆನ್ನಲೇ ? ಭೂಮಿಯೇ—ವಿಶ್ವದ ಕೇಂದ್ರವೆಂದು ಮಾನವನ ಜ್ಞಾನ ನಿರ್ಣಯಿಸಿದ್ದ ಕಾಲದಲ್ಲಿ, ಆ ಮಾತಿಗೆ ಬೆಲೆಯಿದ್ದಿರ ಬಹುದು. ಈಗ ಬರಲಾರದು.

ನಮ್ಮ ವಿಶ್ವದೊಳಗಿನ ಒಂದು ಲೋಕ ಇನ್ನೊಂದಕ್ಕೆ ಹೊಡೆದು ಎಂದೂ ಧೂಳಾಗಬಹುದು. ಅದರಿಂದಲೇ ಭೂಮಿಗಳು, ಲೋಕಗಳು ಹುಟ್ಟುತ್ತವೆ, ನಾಶ ವಾಗುತ್ತಿವೆಯಂತೆ. ಹಾಗೆ ನಮ್ಮ ಭೂಮಿಯೂ ಧ್ವಂಸವಾಗುವುದು ದೊಡ್ಡದೇ ? ಆಗ ಇಲ್ಲಿನ ಜೀವಗಳೆಲ್ಲ ನಾಶವಾಗಬಹುದು. ಅದರಿಂದ—ವಿಶ್ವದ ಗುರಿಯು, ಇಂಥ ಭೂಮಿಗಳು ನಷ್ಟವಾದರೂ ಕೆಡದಷ್ಟು ಮುನ್ನೋಟದ್ದೊ, ನಮ್ಮ ಅಳವಿಗೆ ದೊರಕದ್ದೊ ಇರಬೇಕು–ಎಂದು ಊಹಿಸಬೇಡವೇ.

### ತನ್ನ ಆದರ್ಶ ವಿಶ್ವದ್ದೇ?

ಮನುಷ್ಯ ತನ್ನ ಬದುಕಿನ ಸ್ಥಾನವನ್ನು ತಿಳಿದರೆ ಸಾಲದೇ. ಅದನ್ನು ಬಾಳಲು ಬಯಸಿದರೆ ಸಾಲದೇ. ಇತರ ಜೀವಿಗಳಿಗಿಂತ ತನ್ನನ್ನು ಪ್ರಧಾನವಾಗಿರಿಸಿಕೊಳ್ಳುವುದು ; ತನ್ನ ಜನವನ್ನು ಇತರರ ಮೇಲಿರಿಸುವುದು ; ತನ್ನ ಪ್ರಪಂಚವನ್ನು ವಿಶ್ವಕ್ಕೆ ಆದರ್ಶವಾಗಿ ಹಿಡಿಯುವುದು—ಇವು ಯಾವುವೂ ಸತ್ಯ ಹುಡುಕುವ ವ್ಯಕ್ತಿಗೆ ಹಿತವಾದ ದಾರಿಗಳಲ್ಲ. ಅವನ ಬೆಳವಣಿಗೆಗೆ ತಡೆಯೊಡ್ಡುವ ಹಾದಿಗಳು. ಮನುಷ್ಯ ತನ್ನ ಜನಾಂಗವನ್ನು ಇತರರಂತೆ ತಿಳಿಯಲಿ ; ತನ್ನನ್ನು ಇತರ ಜೀವಿಗಳ ಸಾಲಿನಲ್ಲಿರಿಸಿ ಕೊಳ್ಳಲಿ. ಇತರ ಜೀವಕೋಟಿಗಳು ತಮ್ಮ ಗೊತ್ತನ್ನು ಸಾಧಿಸುತ್ತಿರುವುವೋ ಇಲ್ಲವೋ —ಎಂದು ಇವನು ಹೇಗೆ ತೀರ್ಮಾನಿಸಬಲ್ಲನು ? ಉಳಿದೆಲ್ಲ ಜೀವಿಗಳ ಬದುಕಿನ ಬಗೆ ಯನ್ನು ಎಷ್ಟು ಹೆಚ್ಚಾಗಿ ನಾವು ತಿಳಿಯುವೆವೋ, ಅಷ್ಟು ಹೆಚ್ಚಾಗಿ ನಮ್ಮ ಜೀವನದ ಹಿತವನ್ನೂ, ಮಿತಿಯನ್ನೂ ತಿಳಿಯಲು ಸಹಾಯವಾದೀತು.

### ಅರಿವಿಲ್ಲದವರ ಶಕ್ತಿ

ವಿಶ್ವದ ವ್ಯಾಪಾರಗಳಲ್ಲಿ, ನಮಗೆ ಪರಿಚಿತವಾದ ಬದುಕಿನಲ್ಲಿ–ಸ್ವಂತ ಅರಿ ವೆಂಬುದು ಬೆಳೆದು ಬಂದಿರುವ ಜೀವಿಗಳೂ ಇವೆ ; ಅವು ಕಡಿಮೆಯಾಗಿರುವುವೂ ಇವೆ. ನಮಗೆ ತಿಳಿದಂತೆ ಅರಿವಿಲ್ಲದಂತಹ ನಿಸರ್ಗ ಶಕ್ತಿಗಳೂ ಇವೆ. ಅವು ಅವುಗಳು ಏನೇನೋ ಕೆಲಸ ಮಾಡುತ್ತಿವೆ. ಅರಿವುಳ್ಳವರ ಕೆಲಸವನ್ನೇ ನಿರ್ನಾಮ ಮಾಡುವ ಬಲ, ಅರಿವಿಲ್ಲದ ಈ ಶಕ್ತಿಗಳಿಗಿದೆ. ಅವನ್ನು ತಡೆಯುವ, ಕುಗ್ಗಿಸುವ ಶಕ್ತಿಗಳು ನಮಗಿಲ್ಲ ; ಅವುಗಳ ರೀತಿಯ ಅರಿವಿಲ್ಲ. ಇವುಗಳಲ್ಲಿ ಯಾವುದಕ್ಕೆ ಅರ್ಥವಿದೆ ? ಯಾವುದಕ್ಕೆ ಇಲ್ಲ ? ಇವೆಲ್ಲ ಒಂದರೊಡನೊಂದು ಬೆರೆತು ಇರುವುದೂ ಕಾಣುತ್ತದೆ. ನಮಗೆ ಅರ್ಥವಾಗುವ ಬದುಕಿನ ಅಂಶವನ್ನು ಮಾಯೆ ಎನ್ನುವುದರಿಂದ ನಮಗೆ ಜ್ಞಾನ ದೊರಕೀತೇ ?

ತಮ್ಮ ಬದುಕನ್ನು ಅಳೆಯುವವರು, ಉಳಿದ ಜೀವಿಗಳಿಗೆ ಸಮಾನವಾದ ಹಕ್ಕನ್ನು ಇರಿಸಿಕೊಂಡು ಜೀವನವನ್ನು ಅಳೆಯಲಿ. ನಮ್ಮ ಹೆಚ್ಚಿನ ತಿಳಿವು, ಈ ಬಗೆಯ ನೋಟಕ್ಕೆ ಸಹಾಯವಾಗಬೇಕು. ನಮ್ಮ ಮೇಲ್ಮೆಯ ಸ್ಥಾಪನೆಗಲ್ಲ.

ಬಳಿಕ ವ್ಯಕ್ತಿಯು ಮಾಡಬೇಕಾದ ಬೇರೊಂದು ಕೆಲಸವಿದೆ. ಅವನಿಗೆ ಬಾಳಿನ ಅರ್ಥವಾಗಬೇಕು, ಅದರಲ್ಲಿ ತಾನು ತನ್ನ ಶಕ್ತಿಗೆ ಸಮನಾಗಿ ವ್ಯವಹರಿಸಬೇಕು. ಅದ ರಿಂದಾಗುವ ಲಾಭವನ್ನು ಹೊಂದಬೇಕು—ಎಂದು ತಿಳಿಯುವಲ್ಲಿ, ತನಗೂ ಸುತ್ತಲಿನ

ಜೀವನ ಪ್ರವಾಹಕ್ಕೂ, ತನ್ನ ಹಿಂದೆ ಆಗಿ ಹೋದ ಪ್ರಪಂಚಕ್ಕೂ ಯಾವ ಸಂಬಂಧವಿದೆ—ಎಂದು ಪರಿಶೀಲಿಸಬೇಕು. ತಾನು ಬೇರೆಯೋ, ಅವುಗಳು ಬೇರೆಯೋ ಶರೀರ ಪಡೆದು ವ್ಯವಹರಿಸುತ್ತಿರುವುದಾದರೂ, ತನ್ನ ಎಷ್ಟು ಅಂಶ ಸ್ವತಂತ್ರವಾಗಿ ವ್ಯವಹರಿಸಬಲ್ಲುದು ? ತನ್ನ ಅರಿವಿನ ಎಷ್ಟು ಭಾಗ—ಇತರ ಜೀವಿಗಳೊಡನೆ ಹೊಂದಿಕೊಂಡಿದೆ-ಎಂಬುದನ್ನು ತಿಳಿಯಬೇಕು.

ಅದನ್ನು ಚೆನ್ನಾಗಿ ವಿಚಾರಿಸಿದಲ್ಲಿ ಈ ವ್ಯಕ್ತಿ 'ಆತ್ಮ', ವ್ಯಕ್ತಿ 'ಕರ್ಮ', ವ್ಯಕ್ತಿ 'ಪುಣ್ಯ', ವ್ಯಕ್ತಿ 'ಮೋಕ್ಷ'ಗಳೆಂಬ ಭ್ರಮೆ ದೂರಾಗಬಹುದು. ಜೀವನ ಪ್ರವಾಹದೊಡನೆ ನಮ್ಮ ಸಂಬಂಧವು ತೀರ, ತೀರ ನಿಕಟವಾದುದೆಂದು ನಮಗೆ ಆಗ ತೋರಬಹುದು.

# ೭ ವೈಯಕ್ತಿಕ ಆತ್ಮ; ವೈಯಕ್ತಿಕ ಕರ್ಮ

**ವ್ಯಕ್ತಿ ಆತ್ಮ ಬೇರೆಯಿಲ್ಲ**

ವ್ಯಕ್ತಿಯು ತಾನು ಬೇರೆಯೇ ಎಂದು ತಿಳಿದು, ಆ ಭಾವನೆಯನ್ನು ಬೆಳೆಯಿಸಿ ಕೊಂಡು ಬಂದಿದ್ದಾನೆ. ಇದರಿಂದ 'ತಾನು' ಸಾಯಲು ಭೀತಿಗೊಳ್ಳುತ್ತಾನೆ. ತನಗೆ ಬೇರೆಯೇ ಹುಟ್ಟಿದೆ, ಸಾವಿದೆ; ತನ್ನ ಕರ್ಮಗಳ ಫಲವಾಗಿ ಅವು ಪ್ರಾಪ್ತವಾಗಿವೆ ಯೆಂದೂ ತಿಳಿದುಕೊಂಡಿದ್ದಾನೆ. ಈ ಕರ್ಮಫಲದ ಕಲ್ಪನೆಯಿಂದ ವ್ಯಕ್ತಿಯ ನಡತೆಯ ಮೇಲೆ ಪರಿಣಾಮವಿದೆ. ಅವನು ಕೆಟ್ಟ ಜನ್ಮಕ್ಕಾಗಿ ಅಂಜಿ—ತನ್ನ ದುಷ್ಟ ನಡತೆಯನ್ನು ತಿದ್ದಿಕೊಳ್ಳಬಹುದು. ಆದರೆ ಮೂಲದಲ್ಲಿ, ತಾನು ಸುತ್ತಲಿನ ಜೀವದಿಂದ ಬೇರೆಯೆಂದು ತಿಳಿಸುವ ಕಲ್ಪನೆಯೇ, ಅವನ ವ್ಯಕ್ತಿ ಸ್ವಾರ್ಥವನ್ನು ಬೆಳೆಯಿಸಲೂ ಕಾರಣವಾಯಿತು. ಮುಂದೆ ಅದೇ ಸ್ವಾರ್ಥಕ್ಕಾಗಿ ಅವನು ಪರರು ಮಾಡುವ ಕೇಡುಗಳನ್ನು ತಡೆಯಲು ಕರ್ಮಫಲದ ಭೀತಿಯನ್ನು ತೋರಿದರೇನು ? ಆ ಅಂಜಿಕೆಯಿಂದ ಮನುಷ್ಯನ ಕುಲ ಇನ್ನೂ ನಿರ್ಮಲವಾಗಿಲ್ಲ. ವ್ಯಕ್ತಿಗೆ ಬೇರೆಯೇ ಆತ್ಮ, ಬೇರೆಯೇ ಕರ್ಮಫಲಾನುಭವ ಗಳು ಇವೆಯೇ ಎಂಬ ಪ್ರಶ್ನೆಯನ್ನೂ ನಾವು ವಿಮರ್ಶಿಸಬೇಕು. ಅಲ್ಲಿಂದಲೇ ಉಗಮ ವಾದ ತಪ್ಪನ್ನು ಮುಂದೆ ತಿದ್ದಲು ಬರುವುದು ಕಷ್ಟ.

**ಜೀವ ಶಕ್ತಿ**

ಯಾವತ್ತು ಜೀವಿಗಳೂ ತಾವು ಹುಟ್ಟಿದಂದಿನಿಂದ ಸಾಯುವ ಗಳಿಗೆಯ ತನಕ ಬೇರೆಯೆನಿಸುವ ದೇಹ ತಾಳಿ ವರ್ತಿಸುವುದೆಂಬುದು ನಿಜ. ಅಲ್ಲಿ ವಿವಾದದ ಅಂಶವಿಲ್ಲ. ಆ ದೇಹದೊಳಗೊಂದು ಜೀವನೋ, ಜೀವಾತ್ಮನೋ—ಏನೋ ಎಂದು ಸ್ವಂತತ್ರವೆನಿ ಸುವ ಶಕ್ತಿಯು ನಲಿದಾಡುತ್ತದೆ. ಶರೀರದ ಮೂಲಕ ಅದು ವ್ಯವಹರಿಸುತ್ತದೆ— ಎಂಬುದು ನಿಜ. ಈ ಜೀವಶಕ್ತಿಯನ್ನು ಶರೀರದಿಂದ ಎಷ್ಟು ಮಟ್ಟಿಗೆ ಭಿನ್ನಪಡಿಸ ಬಹುದು ; ಶರೀರವು ಸಾವುಗೊಂಡ ಮೇಲೆ ಆ ಜೀವ ಶಕ್ತಿಯು ಸ್ವತಂತ್ರವಾಗಿ ಉಳಿಯಬಲ್ಲುದೇ ? ತಿರುಗಿ ಅದು ಇನ್ನೊಂದು ಶರೀರವನ್ನು ಸೇರಿ ವ್ಯವಹರಿಸುತ್ತ ದೆಯೇ—ಎಂಬೆಲ್ಲ ಪ್ರಶ್ನೆಗಳು 'ಬೇರೆ'ಯೇ ಆದ ಆತ್ಮದ ಕಲ್ಪನೆಯಲ್ಲಿ ಸೇರಿಕೊಂಡಿವೆ. ಈ ವಿಚಾರಕ್ಕೂ ಮೊದಲಾಗಿ—ನಮ್ಮ ಶರೀರದಲ್ಲಿ ನಲಿಯುವ ಜೀವಶಕ್ತಿ, ಅದನ್ನು ಜೀವಾತ್ಮ ಎನ್ನಿರಿ, ಅಥವಾ ಜೀವ ಎನ್ನಿರಿ, ಇನ್ನಾವುದೇ ಹೆಸರಿನಿಂದ ಕರೆಯಿರಿ, ಅದು ಸ್ವತಂತ್ರವಾದುದೇನು ? ತನ್ನೆಲ್ಲ ಕ್ರಿಯೆಗಳಿಗೂ, ಅಂದರೆ ತಾನಿರುವ ಶರೀರದ ಮೂಲಕ ವ್ಯಕ್ತವಾಗುತ್ತಿರುವ ಯಾವತ್ತು ಕೆಲಸಗಳಿಗೂ, ಅದೇ ಪೂರ್ಣ ಕಾರಣವೇ—ಎಂಬು ದನ್ನೂ ಪರ್ಯಾಲೋಚಿಸಬೇಕು. ಆಗ ನಮಗೆ—ಈ ವ್ಯಕ್ತಿ ಜೀವದ ವ್ಯವಹಾರವ

ಎಷ್ಟು ಸ್ವತಂತ್ರವಾಗಿ ಕಾಣಿಸುವುದೋ, ಅಷ್ಟೇ ಪರತಂತ್ರದ್ದೂ ಆಗಿ ಕಾಣಿಸಬಹುದು. ಹಾಗಾದಲ್ಲಿ—ಆತ್ಮ, ಕರ್ಮಫಲಗಳ ವಿಚಾರದಲ್ಲಿನ ನಮ್ಮ ನಂಬಿಕೆಗಳು ಬದಲಾಗಬೇಕಾಗುತ್ತದೆ.

**ಶರೀರ—ಅವಯವ**

ಈ ವಿಚಾರವನ್ನು ಸ್ಪಷ್ಟಗೊಳಿಸುವ. ನಮ್ಮ ಶರೀರಕ್ಕೆ ಕಿವಿ, ಮೂಗು, ಕಣ್ಣು, ಬಾಯಿಗಳಿವೆ. ಯಕೃತ್ತು, ಉದರ, ಕರುಳು, ಕಲಿಜಗಳಿವೆ. ಇವುಗಳ ಕೆಲಸಗಳೆಲ್ಲ ಬೇರೆ ಬೇರೆಯಾಗಿವೆ. ಕಣ್ಣು ಮಾಡುವ ಕೆಲಸ ಕಣ್ಣು ಮಾಡಬೇಕು. ಕಣ್ಣೀರು ಸುರಿಸುವ ಕೆಲಸವನ್ನು ಯಕೃತ್ತು ಮಾಡಲಾರದು. ಕಣ್ಣಿಂದ ಪಿತ್ಥರಸವು ಉದ್ರೇಕವಾಗಲಾರದು. ಅವಯವಗಳು ತಂತಮ್ಮ ಕೆಲಸಗಳ ಮಟ್ಟಿಗೆ ಸ್ವತಂತ್ರವಾಗಿ ಕಂಡರೂ, ಶರೀರದ ಒಟ್ಟು ಬಾಳಿನೊಡನೆ ಅವು ಬದ್ಧವಾಗಿವೆ. ಯಾವುದೇ ಒಂದು ನೋವುಗೊಂಡರೆ, ಜಡವಾದರೆ, ಉಳಿದವು ಅದರಿಂದ ತೊಡಕಿಗೆ ಗುರಿಯಾಗುತ್ತವೆ. ಹಾಗೇನೆ—ಮನುಷ್ಯನು ಸ್ವತಂತ್ರ ಜೀವಿಯಾಗಿ ವ್ಯವಹರಿಸುತ್ತಿರುವುದು ನಿಜವಾದರೂ, ನಾಳೆ ಅವನ ಶರೀರದಿಂದ ಕಳಚಿ ಬೇರೆಯೇ ಆಗಿ ನಿಲ್ಲಬಲ್ಲ ಆತ್ಮ ಅವನಿಗಿದೆ ಎಂಬುದಾಗಲಿ, ಅವನಲ್ಲಿರುವ ಜೀವಶಕ್ತಿ ಸಂಪೂರ್ಣ ಕ್ರಿಯಾ ಸ್ವಾತಂತ್ರ್ಯವುಳ್ಳುದೆಂದಾಗಲಿ ತೀರ್ಮಾನವಾಗಬೇಕಿಲ್ಲ.

**ವ್ಯಕ್ತಿ ಸ್ವಾತಂತ್ರ್ಯ**

ಯಾವುದೇ ಒಂದು ಜೀವಿಯ ಜೀವನ ವ್ಯವಹಾರವನ್ನು ಪರಿಶೀಲಿಸಿದಲ್ಲಿ, ಜೀವಿಯ ವೈಯುಕ್ತಿಕ ನಡತೆಯೆಂದು ಕಾಣಿಸುವುದರಲ್ಲಿ—ಮೂರು ಬೇರೆ ಬೇರೆಯಾದ ಶಕ್ತಿಗಳು ಕೆಲಸ ಮಾಡುವುದು ಕಾಣುತ್ತದೆ. ಮನುಷ್ಯನಾದರೂ ಈ ನಿಯಮಕ್ಕೆ ಅಪವಾದವಾಗಿ ಉಳಿದಿಲ್ಲ. ಒಂದು ಬೆಕ್ಕಿನ ಜೀವನವನ್ನು ಪರಿಶೀಲಿಸುವ. ಅದು ಮರಿಯಿದ್ದಾಗ ತಾಯ ಹಾಲನ್ನು ಕುಡಿಯುತ್ತದೆ. ಮುಂದೆ ಇಲಿಯನ್ನು ಬೇಟೆಯಾಡುತ್ತದೆ. ಬೇಟೆ ಇದಿರಿಸುತ್ತದೆ, ತನ್ನ ಶರೀರ ನೈರ್ಮಲ್ಯವನ್ನು ಕಾಪಾಡುತ್ತದೆ, ಸಂತಾನವನ್ನು ಬೆಳೆಯಿಸಿಕೊಂಡು ಬರುತ್ತದೆ—ಇವುಗಳಲ್ಲಿ ವ್ಯಕ್ತಿ ಸ್ವಾತಂತ್ರ್ಯ ಎಷ್ಟಿದೆ ? ಬಾತುಕೋಳಿ ಹುಟ್ಟಿದೊಡನೆ ನೀರಲ್ಲಿ ಈಜುತ್ತದೆ—ಇದರಲ್ಲಿ ಅದರದೇ ಆದ ಕ್ರಿಯೆಯೆಷ್ಟು ? ಇವೆಲ್ಲ ಯುಗಯುಗಗಳ ಪರಿಣಾಮದಿಂದ, ಒಂದು ಜೀವಿಯಲ್ಲಿ ಸ್ವಭಾವವಾಗಿ ಹರಿದುಬಂದ ಶಕ್ತಿಗಳು. ವ್ಯಕ್ತಿಯ ಕಾರ್ಯವನ್ನು ರೂಪುಗೊಳಿಸುವುದರಲ್ಲಿ ಈ ಸಂತಾನಬದ್ಧವಾಗಿ ಬಂದ ಸ್ವಭಾವಗಳು. ಶಕ್ತಿಗಳು ಸಾಕಷ್ಟು ಬಲವಾದ ಪ್ರಭಾವವನ್ನು ಬೀರುತ್ತವೆ. ಅವುಗಳಷ್ಟರ ಮಟ್ಟಿಗೆ, ವ್ಯಕ್ತಿಜೀವ ಪರಾಧೀನವಾಗಿದ್ದಂತೆಯೇ ಸರಿ. ವ್ಯಕ್ತಿಜೀವನದ ಇಂದಿನ ನಡವಳಿಕೆಯಲ್ಲಿ ಹಿಂದಿನ ಯುಗವೇ ಸೇರಿಕೊಂಡಂತಾಯಿತು. ತಿರುಗಿ—ಒಂದೇ ಪ್ರಾಣಿ ವರ್ಗದ ಜೀವನ ಚರಿತ್ರೆಯನ್ನು ಪರಿಶೀಲಿಸಿದರೂ—ಎಲ್ಲವೂ ಒಂದೇ ತೆರನಾಗಿರುವುದಿಲ್ಲ. ಒಂದೇ ಬೆಕ್ಕಿನ ಮರಿಗಳಲ್ಲಿ ಒಂದೇ ಬಗೆಯ ಶರೀರ ಶಕ್ತಿ, ನರಗಳ ಶಕ್ತಿ ಕಾಣಿಸುವುದಿಲ್ಲ. ಮನುಷ್ಯರಲ್ಲೂ ಹಾಗೇನೆ. ಒಂದೇ ತಾಯಿ ಮಕ್ಕಳಲ್ಲಿ—ಒಬ್ಬ ದಡ್ಡ, ಒಬ್ಬ ಚತುರ, ಒಬ್ಬ ಸೂಕ್ಷ್ಮದೃಷ್ಟಿ, ಒಬ್ಬ ಸ್ಥೂಲದೃಷ್ಟಿ—ಇಂಥ ಗುಣಗಳು

ಹುಟ್ಟುವಾಗಲೇ ಕಾಣಿಸುತ್ತವೆ. ಇವಕ್ಕೆ ಪೀಳಿಗೆಯ ಹಿರಿಯರು ಕಾರಣ ಎಂದು ತಿಳಿಯಬೇಕು. ಈ ಅನುವಂಶಿಕವಾದ ಗುಣಗಳಿಂದ, ತನ್ನ ಶರೀರ ರಕ್ಷಣೆ, ಸಂತಾನ ರಕ್ಷಣೆ, ಸಂತಾನದ ಪೋಷಣೆಯಂಥ ಮುಖ್ಯ ಚಟುವಟಿಕೆಗಳು ನಡೆಯುತ್ತವೆ. ಇವುಗಳೆಲ್ಲ ಅನುವಂಶೀಯ ಸ್ವಭಾವಗಳು. ಅವುಗಳ ಜತೆಗೆ, ಹುಟ್ಟಿನಿಂದಲೂ ಶರೀರದ್ದೇ ಆದ ಶಕ್ತಿಯೊಂದು ಸೇರಿ ಕೆಲಸ ಮಾಡುತ್ತದೆ. ಹಿರಿಯರಲ್ಲಿ ಫರಂಗಿಯಂಥ ಕಾಯಿಲೆಯಿದ್ದರೆ, ಕ್ಷಯವಿದ್ದರೆ, ದಮ್ಮು ಇದ್ದರೆ, ಅದು ಮಕ್ಕಳಿಗೆ ಬರುವುದುಂಟು. ಇಂಥವು ಸ್ವಭಾವಗಳಲ್ಲವಾದರೂ, ಮಾನವರಲ್ಲಿ ಹಿರಿಯರ ಇಂಥ ದೋಷಗಳು ಮಕ್ಕಳಲ್ಲಿ ಮರುಕಳಿಸುವುದುಂಟು. ಇದರಿಂದ—ಸಾಮಾನ್ಯ 'ಕಾಮುಕ'ನಾಗಿರಬಹುದಾದ ವ್ಯಕ್ತಿ, ಹುಟ್ಟುವಾಗಲೇ ನರಗಳ ದೌರ್ಬಲ್ಯ ತಾಳಿ ಹುಟ್ಟಿದಲ್ಲಿ, ಮತ್ತಷ್ಟು ಕಾಮುಕನಾಗಿ ವ್ಯವಹರಿಸಬಹುದು. ಹೀಗಿದ್ದರೆ—ಅವನ ಸ್ವತಂತ್ರ ಹೊಣೆಯ ಅಳತೆಯೆಷ್ಟು, ಅನುವಂಶೀಯ ಹೊಣೆಯೆಷ್ಟು ?—ಎಂದು ಅಳೆಯಲು ಬಂದೀತೇ ?

**ವ್ಯಕ್ತಿತ್ವ**

ಶರೀರ ಹುಟ್ಟಿ ಬರುವ ತನಕ ಹೀಗಾಯಿತು. ಮುಂದೆಯಾದರೂ ಜೀವನು, ನಮಗೆ ಕಾಣಿಸುವಷ್ಟು ಸ್ವತಂತ್ರನೇನು ? ಸುತ್ತಮುತ್ತಲಿನ ಆವರಣದ ಪ್ರಭಾವ ಅವನ ನಡತೆಯಲ್ಲಿ ಕಾಣಿಸತೊಡಗುತ್ತದೆ. ಬೇಡರ ಕುಟುಂಬದಲ್ಲಿ ಹುಟ್ಟುವ ಮಗುವು, ನಿತ್ಯ ಬೇಟೆಗಳನ್ನು ನೋಡಿ ಬೆಳೆಯುವ ಮಗುವು—ಅದಾವುದರಲ್ಲಿ, ಪಶುಪಕ್ಷಿಗಳ ಸ್ವರಾನುಕರಣೆಯಲ್ಲಿ ಬಲು ಬೇಗ ಪಂಡಿತನಾಗುತ್ತಾನೆ. ಬೇಟೆಯನ್ನು ಕೊಲ್ಲುವುದರಲ್ಲಿ, ಅದಕ್ಕೆ ಹಿಂಸೆ, ಅನೀತಿಗಳು ಕಾಣಿಸುವುದೇ ಇಲ್ಲ. ಆದರೆ ಅವರಲ್ಲಿ ಹುಟ್ಟಿದೊಂದು ಮಗುವನ್ನು ಆಚಾರವಂತರ ಮನೆಯಲ್ಲಿ ಬೆಳೆಯಿಸಿಕೊಂಡು ಬಂದರೆ—ಅದು ಬೇರೆಯೇ ತೆರನ ಮನೋವೃತ್ತಿಗಳನ್ನು ಗಳಿಸುತ್ತದೆ. ವ್ಯಕ್ತಿ ತಾನು ಪದೇ ಪದೇ ಮಾಡುತ್ತಿರುವ ಕೆಲಸ, ತನ್ನ ಸುತ್ತಲಿನ ಆವರಣಗಳಿಂದ ಹೊಂದುವ ಪರಿಣಾಮ, ಇವೆಲ್ಲವುಗಳೂ ಅವನ ನಡತೆಯ ಅಂಶವಾಗಿಬಿಡುತ್ತವೆ. ಹೀಗೆ—ಅನುವಂಶೀಯತೆ, ಅಭ್ಯಾಸ, ಪರಂಪರೆ, ಆವರಣಗಳ ಪ್ರಭಾವವನ್ನು ಬಿಟ್ಟು, ಅವುಗಳಿಗೆ ಪ್ರಸಂಗ ಬಂದಾಗ ಇದಿರಾಗಿ ವರ್ತಿಸಬಲ್ಲ ಜೀವಶಕ್ತಿ, ಎಷ್ಟಿದೆಯೋ ಅಷ್ಟನ್ನು ಮಾತ್ರ ನಾವು 'ಸ್ವತಂತ್ರ' ಎನ್ನಬಹುದಾಗಿದೆ. ವ್ಯಕ್ತಿಯು ತನ್ನ ಅನುಭವಗಳಿಂದ ತಾನೇ ಬೆಳೆಯಿಸಿಕೊಂಡ ಭಾವನೆಗಳು, ಯೋಜನೆಗಳು, ಅಭ್ಯಾಸಗಳು, ಅನುವಂಶೀಯವಾದ ಇನ್ನಿತರ ಗುಣಗಳ ಮೇಲೆ ಕ್ರಿಯೆಯಾಗುತ್ತವೆ. ಆದರೆ ಬುಡದ ತಾಯಿ ಬೇರವೇ ಬಲವಾಗಿರುವಷ್ಟು ಕಾಲ, ಅವನ ಕ್ರಿಯೆಗಳು ಅದರಿಂದಲೇ ನಡೆಯಿಸಲ್ಪಡುತ್ತದೆ. ತನ್ನದೇ ಆದ ಗುಣಗಳು, ಅವನಲ್ಲಿ ಅನುವಂಶೀಯವಾಗಿ ಬಂದ ಗುಣಗಳೊಂದಿಗೆ ಕೆಲಸ ಮಾಡುವಾಗ, ಅವು ಇದ್ದರೂ ತಿಳಿಯುವುದಿಲ್ಲ. ಅವನ ವ್ಯಕ್ತಿತ್ವ—ಎಂಬುದು ತೋರ್ಪಡುವುದೇ, ವ್ಯಕ್ತಿ ಇತರರಂತೆ ವ್ಯವಹರಿಸದಾಗ, ಸಾಗುವ ಗುಂಪಿಗಿಂತ ಭಿನ್ನವಾಗಿ ನಡೆದಾಗ ಅವನ ಸ್ವಾತಂತ್ರ್ಯ ನಮಗೆ ಕಾಣಿಸುತ್ತದೆ. ಆತ ಪರಂಪರೆಯ ನಂಬಿಗೆಗೆ ವಿರುದ್ಧವಾಗಿ ಆಚರಿಸಿದಾಗ, ಹೊಸ

ಪ್ರಸಂಗಗಳು ಬಂದಾಗ, ಅವನ್ನು ಪರ್ಯಾಲೋಚಿಸಿ ತನ್ನ ಪರಂಪರೆಯ ನಡತೆಯನ್ನು ಬದಲಿಸಿದಾಗ, ತನ್ನ ಬುದ್ಧಿಬಲದಿಂದ ಹೊಸ ಕನಸುಗಳನ್ನು ಕಟ್ಟಲು ಕಾರಣವಾದಾಗ—ಅವನೊಬ್ಬ ಬೇರೆಯೇ ಜೀವನು ಎನಿಸುತ್ತಾನೆ. ಇಂತಹ ಪ್ರಭಾವಶಾಲಿಗಳ ವರ್ತನೆಯಿಂದ, ಅವರ ಸಮಾಜದ ವರ್ತನೆಯ ಮೇಲೆ ಪರಿಣಾಮವಾಗುತ್ತದೆ. ಆಗ ಅವನ ಮುಂದಿನ ಸಂತಾನದ ಜೀವನದಲ್ಲಿ, ಹೀಗೆ ಭಿನ್ನವಾಗಿ ವರ್ತಿಸಿದ ಪ್ರಭಾವಶಾಲಿಗಳಾದ ವ್ಯಕ್ತಿಯ ಗುಣಗಳೂ ಸೇರಿಕೊಳ್ಳಬಹುದು.

### ಜೀವನ ಪ್ರವಾಹದೊಡನೆ ಬೆರೆತು

ಈ ಪರಿಶೀಲನೆಯಲ್ಲಿ ನಮಗೆ ಸ್ಪಷ್ಟವಾಗುವ ಅಂಶವೇನೆಂದರೆ—ವ್ಯಕ್ತಿ ಜೀವದ ಬಹುಮಟ್ಟಿನ ಕೆಲಸಗಳು, ಗುಂಪಿನ ಈಗಿನ ಮತ್ತು ಹಿಂದಿನ ಕ್ರಿಯೆಗಳಿಂದ ಪರಿಣಾಮಗೊಂಡ ಸ್ವಭಾವ ಮತ್ತು ಶೀಲಗಳಿಂದ. ಇದರಲ್ಲಿ ವ್ಯಕ್ತಿಯ ಹೊಣೆಗಾರಿಕೆಯು ಅವನ ಬಳಗ, ಪರಂಪರೆ, ಆವರಣಗಳಿಗಿರುವಷ್ಟೇನೆ ಇದೆ. ಒಂದು ಪಾಲು ಮಾತ್ರ ಇವನದು; ಅದಕ್ಕೆ ಮಿಕ್ಕಿ ಇಲ್ಲ. ಹೀಗಿರಲು ವ್ಯಕ್ತಿಗತವಾದ ಆತ್ಮನ ಪಾಪ, ಕರ್ಮ, ಕರ್ಮಫಲ,—ಇವೆಲ್ಲ ಎಲ್ಲಿಂದ ಉದ್ಭವವಾಗಬೇಕು? ವ್ಯಕ್ತಿಗೇನೇ ತನ್ನ ಕರ್ಮದಲ್ಲಿ—ಅನುವಂಶೀಯ ಭಾಗವೆಷ್ಟು, ಆವರಣದ ಹೊಣೆಯೆಷ್ಟು, ವೈಯಕ್ತಿಕ ಹೊಣೆಯೆಷ್ಟು—ಎಂದು ತಿಳಿಯದಿರುವ ವೇಳೆ, ಕರ್ಮಫಲದ ಪರಿಣಾಮ ಹೇಗೆ? ವ್ಯಕ್ತಿಯು ಕೇವಲ ತನ್ನ ಕ್ರಿಯೆಗಳಿಗೆ ತಾನು ಜವಾಬುದಾರನೆಂಬಷ್ಟು ಪ್ರತ್ಯೇಕತನ ಅವನ ಜೀವನಕ್ಕಿರುವುದಿಲ್ಲ. ಅವನ ಪರಂಪರೆಯ ಸಾವಿರಾರು ಕ್ರಿಯೆಗಳೂ, ಅವನ ಆವರಣದ ಸಾವಿರಾರು ಕ್ರಿಯೆಗಳೂ, ಅವನ ಮೇಲೆ ಪರಿಣಾಮವನ್ನುಂಟು ಮಾಡುತ್ತವೆ. ಅವನ ಇಂದಿನ ಜೀವನ, ನಡತೆಗಳ ಪರ್ಯಾಸನ್ನ—ಇಂದಿನ ಸುತ್ತಲಿನ ಬದುಕಿನ ಮೇಲೂ, ನಾಳಿನ ಜೀವನದ ಮೇಲೂ ಪರಿಣಾಮ ಮಾಡುತ್ತವೆ. ನಿನ್ನಿನ ಒಳಿತು ಕೆಡಕುಗಳು, ಇಂದಿನ ಮೇಲೆ, ಇಂದಿನ ಒಳಿತು ಕೆಡುಕುಗಳು ನಾಳೆಯ ಮೇಲೆ—ಪರಿಣಮಿಸುವುವು. ಸಾಮೂಹಿಕವಾದ ಜೀವನ ಪ್ರವಾಹದ ಕರ್ಮಫಲವನ್ನು ಆ ಸಾಮೂಹಿಕವಾದ ಪ್ರವಾಹವು ಅನುಭವಿಸಬೇಕಲ್ಲದೆ, ಅದರಿಂದ ವ್ಯಕ್ತಿಯು ಕರ್ಮವನ್ನೂ, ಫಲವನ್ನೂ ಹಿರಿದು ಬೇರೆಯಾಗಿರಿಸಬಲ್ಲ, ಜೀವನದ ರೀತಿಯೊಂದು ಇಲ್ಲ. ಈ ಸಮಷ್ಟಿ ಜೀವನದಿಂದ ಒಂದು ವ್ಯಕ್ತಿ ತಾನೊಬ್ಬನೇ ಪಾರಾಗಿ ಉಳಿಯಬಲ್ಲನೆಂಬುದು ಅನುಮಾನದ ಮಾತು. ವ್ಯಕ್ತಿಯ ಶ್ರೇಯಸ್ಸು, ಸುಖ ದುಃಖಗಳು—ಜೀವನದ ಒಟ್ಟು ಮಾನವ ಸಮಾಜದ ಶ್ರೇಯಸ್ಸು ಸುಖದುಃಖಗಳನ್ನು ಹೊಂದಿಕೊಂಡಿವೆಯೆನ್ನಬೇಕು.

### ಕಳ್ಳತನ

ಯಾವನ ಒಂದೊಂದು ಕ್ರಿಯೆಗೂ—ಅದರ ಹಿನ್ನೆಲೆಯಲ್ಲಿ ನೂರಾರು ಮನಸ್ಸುಗಳ ಪ್ರೇರಣೆಯುಂಟೆಂದು ತಿಳಿದ ಹಾಗಾಯಿತು. ಇವುಗಳನ್ನು ಕೂಡಿಕೊಂಡು, ಕಡೆಗೆ [illegible] ವ್ಯಕ್ತವಾಗುವ ಮನಸ್ಸು ಕೆಲಸ ಮಾಡುತ್ತದೆ. ಬಹುವಾಗಿ ಇದು, ಸಾಮಾನ್ಯ ವ್ಯಕ್ತಿಯಲ್ಲಿ ಅನುವಂಶೀಯತೆಯು ಒಲಕ್ಕೆ ತನ್ನಂತೆ ನಡೆಯುವ ಭಾಗ. ಆವರಣದ

ಬಲೋದ್ಭಂಧಕ್ಕೆ ಬಲಿಯಾಗುವ ಭಾಗ. ಈಗ ನಾವು ಅಂಥದೊಂದು ಜೀವಿಯ ಕೆಲಸದ ನ್ಯಾಯಾನ್ಯಾಯಗಳನ್ನು ಪರಿಶೀಲಿಸುವ. ಒಬ್ಬಾತ ಕಳವು ಮಾಡುತ್ತಾನೆ. ಈ ಕೆಲಸವು ವ್ಯಕ್ತಿ ಕರ್ಮ ಸಿದ್ಧಾಂತವನ್ನು ಅನುಸರಿಸಿದರೆ 'ತಪ್ಪು' ಎನಿಸುತ್ತದೆ. ಈತ—ತುಡುಗರ ಕುಲದಲ್ಲಿ ಬೆಳೆದ ಹುಡುಗನಾದರೆ ಅವನಿಗೆ 'ಕಳವು' ತಪ್ಪು ಎಂದು ಸಹ ತೋರುವುದಿಲ್ಲ. ಆಗ ಕಳವು ಮಾಡಿ ಸಿಕ್ಕಿಬೀಳುವುದು ತಪ್ಪು ಎನಿಸೀತು. ಸಾಮಾನ್ಯ ವ್ಯಕ್ತಿಗೆ ಹಾಗೆ ಕಳವು ಮಾಡಲು ಮನಸ್ಸು ಬರಲಾರದು. ಯಾವುದೋ ಆಸೆ ಅವನಲ್ಲಿ ಅಧಿಕವಾಗಿ ಕಳುತ್ತಾನೆ; ಮುಂದೆ ಶಿಕ್ಷೆಯ ಭೀತಿಯಿಂದ ಕಳವನ್ನು ಅಲ್ಲಗಳೆಯುತ್ತಾನೆ. ಕದಿಯುವಾಗ ಅದು ಇಂಥವನ ವಸ್ತುವೆಂದು ತಿಳಿದಿದ್ದರೆ ಅವನಲ್ಲಿ ಅಳುಕುಂಟಾಗಬಹುದು. ಅದು ಯಾರೋ ಬಿಟ್ಟುಹೋದ ವಸ್ತುವಾದರೆ, ಊರಿನ ಮರದೊಂದು ಹಣ್ಣಾದರೆ, ಆ ಅಳುಕೂ ಅವನಿಗೆ ಆಗದಿರಬಹುದು. ವ್ಯಕ್ತಿ ನೆರೆಮನೆಯ ತೋಟದಿಂದ, ಒಂದು ಹೂವನ್ನು ಕದಿಯುತ್ತಾನೆಂದು ತಿಳಿಯಿರಿ. ಕದ್ದುದು ಹೂ; ದೇವರ ಪೂಜೆಗಾಗಿ ತೆಗೆದದ್ದು. ಅಂಥ ವೇಳೆಗೆ ಅದು ಕಳವೆಂದೂ ಅನಿಸದು. ಅವನ ಕಳ್ಳತನವನ್ನು ನಿರೋಧಿಸುವ ನೆರೆಮನೆಯ ಬಯ್ಗಳು, ಆತನಿಗೆ ನಾಸ್ತಿಕವಾದದ ಚಿಹ್ನೆಯಾಗಿ ಕಾಣಿಸಲೂ ಬಹುದು. ಇಲ್ಲಿ ಯಾವುದು ಕೆಡುಕುತನ?

ನಾಳೆ ದಿನ—ಹೂ ಕೊಯ್ದವನೇ, ಹಣ್ಣನ್ನು, ಅದರ ಮರುದಿನ ಒಂದು ಜುಂಬನ್ನೂ ಕದಿಯಬಹುದು. ದೇವರಿಗಾಗಿ ಆ ಬಾಡಿಗೆಯನ್ನು ಕದ್ದಲ್ಲಿ?

**ಹಂಚಿದ ಹೊಣೆ**

ಇದರ ಇನ್ನೊಂದು ಚಿತ್ರವನ್ನು ಯೋಚಿಸುವ; ಕಳ್ಳತನ 'ಅಸಾಧು' ಎಂದೇ ಒಪ್ಪುವ. ಅಷ್ಟರಿಂದಲೂ ಅದರ ಹೊಣೆಗಾರಿಕೆ ಯಾರದ್ದೆಂದು ನಿಶ್ಚಯವಾಗುವುದಿಲ್ಲ. ಒಬ್ಬ ತೀರ ಬಡವನಾಗಿರುತ್ತಾನೆ. ಅವನ ಮನೆಯಲ್ಲಿ ಒಲೆ ಹೊತ್ತಿಸಲು ಕಟ್ಟಿಗೆಯಿಲ್ಲ; ಬೇಯಿಸಲು ಕಾಳಿಲ್ಲ; ಉಡಲು ಅರಿವೆಯಿಲ್ಲ. ನ್ಯಾಯವಾಗಿ ದುಡಿಯಲು ಯತ್ನಿಸಿದ್ದಾಯಿತು. ಎಷ್ಟು ದುಡಿದರೂ ಸಾಕಾಗದು. ಕುಟುಂಬ ಹೊರೆಯಲು ಕಷ್ಟವೆನಿಸಿದೆ. ಹೀಗಾಗಿ—ಒಂದು ದಿನ ತನ್ನವರ ಸಂಕಟ ತಾಳಲಾರದೆ, ತಾನು ಮಾಡುವುದು ಸಮವಲ್ಲವೆಂದು ತಿಳಿದರೂ, ನೆರೆಯವರ ಮನೆಯಿಂದ ಕದಿಯುತ್ತಾನೆ. ಅವನಿಗೆ ಸಮಾಜದ ನ್ಯಾಯಕ್ಷೇತ್ರವು ಶಿಕ್ಷೆಯನ್ನು ವಿಧಿಸಬಹುದು. ಆದರೆ ಅವನ ಕ್ರಿಯೆಗೆ ಅವನೇ ಎಷ್ಟು ಕಾರಣನು? ಅವನ ಕಳವಿನ ಹಿಂದೆ "ಹಸಿವು" ಕೆಲಸ ಮಾಡಿದೆ. "ಹಸಿವು" ಅನ್ಯಾಯವೆಂದೂ ಯಾರೂ ಹೇಳುವಂತಿಲ್ಲ. ಅದು ಸ್ವಾಭಾವಿಕ ಗುಣ. ಅದು ಬಲವಂತದಿಂದ ತನ್ನ ಕೋರಿಕೆಯನ್ನು ಸಾಧಿಸುತ್ತದೆ. ತನ್ನವರಿಗಾಗಿ ಮರುಕ—ಇದೂ ಅಪರಾಧವಲ್ಲ. ಅನುಕರಣೀಯ ಗುಣ. ಅದೂ ಈ ಕಳವಿಗೆ ನೆರವಾಯಿತು. ಇವುಗಳ ಸೇರಿಕೆಯಿಂದ ಅಪರಾಧ ನಡೆಯಿತು. ಈ ವ್ಯಕ್ತಿಯು 'ಅಪರಾಧಿ'ಯೆಂದು ನಿರ್ಧರಿಸುವ ಮುನ್ನ, ಈ ಕೆಲಸಕ್ಕೆ—ಸಹಾಯಕರಾದ ಹೊಣೆಗಾರರನ್ನು ನಾವು ಹುಡುಕಬೇಡವೇ?

ಮೊದಲಿಗೆ—ಸಮಾಜದ ಸಂಪತ್ತಿನ ಅಂತರಕ್ಕೆ ಕಾರಣವಾದ ಯಾವತ್ತೂ ನಡತೆ

ಗಳ ಪರಂಪರೆಯೂ, ಇನ್ನೊಬ್ಬನು 'ಇಲ್ಲ'ವೆಂದು ಒದರುತ್ತಿದ್ದರೂ, ಇದ್ದುದನ್ನು ಬಗರಿ ಕೊಡಿಡಬಹುದೆಂಬ ಶೀಲವನ್ನು ಬೆಳೆಯಿಸಿ, ಕರ್ಮಫಲದ ನೆಪದಿಂದಲೋ, ರಾಜಕೀಯ ಶಾಸನಗಳಿಂದಲೋ, ಕಟ್ಟಳೆಯಿಂದಲೋ ಕಾಯ್ದುಬಂದ ಪರಂಪರೆಯೂ, ಕಳವಿನ ಪರಿಸ್ಥಿತಿಯನ್ನೂ, ಆತ ಹಸಿಯಬೇಕಾದ ಪ್ರಸಂಗವನ್ನೂ ಕಲ್ಪಿಸಿದ ಅವನ ಸಮಾಜವೂ ಅಪರಾಧಿಗಳಲ್ಲವೇ ? ಕಳವಿಗೆ ಆರು ತಿಂಗಳ ಸಜೆಯಾದರೆ ಸಮಾಜದ ಪಾಲು ಅದರಲ್ಲೆಷ್ಟು—ಎಂದು ಹೇಳಬಲ್ಲಿರಾ ? ಸಮಾಜವು ಈ ಧನಿಕ ಬಡವರಲ್ಲಿನ ಅಂತರವನ್ನು ಪರಿಹರಿಸಲು ಏನು ಕೆಲಸ ಮಾಡಿದೆ ?

ಈಗ ಅವನ ಕಳ್ಳತನಕ್ಕೆ ಧೈರ್ಯವಿತ್ತವರಾರೆಂದು ವಿಚಾರಿಸುವ ? ಹತ್ತು ಜನರ ಬದುಕಿನಿಂದ ಒಂದನ್ನು ತೆಗೆದರೆ ತಪ್ಪಿಲ್ಲವೆಂದು ತೋರಿಸಿದವರು, ಹೆರರ ಮನೆಯ ಹೂದೋಟದಿಂದ ಹೂ ತೆಗೆದವರು, ಊರಿನ ಬಯಲಿನಲ್ಲಿ ತಾವೇನೂ ಮಾಡಬಹುದೆಂಬ ಸ್ವಾತಂತ್ರ್ಯ ತೋರಿದ ಜನರು—ಅಂಥ ಹಲವರು ಅವನ ಗುರುಗಳಲ್ಲವೆ ? ಇವರೆಲ್ಲರು ಸೇರಿ—ವ್ಯಕ್ತಿಗೆ ಆ ಪ್ರೇರಣೆ ಕೊಡುತ್ತಾರೆ—ಕದಿಯಲು ಪ್ರೇರಣೆ. ಅದು ಮನಸ್ಸಿನಲ್ಲಿ ಬೆಳೆದುಬರುತ್ತದೆ. ಇಲ್ಲಿ ಕೊನೆಯಲ್ಲಿ ಕಳವಿಗೆ ನಿಮಿತ್ತನಾದವನು ಮಾತ್ರ ಕಾರಣನೇ ? ಅರಿತಾಗಲಿ, ಅರಿಯದೆಯಾಗಲಿ ಅವನಿಗೆ ಉದ್ಯೋಗ ಕೊಡದವರು, ಅನ್ನ ನಿರಾಕರಿಸಿದವರು, ಅವನಿಗಿಂತ ಹೆಚ್ಚಿನ ಸುಖದಲ್ಲಿ ತೇಲುವವರು—ಎಲ್ಲರೂ ಅಪರಾಧಿಗಳಲ್ಲವೇ ? ಇಂಥ ಸಾಮಾಜಿಕ ರೂಢಿಗಳಿರುವಲ್ಲಿ, ಅದರ ಕರ್ಮದ ಮರಿಗಾಗಿ ಕಳವು ಉಂಟಾಗುತ್ತದೆಯೇ ವಿನಾ, ಒಬ್ಬನಿಂದಲೇ ಅಲ್ಲ. 'ಕಳ್ಳ'ತನವನ್ನು ಶಿಕ್ಷೆಯಿಂದ ದಂಡಿಸಿದರೂ, ಆ ಚಾಳಿ ಅಡಗದೆ ಇಂದಿನ ತನಕ ಉಳಿಯಲು ಏನು ಕಾರಣ ? ಸಮಾಜವೇ ಅದಕ್ಕೆ ಕಾರಣ. ಅದು ತನ್ನ ತಪ್ಪನ್ನು ತಾನು ತಿದ್ದದೆ, ಅನುವಂಶೀಯವಾಗಿ ಇಂಥ ಕೊರತೆಗಳನ್ನು ಕಾಯ್ದುಬಂದಿದೆ. ವ್ಯಕ್ತಿ—ಆತ್ಮದ ಅರಿವು ಎಷ್ಟೆಷ್ಟು ಹಿಂದಾಗಿ, ಸಾಮಾಜಿಕ ಆತ್ಮದ ಕಲ್ಪನೆ ಎಷ್ಟೆಷ್ಟು ಮುಂದೆ ಬರುತ್ತದೋ ಅಷ್ಟಷ್ಟು ಹಿತ ನಮ್ಮ ಜೀವನಕ್ಕಿದೆ. ಆಗ ಮಾತ್ರ—ನಮ್ಮಲ್ಲಿ ಉಂಟಾಗುತ್ತಿರುವ ಅನೇಕ ನೋವು, ನರಳುವಿಕೆಗಳ ಅರ್ಥ ನಮಗೆ ತಿಳಿದೀತು. ಬಡವನಾದವನು ಕರ್ಮದಿಂದ ಹಾಗಾದನು, ಮಗುವು ಹುಟ್ಟಿದಾಗಲೇ ಶ್ರೀಮಂತರ ಮನೆಯಲ್ಲಿ ಹುಟ್ಟಿದರೆ, ಅದು ಪುಣ್ಯ ಮಾಡಿದ ಜೀವ, ಎಂದು ತಿಳಿಯುವ ಮನೋಭಾವ ತಪ್ಪೀತು.

**ಕೊರತೆಗಳ ಬುಡ**

ಇಂದು ನಮ್ಮ ಸಮಾಜಗಳಲ್ಲಿ ತುಂಬಿಕೊಂಡ ಅನೇಕಾನೇಕ ಕೆಡಕು—ಒಳಿತುಗಳ ಬುಡವನ್ನು ನಾವು ಪರಿಶೀಲಿಸಬೇಕು. ಇವು ಒಬ್ಬೊಬ್ಬನ ಪಾಲಿಗೇನೆ ಹಂಚಿ ಹೋಗಬಲ್ಲ ಕ್ರಿಯೆಗಳಾಗಿ ಕಾಣಿಸುವುದಿಲ್ಲ. ಜನರಲ್ಲಿ ಕಂಡುಬರುವ ಅನೇಕ ರೀತಿಯ ತಾರತಮ್ಯಗಳಾದರೂ ಹಾಗೇನೆ. ಬಡತನ–ಸಿರಿವಂತಿಕೆಗಳಿಂದ ಉಂಟಾಗುತ್ತಿರುವ ಬವಣೆಗಳು, ಪ್ರೇಮ ಕಾಮಗಳಿಂದ ಸಮಾಜವನ್ನು ಕಾಡುವ ಕ್ಲೇಶ, ಈರ್ಷೆ ; ಒಗ್ಗುಗಳು ; ಬೇನೆ, ರೋಗ, ರುಜೆ, ಆ ಜನ್ಮರೋಗ—ಮೊದಲಾದ ಯಾವುದೇ ಅಂಶವನ್ನು ಇಣಕಿ

ನೋಡಿದರೂ, ನಮಗೆ–ಮನುಷ್ಯ ಕುಟುಂಬದ ಒಟ್ಟು ಹೊಣೆಗಾರಿಕೆಯೇ ಕಾಣಿಸಬೇಕು. ಒಂದು ಜನಾಂಗವು ಇನ್ನೊಂದನ್ನು ನೋಡುವ ದೃಷ್ಟಿ, ಒಂದು ಗುಂಪು ಇನ್ನೊಂದನ್ನು ನೋಡುವ ದೃಷ್ಟಿ, ವ್ಯಕ್ತಿಯು ಸಮಾಜವನ್ನು ನೋಡುವ ದೃಷ್ಟಿ, ಇವಕ್ಕೆಲ್ಲ ಕಾರಣ ವಾಗಿವೆ. ನೀತಿ ಅನೀತಿಗಳು, ಪಾಪ ಪುಣ್ಯಗಳು, ರೋಗ ರುಜೆಗಳು—ಈ ಎಲ್ಲ ಸಾಮೂಹಿಕ ಕ್ರಿಯೆಗಳೂ, ನಂಬಿಕೆ, ಆಚರಣೆ, ಜ್ಞಾನ, ಅಜ್ಞಾನ–ಇವುಗಳ ಫಲಶ್ರುತಿ ಗಳು. ಅವುಗಳ ಒಟ್ಟು ಫಲವೇ ಇಂದಿನ ಸಮಾಜದಲ್ಲಿ ಕಾಣಿಸುವ ಸುಖದುಃಖ, ಏರು ತಗ್ಗುಗಳಿಗೆ ಕಾರಣ. ವ್ಯಕ್ತಿಗಳ ಕೈವಾಡ ಇದರಲ್ಲಿ ಇಲ್ಲವೇ ಇಲ್ಲ–ಎನ್ನಲಾರೆವು. ಆದರೆ ಒಬ್ಬೊಬ್ಬ ವ್ಯಕ್ತಿಯ ನಡತೆಯೂ ಅವನ ಗುಂಪಿನ ಪ್ರಭಾವಕ್ಕೆ ಅಧೀನವಾದುದು. ಆದುದರಿಂದ–ಮುಂದಿನ ಯುಗವು ಸುಖಕರವಾಗಬೇಕು, ಜಗತ್ತು ಪುಣ್ಯದ ಹಾದಿಯಲ್ಲಿ ಸರಿಯಬೇಕು–ಎನ್ನುವವರು, ಈ 'ವ್ಯಕ್ತಿ'ಯ ಮೇಲೆ ಅವನ 'ಮೂಲಕ' ಆಗುವ ಯಾವತ್ತು ಕರ್ಮದ ಹೊರೆಯನ್ನು ಹೊರಿಸಿ, ಅದರ ಚಿಕಿತ್ಸೆಯನ್ನು ಮಾಡ ಹೋದರೆ ಅದು ಸಾಧಿಸಲಾರದು. ಅವನು ಒಂಟಿಯಲ್ಲ. ಅವನ ನೀತಿಯನ್ನು ರೂಪಿಸುವ ಸುತ್ತ ಲಿನ ಆವರಣ, ಅದಕ್ಕೆ ಈಗಾಗಲೇ ದಿಕ್ಕುತೋರಿದ ಹಿಂದಿನ ಪರಂಪರೆ—ಇವುಗಳ ಕರ್ಮಗತಿಯನ್ನೂ ನಾವು ತಿದ್ದಬೇಕು. ಇಂದಿನ ಸಮಾಜವು ತನ್ನ ಒಟ್ಟಿನ ಹೊಣೆ ಯನ್ನು ತಿಳಿಯಲು ಪ್ರಯತ್ನಿಸಿ, ಮುಂದಿನ ಕ್ರಾಂತಿಯನ್ನು ಹುಟ್ಟಿಸಲು ಶಕ್ತವಾದರೆ, ನಾಳಿನ ಬಾಳು ಇಂದಿಗಿಂತ ಹಸನಾದೀತು.

ವ್ಯಕ್ತಿಯು ಎಂತಹ ಸದುದ್ದೇಶ ಪ್ರೇರಿತನಾಗಿದ್ದರೂ, ತಾನು ಬೇರೆ, ತನ್ನ ಆತ್ಮ ಬೇರೆ–ಎಂದು ಅರಿತು ವ್ಯವಹರಿಸುವಷ್ಟು ಕಾಲ, ಸ್ವಾರ್ಥದ ಬಲೆಗೆ ಬೀಳುತ್ತಾನೆ. ಉಳಿದವರ ಕಡೆಗೆ ತನಗಿರುವ ಹೊಣೆಯನ್ನು ತಪ್ಪಿಸಿಕೊಳ್ಳುತ್ತಾನೆ. ಇಂಥ ನಂಬಿಕೆಯು ವರ್ಚಸ್ಸಿನಿಂದ, ತನಗೆ ತಿಳಿಯದಂತೆಯೆ ಇನ್ನೂ ಅನೇಕ ಕೆಡುಕಿನ ಪರಂಪರೆಗಳನ್ನು ಬಿತ್ತುತ್ತಾನೆ.

### ದೆವ್ವದಂತಹ ಕೂಸು

ಕ್ರಿಸ್ತೀಯರ ಆತ್ಮವನ್ನುಳಿಸ ಹೋದವರು, ಉಳಿದ ಜನಾಂಗಗಳಿಗೆ ಹಾನಿಯೆಸಗಿ ದರು. ಮುಸಲ್ಮಾನ ಮತಪ್ರಸಾರಕರು ವಿರುದ್ಧ ಮತಗಳನ್ನು ತುಳಿದು ಸಾಗಿದರು. ಹಿಂದೂ ಮತದ ಅನೇಕ ಒಳಪಂಗಡಗಳ ಅಸಹಿಷ್ಣುತೆಯು ಇದರಂತೆಯೇ ಬೆಳೆಯಿತು. ಜಾತಿ, ಗುಂಪು, ವರ್ಣಗಳೆಂಬ–ಅನೇಕ ಉಗ್ರ ಬೇನೆಗಳು, ವ್ಯಕ್ತಿ 'ಆತ್ಮ'ನ ಸಂಕುಚಿತ ಭಾವನೆಯು ಹೆತ್ತಂಥ ದೆವ್ವದಂತಹ ಕೂಸುಗಳು.

### ಹಲವು ಆತ್ಮಗಳು

ಈಗ ವ್ಯಕ್ತಿಯು 'ಆತ್ಮ'ದ ಬೇರೆಬೇರೆ ಕಲ್ಪನೆಗಳನ್ನು ಪರಿಶೀಲಿಸುವುದೊಳಿತು. ಇವು ನಮ್ಮ ನಂಬಿಕೆ, ಶ್ರದ್ಧೆಗಳ ಮೇಲೆಯೇ ಹೊಂದಿವೆ. ಬಹುಕಾಲ ಕ್ರಿಸ್ತೀಯರು 'ಸ್ತ್ರೀ'ಯರಿಗೆ 'ಆತ್ಮ'ವಿಲ್ಲ ಎಂದು ತಿಳಿದುಕೊಂಡಿದ್ದರು. ಇನ್ನಾದರೂ ಅಂಥ ಜನವರ್ಗ ಪ್ರಪಂಚದಲ್ಲಿ ಇದ್ದೇ ಇದೆ. ಕೆಲವೊಂದು ಧರ್ಮದವರು 'ಒಬ್ಬನಿಗೆ ಒಂದು ಆತ್ಮ'ದಂತೆ

ಇವೆಯೆಂದು ತಿಳಿಯುತ್ತಾರೆ. ಒಂದು ಜೀವಿಗೆ—ಎರಡು ಆತ್ಮ, ಮೂರು ಆತ್ಮ, ನಾಲ್ಕು–ಏಳು ಆತ್ಮಗಳ ತನಕವೂ ಇರುವವೆಂಬ ಕಲ್ಪನೆಯುಳ್ಳ ಜನರಿದ್ದಾರೆ. ಇಂಥ ಆತ್ಮಗಳಿಗೆ ಬೇರೆ ಬೇರೆಯಾದ ರೂಪ ಕಲ್ಪಿಸಿ, ಅವು ಬೇಕಾದಂತೆ ಶರೀರದಿಂದ ಹೊರಟು ಹೋಗುವ, ಬರುವ ಚಿತ್ರಗಳನ್ನು ಕಲ್ಪಿಸಿದ್ದಾರೆ. ಇವರಲ್ಲಿ ಯಾರು ಚತುರರು? ಈ ವಿಷಯವಾಗಿ ಉಂಟಾದ ಅನೇಕ ಕಥೆ, ಪುರಾಣ, ನಂಬಿಕೆಗಳನ್ನು ಪರಿಶೀಲಿಸುವಲ್ಲಿ—ಮನುಷ್ಯನ ಊಹಾ ಪ್ರಪಂಚವೇ ಇಂಥ ಕಲ್ಪನೆಗಳನ್ನು ಹುಟ್ಟಿಸಿದಂತೆ ಕಾಣುತ್ತದೆ.

ಜನತೆಯ ನಂಬಿಕೆಯ ವಿಚಾರ, ಮೇಲಿನ ಒಂದು ಸಂಗತಿಯನ್ನು ಹೇಳಿ ತಿರುಗಿ ಮೊದಲಿನ ವಿಷಯವನ್ನು ಗಮನಿಸುವ. ಈ ಅಧ್ಯಾಯದಲ್ಲಿ ಮನುಷ್ಯನ ಕರ್ಮ, ಕರ್ಮಫಲವನ್ನು ಎಣಿಸುತ್ತ, ಒಟ್ಟು ಮಾನವೀ ಸಮಾಜವನ್ನು ಕುರಿತು ಹೇಳಿದ್ದಾಯಿತು. ಈ ಮಾನವೀ ಸಮಾಜವೇ ಒಂದು ಅಖಂಡಶರೀರವೆಂದು ತರ್ಕಿಸಿದ್ದಾಯಿತು. ಈ ವಿಚಾರ ಸರಣಿಯು ಸತ್ಯದ ಒಂದು ಸೆರಗು ಮಾತ್ರ. ಮನುಷ್ಯನ ಸಂಸ್ಕೃತಿ, ನಂಬಿಕೆ, ನೀತಿ–ಅನೀತಿಗಳ ಕಲ್ಪನೆಯ ಕಾರಣಗಳನ್ನು ಕುರಿತು ತರ್ಕಿಸಲು ಸಹಾಯವಾಗಲು ಹೇಳಿದ ಮಾತುಗಳಿವು. ಆದರೆ ಈ ಮನುಷ್ಯ ಪರಂಪರೆಯೂ, ಸ್ವತಂತ್ರವಾದ್ದಲ್ಲ. ಪ್ರಪಂಚದ ಜೀವಕೋಟಿಗಳೊಡನೆ ಅದರ ನಿಕಟ ಸಂಬಂಧವಿದೆ. ಮನುಷ್ಯ ಇಂದು ತನ್ನ ಅನ್ನಾಹಾರಗಳ ಮಟ್ಟಿಗೆ ಮಾತ್ರ ಅವುಗಳ ಮೇಲೆ ಹೊಂದಿರುವನೆಂದು ತಿಳಿಯಬಾರದು. ಅದಕ್ಕೂ ಮೀರಿದ ಹೊಂದಿಕೆ ಉಳಿದ ಜೀವಗಳಿಗೂ ಮನುಷ್ಯನಿಗೂ ಇದೆ.

ಮನುಷ್ಯನ ರೂಪದ ವಿಕಸನವನ್ನು ಕುರಿತು ಡಾರ್ವಿನ್‌ನಂಥವರು ಸಿದ್ಧಾಂತಗೊಳಿಸಿದ ತತ್ವಗಳನ್ನು ಎಣಿಸಿಕೊಳ್ಳುವ. ಆಗ ನಮಗೆ, ನಮ್ಮ ಮಾನವ ಕುಲ–ಹೇಗೆ ಏಕಕಣ (Monocellular) ಜೀವಿಯಲ್ಲಿ ತೊಡಗಿತೆಂದೂ, ಅದೇನೆ ಮುಂದೆ ಕ್ರಮೇಣ ಬಹುಕಣ ಜೀವಿಗಳ ಪರಿಣಾಮಕ್ಕೆ ಕಾರಣವಾಗಿ, ಅನಂತರ ಕಪಿ, ಕಪಿ ಮನುಷ್ಯ, ಮನುಷ್ಯರಲ್ಲಿ ಪರಿಣಮಿಸಿತೆಂದೂ ತಿಳಿಯುತ್ತದೆ. ಜೀವಿಗಳ ಮನಸ್ಸು, ಶೀಲ, ಸ್ವಭಾವ, ಹುಟ್ಟುಗುಣ—ಇವುಗಳೆಲ್ಲ ಎಷ್ಟು ಅನ್ಯೋನ್ಯ ಬೆರಕೆಗೊಂಡು ಬೆಳೆದಿವೆಯೆಂದು ತಿಳಿಯುತ್ತದೆ.

### ಮಾನವನ ಹಿರಿತನ

ಮನುಷ್ಯನನ್ನು ನಾವು 'ಉನ್ನತ' ಮಟ್ಟದಲ್ಲಿ ಇರಿಸಿ, ತಾತ್ವಿಕ ವಿವೇಚನೆಯನ್ನು ಮಾಡುತ್ತೇವಾದರೂ, ಅವನ ಶಾರೀರಿಕ, ಮಾನಸಿಕವಾದ ಅನೇಕ ನಡತೆಗಳಲ್ಲಿ 'ಪ್ರಾಣಿ'ತನ ನಲಿದಾಡುತ್ತಿದೆ. ಈ ಪ್ರಾಣಿತನದ ಮಿತಿ, ವಿಸ್ತಾರ, ಉದ್ದೇಶ ತಿಳಿಯುವವರು, ಮನುಷ್ಯನ ಇತಿಮಿತಿಗಳನ್ನು ತಿಳಿಯಬಲ್ಲರು. ಮನುಷ್ಯನು ಜೀವವೃಕ್ಷದ ಒಂದು ತುದಿಯಲ್ಲಿರುವ ಮಾತ್ರದಿಂದ, ಅವನೇ 'ಜೀವನ'ದ ಕೊನೆಯ ತೀರ್ಮಾನ, ಅವನೇ ಅದರ ಪಕ್ವ ಫಲ–ಎಂದು ತಿಳಿಯಬೇಕಾದ ಕಾರಣವಿಲ್ಲ. ಯಾವತ್ತೂ ಬದುಕು ಸಾಗಬೇಕಾದ ಗುರಿಯು ಈ ಕೇವಲ ಮನುಷ್ಯತನ—ಎಂದಾಗಲಿ, ಮನುಷ್ಯನು ಮಾತ್ರ ಜೀವನದ ಗುರಿಯನ್ನು ಸಾಧಿಸಲು, ಉಚ್ಚವಾದ ಜನ್ಮಗ್ರಹಣ ಮಾಡಿದವನು ಎನ್ನಲೂ ಕಾರಣವಿಲ್ಲ.

ನಾವು ನಟ್ಟ ಗಿಡವೊಂದು ಬೆಳೆದು, ಹೂವಾಗಿ 'ಮಿಡಿಯಿಟ್ಟು' ಹಣ್ಣಾಯಿತೆಂದರೆ—ಆ "ಹಣ್ಣೇ" ಗಿಡದ 'ಅರ್ಥ' ಎಂದು ತಿಳಿಯುವುದು ಮೂರ್ಖತೆಯಲ್ಲವೇ ? ಅವುಗಳ ಬದುಕಿನ ಅಂತರಂಗ ನಮಗೇನು ತಿಳಿದಿದೆ ? ಬದುಕೆಲ್ಲ 'ಆತ್ಮೋದ್ಧಾರ'ಕ್ಕೆಂದು ಏನು ಸಿದ್ಧಾಂತವಂತೆ ! ಇತರ ಜೀವಕೋಟಿಗಳಿಂದ ಈ ಆತ್ಮೋದ್ಧಾರದ ಕೆಲಸ ಆಗಲಾರ ದೆಂದು ಯಾರು ನಿರ್ಣಯಿಸುವವರಂತೆ ? ಯಾವ ಬದುಕಿನ ಅರಿವು ನಮಗೆ ಸಾಕಷ್ಟು ಇಲ್ಲವೋ, ಅದರ ಗೊತ್ತುಗುರಿ, ಮೇಲ್ಮೆ ಕೀಳ್ಮೆಗಳನ್ನು ತರ್ಕಿಸಲು ನಾವಾರು ?

**ಹಾಸುಹೊಕ್ಕಿನ ಜೀವನ**

ಮನುಷ್ಯನ ಸುಖದುಃಖ, ಹಿಗ್ಗು ಕುಗ್ಗುಗಳು—ಗಿಡ, ಮರ, ಪಶು ಪಕ್ಷಿ ಗಳೊಡನೆ ಅವಿರತವಾಗಿ ಸೇರಿಕೊಂಡಿಲ್ಲವೆ ! ಅಲ್ಲದೆ ನಮ್ಮ ಮನುಷ್ಯ ಕುಟುಂಬದಿಂದಾಗಿ ಆ ಜೀವಿಗಳ ಜಗತ್ತಿನಲ್ಲೂ ಹಾನಿ ಹಿತಗಳು ಸಂಭವಿಸುತ್ತಲೇ ಇರುತ್ತವೆ. ನಮ್ಮ ಉದರ ಪೋಷಣೆಯ ವಿಚಾರವಾಗಿಯೂ ಇದು ನಿಜ, ಮನದ ಬೆಳವಣಿಗೆಯ ವಿಷಯದಲ್ಲೂ ಇದು ನಿಜ. ಇವನ್ನು ಪರಿಶೀಲಿಸಿದಂತೆ—ನಮಗೆ ಒಟ್ಟು ಜೀವಕೋಟಿಯೇ ಹಾಸು ಹೊಕ್ಕಾಗಿ ನೆಯ್ದ ಅರಿವೆಯಂತಿದೆಯೆಂದು ಕಾಣುವುದು. ಇತರ ಜೀವಗಳ ಕರ್ಮಫಲ ನಮ್ಮದರೊಡನೆಯೂ, ನಮ್ಮ ಕರ್ಮಫಲ ಅವುಗಳೊಡನೆಯೂ ಸೇರಿದೆ. ಇವುಗಳ ಒಟ್ಟು ಫಲವನ್ನು ಅವೂ ಅನುಭವಿಸುತ್ತವೆ; ನಾವೂ ಅನುಭವಿಸಬೇಕು.

ಸಮಸ್ತ ಜೀವಕೋಟಿಗಳ ಸುಖದುಃಖಗಳು ಪ್ರತ್ಯಕ್ಷವಾಗಿಯೂ ಪರೋಕ್ಷ ವಾಗಿಯೂ ಒಂದರೊಡನೊಂದು ಸೇರಿಕೊಂಡಿವೆ. ಹಾಗೇನೆ ನಿನ್ನಿನ ಜೀವಕೋಟಿ ಯೊಡನೆ ಇಂದಿನವರ ಸುಖದುಃಖ ಸೇರಿದೆ. ಇಂದಿನವರ ಸುಖದುಃಖಗಳು ನಾಳೆಯ ಜೀವಯುಗದಲ್ಲಿ ಮಿಳಿತವಾಗಿದೆ. ವ್ಯಕ್ತಿಯಾದವನು ತನ್ನ ವ್ಯಕ್ತಿತ್ವ ಇಲ್ಲವೆ 'ಆತ್ಮ' ನೆಂಬುದರ ಮಿತಿಯನ್ನು ಈ ಹಿನ್ನೆಲೆಯ ಮುಂದೆ ಒಡನೇನೆ ತಿಳಿದುಕೊಳ್ಳಬೇಕು. ಹಾಗೆ ಮಾಡದೆಯೆ, ಅವನು ತನ್ನನ್ನು ಬೇರೆಯಾಗಿರಿಸಿಕೊಂಡು, ತಿಳಿಯಲು ಯತ್ನಿಸು ತ್ತಾನಾದರೆ, ಅವನಿಗೆ ತನ್ನ ಸ್ವಭಾವದ ಸಮನಾದ ಪರಿಚಯ ದೊರೆಯಲಾರದು. ಅಂಥ ತೀರ್ಮಾನಗಳಿಂದ ಅವನು ತನ್ನ ನಡತೆಯನ್ನು, ಧ್ಯೇಯಗಳನ್ನು ರೂಪಿಸುವಲ್ಲಿ, ಅವನ ಆದರ್ಶಗಳು, ರೀತಿಗಳು, ಕೇವಲ ಅವನ ಸುಖವನ್ನು ಸಾಧಿಸಿಕೊಡುವಂತೆ ಕಾಣ ಬಹುದಾದರೂ, ಅದು ಜೀವಕುಟುಂಬದ ಒಟ್ಟು ಹಿತಕ್ಕೆ ಕಾರಣವಾಗಲಾರದು.

# ೮ ಜೀವನದ ಹಾದಿಯಲ್ಲಿ ಅಭಿವೃದ್ಧಿಗೆ ಕಾರಣರು

## ವ್ಯಕ್ತಿಯ ವೈಶಿಷ್ಟ್ಯ

ವ್ಯಕ್ತಿಯಾದವನು ಹೇಗೆ ಒಟ್ಟು ಜೀವನದಲ್ಲಿ ಬೆರೆತಂಥ ವಸ್ತು ಎಂದು ಹಿಂದೆ ಹೇಳಿದ್ದಾಯಿತು. ಹಾಗಿರಲು 'ವ್ಯಕ್ತಿ' ತಾತ್ಕಾಲಿಕವಾಗಿಯಾದರೂ ಬೇರೆಯೇ ಆಗಿ ಕಾಣಿಸುವುದರಿಂದ ಏನಾದರೂ ಹಾನಿ, ಲಾಭಗಳಿವೆಯೆ ? ಒಂದು ವ್ಯಕ್ತಿಯಿಂದ ಒಟ್ಟು ಜೀವಕೂಟಕ್ಕೆ ಹಿತವಾಗಬಲ್ಲುದೇ ? ಈ ಜೀವಕೋಟಿಯು ಅದರಲ್ಲೂ, ನಮಗೆ ಪರಿಚಿತವಾದ ಮಾನವ ಸಮುದಾಯವು ಅಭಿವೃದ್ಧಿಗೊಂಡಂತೆ ಕಾಣುತ್ತಿದೆಯೋ ಹೇಗೆ—ಎಂಬೆಲ್ಲ ತರ್ಕಗಳನ್ನು ತಾವು ಇದಿರಿಸಬೇಕು. ನಮ್ಮಲ್ಲುಂಟಾಗುವ ಪ್ರಗತಿಗಾಗಲಿ, ಅವನತಿಗಾಗಲಿ—ಎಂಥವರು ಕಾರಣರು ಎಂಬುದನ್ನು ನಿರೀಕ್ಷಿಸಿದರೆ ಆಗ ನಮಗೆ ವ್ಯಕ್ತಿಜೀವನದ ವೈಶಿಷ್ಟ್ಯವು ತಿಳಿದೀತು.

ವ್ಯಕ್ತಿಯಾದವನು ತನ್ನ ಗುಂಪಿನ ಸ್ವಭಾವ, ಶೀಲ ಮೊದಲಾದುವುಗಳ ವರ್ಚಸ್ಸಿಗೆ ಸಿಲುಕಿಕೊಂಡೇ ಹುಟ್ಟುತ್ತಾನೆ. ಅವನ ಬೆಳವಣಿಗೆಯೂ ಬಹುವಾಗಿ ಅವುಗಳ ಹಿಡಿತಕ್ಕೊಳಗಾಗಿಯೇ ಸಾಗುತ್ತದೆ. ಆದರೂ ಪ್ರತಿಯೊಂದು ಜೀವಿಯಲ್ಲೂ ಒಂದು ಬಗೆಯ 'ತನ್ನತನ'ವನ್ನು ಕಾಣುತ್ತೇವೆ. ಇದು ಅಷ್ಟೊಂದು ತೀರ ಪರತಂತ್ರವಾದ ಶಕ್ತಿಯೂ ಅಲ್ಲ. ಅದಕ್ಕೆ ಕೆಲವೊಂದು ರೀತಿಗಳಲ್ಲಿ ಸ್ವತಂತ್ರವಾಗಿ ವರ್ತಿಸುವ, ವಿಚಾರ ಮಾಡುವ ಶಕ್ತಿಗಳುಂಟು. ಎಲ್ಲ ಜನರೂ, ಎಲ್ಲ ಜೀವಿಗಳೂ ಹೀಗೆ ಮಾಡುತ್ತಾರೆಯೋ ಎಂದು ಕೇಳಿದರೆ, ಬಹುಜೀವಿಗಳು ಪರಂಪರೆಯ ಪ್ರವಾಹದಲ್ಲಿ ವ್ಯಕ್ತಿತ್ವ ಮರೆತೇನೆ ತೇಲಿಹೋಗುತ್ತವೆ ಅನ್ನಬೇಕು. ಆದರೂ ಒಂದು ಜೀವಿಯು ತನ್ನ ಅನುಭವಕ್ಕೆ ಒಪ್ಪುವ ಮನೋಭಾವವು, ಇನ್ನೊಂದರಂತಿರುವುದಿಲ್ಲ. ಒಂದೇ ಪರಿಸ್ಥಿತಿಯನ್ನು ಎರಡು ಜೀವಿಗಳು ಬೇರೆಬೇರೆಯಾಗಿ ಇದಿರಿಸುವುದನ್ನು ಕಾಣುತ್ತೇವೆ. ಇದಕ್ಕೆಲ್ಲ ವ್ಯಕ್ತಿಯಲ್ಲಿ ಕೇಂದ್ರಿಸಿದ 'ತನ್ನತನ' ಕಾರಣವಾಗಿ ಎದ್ದು ಕಾಣುತ್ತದೆ. ಇವನು ಇತರರಂತಲ್ಲ ಎಂಬಷ್ಟು ಹಿರಿಮೆ ಅವನಲ್ಲಿ ವ್ಯಕ್ತವಾಗುತ್ತದೆ. ಅಂತಹ ಹಿರಿಯ ವ್ಯಕ್ತಿಗಳೂ ಗುಂಪಿನ ಅಂಶಗಳೇ. ಅದರಂತೆ, ಸಾಮಾನ್ಯಕ್ಕೂ ಕಡಿಮೆತರದ ಜೀವಿಗಳೂ, ಜನರೂ ಇರಬಹುದು. ಅವರೂ ಆ ಗುಂಪಿನವರೇ. ಒಟ್ಟು ಜೀವನ ಪ್ರವಾಹದ ಕೀಳ್ಮೆಗೋ, ಮೇಲ್ಮೆಗೋ ಈ ಎಲ್ಲರು ಕಾರಣರಾಗುತ್ತಾರೆ. ಜನಸಾಮಾನ್ಯರಂತೆ ಕೆಲವರು ವರ್ತಿಸದೆ, ತಮ್ಮದೇ ಆದೊಂದು ರೀತಿಯಲ್ಲಿ ವರ್ತಿಸುತ್ತಾರೆ. ಅವರ ಅಂಥ ನಡತೆಯು ಮುಂದಿನ ಜೀವನದ ಅಂಗವಾಗುವುದರಿಂದ, ನಾಳಿನ ಜೀವನ ಪ್ರವಾಹದ ಶ್ರೇಯಸ್ಸು, ಅವನತಿಗಳು ಇಂಥ ವಿಶೇಷ ವ್ಯಕ್ತಿಗಳಿಂದಾಗಬಹುದು.

### ಮೀನು-ಮೊಸಳೆ-ಉಡ

ಮೊದಲಿನ ಜಲಚರಜೀವಿಗಳೇ, ಗೌಳಿಯಂತಹ ನೆಲಚರ ಜೀವಿಗಳಾದುವೆಂದು ಕೇಳುತ್ತೇವೆ. ಹೇಗೆ ಇದು ಸಾಧ್ಯವಾಗಿರಬಹುದು ? ಜಲ ಆವಿಯಾಗಿ ಆರಿದಾಗ, ನೆಲವು ನೀರಿನಲ್ಲಿ ಮೂಡಿದಾಗ, ಈ ಹೊಸ ಆವರಣದಲ್ಲಿ ಬದುಕಲಾರದೆ ಮಡಿದ ಪ್ರಾಣಿಗಳ ಸಂಖ್ಯೆ ಅನೇಕವಾಗಿದ್ದಿರಬಹುದು. ಆದರೆ ಅವುಗಳಲ್ಲಿ ಕೆಲವು ಪ್ರಾಣಿಗಳು ಹಟ ಹಿಡಿದು ನೆಲಕ್ಕೆ ಬಂದು, ಜೀವಿಸಲು ಯತ್ನಿಸಿದವು. ಮೊದಮೊದಲಿಗೆ ಅವುಗಳ ಯತ್ನ ಸಫಲವಾಗದೆ ಹೋದರೂ, ಕಾಲಕ್ರಮೇಣ ಅಂಥ ಪ್ರಯತ್ನಗಳು ಸಾಧ್ಯವಾಗಿ, ಮೀನಿನಂಥ ಜಲಚರ ಜೀವಿಯು ಮೊಸಳೆಯಂತಹ ನೆಲ ಜಲಗಳಲ್ಲಿ ಬದುಕಬಲ್ಲ ಜೀವಿಯಾಯಿತು. ಮುಂದೆ 'ಉಡ'ದಂತೆ ಕೇವಲ ನೆಲದ ಮೇಲೆಯೇ ಜೀವಿಸುವುದಕ್ಕೂ ಸಾಧ್ಯವಾಯಿತು.

ಮಾನವನ ಸಂಸ್ಕೃತಿಯಾಗಲಿ, ಶೀಲವಾಗಲಿ—ಹೇಗೆ ಈಗಣ ಅಭಿವೃದ್ಧಿಯನ್ನು ಪಡೆದವು? ಮನುಷ್ಯನು ಗವಿಮನುಷ್ಯನ ಮಟ್ಟದಿಂದ ಇಂದಿನ ನಾಗರಿಕತೆಯನ್ನು ಹೇಗೆ ಕಂಡುಹಿಡಿದ ? ವಿಜ್ಞಾನವಾಗಲಿ, ತತ್ತ್ವಜ್ಞಾನವಾಗಲಿ ಇಂದಿನ ಬದುಕಿಗೆ ದೊರೆತ ಬಗೆ ಹೇಗೆ–ಎಂದರೆ, ಅನೇಕ ವ್ಯಕ್ತಿಗಳ ಸಾಹಸ, ತಪಸ್ಸು, ಚಿಂತನೆ, ನಡವಳಿಕೆಗಳ ಫಲವಾಗಿಯೇ ಅವು ಉಂಟಾದುವು—ಎಂದು ಉತ್ತರ ಕೊಡಬೇಕಾಗುತ್ತದೆ.

### ಇತಿಹಾಸದಿಂದ

ಮಾನವ ಜೀವನದ ಪ್ರಗತಿಗೆ ಕಾರಣವಾದ ಅಸಂಖ್ಯಾತ ಘಟನೆಗಳ ಇತಿಹಾಸವನ್ನು ನಾವು ವಿಚಾರಿಸಿ ತಿಳಿಯಬೇಕು. ಪರಂಪರೆಯು ನಡತೆಯು ಮುನ್ನಡೆಗೆ ತಡೆಯಾಗಿ ಬಂದಾಗಲೆಲ್ಲ, ಕೆಲವು ಮೇಧಾವಿಗಳೂ ಧೀರರೂ, ಜನಕ್ಕೆ ಬೇರೆಯೇ ಬದಲು ಹಾದಿ ಹಾಕಿಕೊಟ್ಟರು. ಗುಂಪಿನ ನಿಷ್ಠುರ ಸಹಿಸಿಯಾದರೂ ಹೊಸ ಹಾದಿಗಳನ್ನು ತೋರಿಸಿಕೊಟ್ಟರು. ಎಲ್ಲ ಕಾಲಗಳಲ್ಲೂ, ಎಲ್ಲ ದೇಶಗಳಲ್ಲೂ ಇಂಥವರು ಕಾಣಿಸಿಕೊಂಡಿದ್ದಾರೆ; ಕಾಣಿಸಿಕೊಳ್ಳುತ್ತಲಿದ್ದಾರೆ. ಅದರಲ್ಲಿ 'ಎರಿಸ್ಟಾಟಲ'ನನ್ನು ಮರಣದಂಡನೆಯಿಂದ ಮುಗಿಸಿದಂತೆ, ಅಂಥವರನ್ನು ಬಲಿಹಾಕಿದ ಜನಸಮುದಾಯಗಳೂ ಇವೆ. ಆದರೆ ಅಂಥ ದಂಡನೆಗಳಿಂದ, ವ್ಯಕ್ತಿಜೀವನದ ಹೆಚ್ಚಳವನ್ನು ಸಾರಿದಂತಾಗಿ, ಅವರು ಸಾರಿದ ತತ್ತ್ವಗಳು ಉಳಿದುಕೊಂಡು, ಮುಂದಿನ ಜನರ ಮನ್ನಣೆಗೆ ಪಾತ್ರವಾದುವು.

### ಗಾಂಧಿ, ಹಿಟ್ಲರ್

ಸಂಯುಕ್ತ ಅಮೇರಿಕದಲ್ಲಿ ಶ್ವೇತನೊಬ್ಬನು ನಿಂತು. ತನ್ನ ಜನರಿಗೇನೆ 'ನಿಗ್ರೋ ಜನರನ್ನು ಗುಲಾಮರಾಗಿ ತಿಳಿಯದಿರಿ, ಅವರು ನಮಗೆ ಸರಿಸಮಾನರು'—ಎಂದನು. ಗಾಂಧೀಜಿಯವರು ಹರಿಜನರ ವಿಚಾರದಲ್ಲಿ ಇದೇ ಬಗೆಯ ಮಾತನ್ನು ಹಿಂದೂಗಳಿಗೆ ನುಡಿದರು. ಮನುಷ್ಯ ಮನುಷ್ಯನನ್ನು ಸ್ವಾರ್ಥಕ್ಕಾಗಿ ಹಿಂಸಿಸುತ್ತಿದ್ದ ವೇಳೆಯಲ್ಲಿ, ಬುದ್ಧನಂಥವರು ಹಿಂಸೆಯ ಬಗೆಯನ್ನು ಹಳಿದು, ಸಮಾಜವು ಸಹಕಾರಕ್ಕೆ ಕೊಟ್ಟ ಮನ್ನಣೆ

ಯನ್ನು ತಗ್ಗಿಸಿದರು. ಧನಸತ್ತೆಯಿಂದ ಶ್ರೀಮಂತರು ಬಡವರ ದುಃಖಿಗಳಿಗೆ ಕಾರಣ ವಾದಾಗ, ಕಾರ್ಲಮಾರ್ಕ್ಸ್‌ನಂಥವರು ಸಮತಾವಾದವನ್ನು ಸಾರಿದರು. ಲೆನಿನ್‌ನಂಥವರು ಅದನ್ನು ಜೀವನದಲ್ಲಿ ಬಳಕೆಗೆ ತರಲು ಪ್ರಯತ್ನ ಮಾಡಿದರು. ಇಂಥ ಜನರೆಲ್ಲರು ತಮ್ಮ ವ್ಯಕ್ತಿತನವನ್ನು ಬೆಳೆಯಿಸಿಕೊಂಡುದರಿಂದ, ಗುಂಪು ತಪ್ಪು ಹಾದಿ ಹಿಡಿದಾಗ, ಅದಕ್ಕೆ ಮುಂದಿನ ಅಭಿವೃದ್ಧಿಯ ಮಾರ್ಗವನ್ನು ತೋರಿಸಿದರು. ಹಾಗೇನೆ—ತೈಮೂರು, ನೆಪೋಲಿಯನ್, ಹಿಟ್ಲರರಂಥವರು ಜನಜೀವನವನ್ನು, ತಮ್ಮ ತಪ್ಪು ಧ್ಯೇಯಗಳಿಂದ ಅವನತಿಗೆ ಇಳಿಸಿದುದೂ ಇದೆ.

ಮನುಷ್ಯನ ನಡವಳಿಕೆಗೆ ಮೂಲವಾದುದು ಅವನ ವಿಚಾರ ಸರಣಿ. ಈ ವಿಚಾರ ಸರಣಿಯನ್ನು ಇನ್ನಷ್ಟು ವಿಶಾಲಗೊಳಿಸಲು ಎಷ್ಟೆಲ್ಲ ತತ್ವಜ್ಞಾನಿಗಳು ಪ್ರಯತ್ನಿಸಲಿಲ್ಲ! ಅದರಂತೆ ಮನುಷ್ಯನ ಆರೋಗ್ಯವನ್ನು ಅಪಹರಿಸುತ್ತಿದ್ದ—ಬೇನೆ, ಬರಗಾಲಗಳನ್ನು ತಮ್ಮ ತಿಳುವಳಿಕೆಯಿಂದ, ವ್ಯಕ್ತಿತನದ ಸಾಹಸಗಳಿಂದ ಪ್ರತಿಭಟಿಸಲು ಎಷ್ಟು ಜನ ನೆರ ವಾಗಿಲ್ಲ! ರೋನಾಲ್ಡ್ ರಾಸ್, ಲುಯಿ ಪೆಶ್ಚರ್, ಮೆಡಾಮ್ ಕ್ಯೂರಿ–ಇಂಥ ಹಲವರು ತಮ್ಮ ವ್ಯಕ್ತಿತ್ವದ ಬೆಳವಣಿಗೆಯಿಂದ ಮಾನವತೆಯ ಕಲ್ಯಾಣವನ್ನು ಸಾಧಿಸಲಿಲ್ಲವೇ? ಅದರಂತೆ–ಮಾದಕ ದ್ರವ್ಯಗಳಿಂದಲೋ, ಇನ್ನಾವ ಯಂತ್ರಶೋಧನೆಗಳಿಂದಲೋ, ಜೀವನದ ಪ್ರಗತಿಗೆ ವಿಘಾತಕರಾಗಿ ಬಂದ ವ್ಯಕ್ತಿಗಳೂ ಇದ್ದಾರೆ. ಒಟ್ಟಿಂದ ನೋಡಿ ದಲ್ಲಿ ಮಾನವತೆಯ ಇತಿಹಾಸದಲ್ಲಿ—ಅನೇಕ ದುಷ್ಟ ನಡವಳಿಕೆಗಳು, ಭಾವನೆಗಳು ತುಂಬಿವೆಯಾದರೂ, ಮನುಷ್ಯನ ಬಳಗ, ಹಿಂದಿಗಿಂತ ಇಂದು ಎಷ್ಟೋ ಅಭಿವೃದ್ಧಿ ಯನ್ನು ಹೊಂದಿದೆಯೆನ್ನಬಹುದು. ಅದಕ್ಕೆಲ್ಲ ಕಾರಣವಾದುದು ಕೆಲವೊಂದು ವ್ಯಕ್ತಿಗಳ ಹಿರಿಮೆ.

## ವ್ಯಕ್ತಿಯ ಕರ್ತವ್ಯ

ವ್ಯಕ್ತಿ ತಾನು ಬದುಕಿಗೆ ಬಂದುದಕ್ಕೆ ಏನು ಮಾಡಲು ಶಕ್ಯ–ಎಂಬ ಪ್ರಶ್ನೆಗೆ ಇದು ಉತ್ತರವನ್ನು ಸಲಿಸುವುದಿಲ್ಲವೇ? ಬಹು ಜನರು, ಮಂದೆಯಲ್ಲಿನ ಕುರಿಗಳಂತೆ ಪ್ರವಾಹದಲ್ಲಿ ತೇಲಿ ಹೋಗುವರಾದರೂ, 'ಜೀವನ ಸಮಸ್ಯೆ'ಯನ್ನು ತಿಳಿದು ವರ್ತಿಸ ಬೇಕೆನ್ನುವಾಗ, ತನ್ನ ಜೀವನದ ಸಾರ್ಥಕತೆಯನ್ನು, ತಾನು ತನ್ನ ಗುಂಪಿನ ಹಿರಿಮೆಗೆ ಎಷ್ಟರಮಟ್ಟಿಗೆ ಕಾರಣನಾಗಬಲ್ಲೆ–ಎಂಬುದನ್ನು ತಿಳಿದು ವರ್ತಿಸುವುದರಲ್ಲಿದೆ.

ಹುಟ್ಟು ಸಾವುಗಳ ಎಡೆಯಲ್ಲಿ ಬಾಳುವ ವ್ಯಕ್ತಿಯು, ತನ್ನ ಬಾಳ್ವೆಯ ಕಾಲದಲ್ಲಿ ತನ್ನ ತನವ್ಯಕ್ತವನೆಂದು ತೋರುವನಾದರೂ, ಆತ ಬೇರೆಯೇ ಅಲ್ಲ, ಎಂಬುದನ್ನು ಹಿಂದೆ ಹೇಳಿದ್ದಾಯಿತು. ಹೀಗಿರಲು, ಆತ ತನ್ನದೆಂಬ ಬೇರೆಯೇ 'ಆತ್ಮದ' ಎಣಿಕೆ ಯನ್ನು ಹಾಕಿ, ಅದರ ಕಲ್ಯಾಣದ ಹೋರಾಟ ಮಾಡುವ ಬದಲು, ಜೀವಕೋಟಿಯಲ್ಲಿ ತಾನೊಬ್ಬ—ಎಂದು ತಿಳಿದು ಮಾಡುವ ಪ್ರಯತ್ನ, ವಿಚಾರಗಳಿಂದಲೇನೆ ಹೆಚ್ಚಿನ ಸುಖ ವಾದೀತು. ತಾನು ಜೀವನ ಪ್ರವಾಹದಿಂದ ಬೇರೆಯೂ ಅಲ್ಲ, ಬೇರೆಯಾಗಿರಲು ಅಶಕ್ಯ, ಅದರಿಂದ ಬೇರೆಯಾದೊಂದು ಮುಕ್ತಿ ತನಗಿಲ್ಲ ಎಂದೇ ತಿಳಿಯಬೇಕು.

ನಮ್ಮ ಜೀವನದ ಕಣಗಳಾಗಲಿ, ಭಾವನೆಗಳಾಗಲಿ ನಮ್ಮಿಂದ ಕಳಚಿ ಸಾಯುತ್ತಿರುವಾಗಲೇ, ನಮ್ಮ ಸುತ್ತಲಿನವರಲ್ಲಿ ಹುಟ್ಟುತ್ತಿರುತ್ತವೆ. ಇತರರ ಕಣಗಳೂ ಭಾವನೆಗಳೂ ನಮ್ಮಲ್ಲಿ ಬೆರೆಯುತ್ತಲೇ ಇರುತ್ತವೆ. ನಮಗೆ ಬೇರೆಯೇ ಆದ ಆತ್ಮವಿಲ್ಲ ಎಂದು ತಿಳಿಯುವಂತೆಯೆ, ಹುಟ್ಟು ಸಾವುಗಳ ವಿಷಯವಾಗಿಯೂ—ವಿಶಾಲವಾದ ದೃಷ್ಟಿಯನ್ನು ಇರಿಸಿಕೊಳ್ಳಬೇಕಾಗುತ್ತದೆ.

# ೮ ಜೀವನ ಅಮರ ; ಹುಟ್ಟು, ಸಾವು ತಾತ್ಕಾಲಿಕ

## ಸಂತಾನದ ಹಿನ್ನೆಲೆ

"ಶಿಶುವೇ ಮಾನವನ ತಂದೆ" ಎಂಬ ಇಂಗ್ಲಿಷ್ ನಾಣ್ಣುಡಿಯು ಅಕ್ಷರಶಃ ನಿಜವಲ್ಲದೆ ಹೋದರೂ, ಜೀವನ ಮುಂದುವರಿಸುವ ಬಗೆಯನ್ನು ಅದು ತೋರಿಸುತ್ತದೆ. ಯಾವುದಾದರೊಂದು ಬಳಗದ ಒಂದು ಶಿಶುವನ್ನು ಪರಿಶೀಲಿಸಿದಲ್ಲಿ ಆ ಮಗುವಿನ ರೂಪವೂ ಇತರ ಕೆಲವೊಂದು ಲಕ್ಷಣಗಳೂ ತಂದೆಯಿಂದಲೋ ತಾಯಿಯಿಂದಲೋ ಬಂದಂತೆ ಕಾಣುತ್ತವೆ. ಆದರೆ ತಂದೆಯು ಇಲ್ಲವೆ ತಾಯಿ ಯಾವೊತ್ತು ಆಕಾರ ಲಕ್ಷಣಗಳು ಆ ಮಗುವಿನಲ್ಲಿ ಪ್ರತಿಬಿಂಬಿಸುವುದಿಲ್ಲ. ತಂದೆಯ ಮುಖ, ತಾಯಿಯ ಬಣ್ಣ, ಅಜ್ಜನದೋ ಮಾವನದೋ ಕಣ್ಣು, ಕಿವಿ, ಮತ್ತು ಒಬ್ಬ ದೂರದ ರಕ್ತ ಸಂಬಂಧಿಕನ ಇನ್ನಾವುದೋ ಒಂದು ಅಂಗ ಸಾಮ್ಯ—ಇವುಗಳೆಲ್ಲ ಮಗುವಿನಲ್ಲಿ ಕಾಣಿಸಬಹುದು. ಮಗುವಿನ ರೂಪಕ್ಕೆ ಕಾರಣರಾದವರು ಅವನ ತಂದೆ ತಾಯಿಗಳೆಷ್ಟು ನಿಜವೋ ಅವರ ಹಿಂದಿನ ತಲೆಮಾರಿನವರು ಅಷ್ಟೇ ನಿಜ. ರೂಪದ ವಿಚಾರದಲ್ಲಿ ಈ ಮಾತು ಹೇಗೆ ಅನ್ವಯಿಸುತ್ತದೋ ಅದು ಮಗುವಿನ ಗುಣ ಸ್ವಭಾವಗಳ ವಿಚಾರಗಳಲ್ಲಿಯೂ ಇನ್ನಷ್ಟು ವಿಶಾಲವಾಗಿ ಅನ್ವಯಿಸುತ್ತದೆ. ಮಗುವಿನಲ್ಲಿ ಅವನ ತಂದೆಯ ಗುಣವೂ ಸೇರುತ್ತದೆ. ತಾಯಿಯ ಗುಣವೂ ಸೇರುತ್ತದೆ. ಅವನ ಹಿರಿಯರಿಂದ ಮೇಧಾವಿತನ ಬರಬಹುದು. ಇನ್ನಾವನೋ ಹಿರಿಯನಿಂದ ನರಗಳ ಚಟುವಟಿಕೆ ಬರಬಹುದು. ಈ ಎಲ್ಲ ಸಂಪತ್ತಿನ ಮೇಲೆ ಆ ಮಗುವಿನ ಸುತ್ತಲೂ ಬಾಳಿ ಬದುಕುವ ಬಂಧು ಬಳಗದವರು, ಗೆಳೆಯರು, ವಿರೋಧಿಗಳು ಅನೇಕ ಸನ್ನಿವೇಶಗಳು, ಆ ಮಗುವಿನ ಮನಸ್ಸಿನ ರಚನೆಗೂ, ಬೆಳವಣಿಗೆಗೂ ಪ್ರಭಾವ ಬೀರಬಹುದು.

## ಗುಣದ ಹಿನ್ನೆಲೆ

ಎಷ್ಟೋ ಬಾರಿ, ಒಂದು ತಲೆಮಾರಿನಲ್ಲಿ ಒಂದು ವ್ಯಕ್ತಿಯಲ್ಲಿ ಕಾಣಿಸಿಕೊಂಡ ರೂಪವಿಶೇಷ, ಅವನ ಬಹುಮಂದಿ ಪೀಳಿಗೆಯವರಲ್ಲಿ ಕಾಣಿಸಿಕೊಳ್ಳದೆ, ಹಲವು ವರ್ಷಗಳ ಬಳಿಕ ಆ ಬಳಗದ ಇನ್ನಾವನಾದರೂ ಒಬ್ಬನಲ್ಲಿ ಮರುಕಳಿಸಬಹುದು. ಒಬ್ಬನಿಗೆ ಕೋಪುಗಣ್ಣಿದೆ ಎಂದು ತಿಳಿಯುವ. ಅದು ಅವನ ಮಕ್ಕಳು ಮರಿಮಕ್ಕಳಲ್ಲಿ ಕಾಣಿಸದೆ ಹೋಗಿ, ಮುಂದಿನ ಪೀಳಿಗೆಯಲ್ಲಿ ಕಾಣಿಸಬಹುದು. ಅದರಂತೆ ವ್ಯಕ್ತಿಯ ಗುಣಗಳಾದರೂ, ಸಮಾಜದ ಹತ್ತು ಮಂದಿಯಿಂದ ಪರಿಣಾಮಗೊಳ್ಳುವುದರಿಂದ, ಎಷ್ಟೋ ಕಾಲದವರೆಗೆ ಅದು ಜನಗಳಲ್ಲಿ ಕಾಣಿಸದೆ ಹೋದರೂ, ಬಹುಕಾಲದ ಬಳಿಕ ಅವನ ಆವರಣದಲ್ಲಿ ನೆಲಸಿದ್ದ ಮನೋವೃತ್ತಿಯ ಪರಿಣಾಮವಾಗಿ. ಇನ್ನೊಬ್ಬನಲ್ಲಿ ಮೂಡಿ

ತೋರಬಹುದು. ಬುದ್ಧನಲ್ಲಿ ಕಾಣಿಸಿಕೊಂಡ ಅಹಿಂಸಾ ವೃತ್ತಿಯಾಗಲಿ, ಜೀವದಯೆಯಾಗಲಿ, ಅಷ್ಟೇ ತೀವ್ರತೆಯಿಂದ ಅವನ ಮಗ ರಾಹುಲನಲ್ಲಾಗಲಿ ಅವನ ಶಿಷ್ಯಕೂಟವ ಭಿಕ್ಕುಗಳಲ್ಲಾಗಲಿ ಕಾಣಿಸಲಿಲ್ಲ. ಆದರೆ ಇಂದು ಎರಡು ಸಾವಿರ ವರ್ಷಗಳ ಬಳಿಕ ಅದೇ ಮನೋವೃತ್ತಿಯು ಬೆಳಗು ಗಾಂಧಿಜೀಯವರಲ್ಲಿ ಇನ್ನಷ್ಟು ತೀವ್ರವಾಗಿ ಪ್ರಕಟವಾದುದನ್ನು ಕಾಣುತ್ತಿದ್ದೇವೆ. ಅಂದಿನ ಬುದ್ಧನ ಮನೋವೃತ್ತಿಯು ಸಮಾಜದ ಬದುಕಾಗಿ ಹಂಚಿಹೋಗಿ, ಈ ಎರಡು ಸಾವಿರ ವರ್ಷಗಳ ತನಕ ಸಾಗಿ ಬಂದು, ಅನುಕೂಲ ಸನ್ನಿವೇಶಗಳ ದೆಸೆಯಿಂದ ತಿರುಗಿ ಗಾಂಧಿಯವರಲ್ಲಿ ಪ್ರಕಟವಾಯಿತು. ಹೀಗೆ ಪ್ರಕಟವಾದ ಮಾತ್ರಕ್ಕೆ ಗಾಂಧಿಜೀಯವರು ಶಾಕ್ಯವಂಶಸ್ಥರೇ ಆಗಬೇಕಿಲ್ಲ, ಬುದ್ಧನ ಅವತಾರವೂ ಆಗಬೇಕಿಲ್ಲ.

**ಒಟ್ಟು ಜೀವನ**

ನಾವು ಒಟ್ಟು ಜೀವನದ ದೃಷ್ಟಿಯಿಂದ ಸಾವು ಹುಟ್ಟುಗಳ ಮರ್ಮ ಅಳೆಯಬೇಕಾಗುತ್ತದೆ. ಒಂದೊಂದು ವ್ಯಕ್ತಿಯ ಕಾರ್ಯ ಕಲಾಪಗಳು ಸಾವು ಹುಟ್ಟುಗಳ ಮಿತಿಯಲ್ಲಿ ಸಿಕ್ಕಿದಂತೆ ಕಂಡರೂ ಅವು ಅಮರವಾದ ಜೀವನ ಪ್ರವಾಹದ ಒಂದು ಅಂಶ. ವ್ಯಕ್ತಿಯ ತೋರಿಕೆಯ ಸಾವು ಸಾವೂ ಅಲ್ಲ, ಹುಟ್ಟು ಹುಟ್ಟೂ ಅಲ್ಲ. ಆಲದ ಮರವೊಂದು ಹುಟ್ಟಿ ಬೆಳೆದು ಮುಪ್ಪು ಬರುವ ಮೊದಲೇ ಬೀಳಲನ್ನು ನೆಲಕ್ಕೂರುತ್ತದೆ. ಅನಂತರ ವಯಸ್ಸಿನಿಂದ ಅದರ ಕಾಂಡವು ನಾಶವಾದರೂ ಈ ಹೊಸ ಬೀಳುಗಳೇ ಕಾಂಡವಾಗಿ ಆ ಮರದ ಜೀವನ ಮುಂದೆ ಸಾಗುತ್ತದೆ. ಮೊದಲಿನ ಕಾಂಡವು ಸತ್ತುದು ನಿಜವಾದರೂ ಆಲದ ಮರ ಸತ್ತುದು ನಿಜವಲ್ಲ.

**ಅಮರತ್ವದ ದಾರಿ**

ಜೀವನದ ಅಮರತ್ವವನ್ನು ಹೀಗೂ ಬಣ್ಣಿಸಬಹುದು. ಬೆಕ್ಟೀರಿಯದಂಥ ಏಕಕಣ ಜೀವಿಗಳು ಬೆಳೆದು, ಸಾವು ಬರುವ ಮುನ್ನವೇ, ಇಬ್ಭಾಗವಾಗುತ್ತವೆ. ಆ ತುಂಡುಗಳು ತಿರುಗಿ ಬೆಳೆದು, ಅವುಗಳಲ್ಲಿ ಒಂದೊಂದು ಮುಪ್ಪಿಗೆ ಮೊದಲು, ತಿರುಗಿ ಒಡೆಯುತ್ತ ಹೋಗುತ್ತದೆ. ಅವುಗಳ ಜೀವನ ಹೀಗೆ ಅನಂತವಾಗಿ ಮುಂದೆ ಸರಿಯುತ್ತದೆ. ಅವುಗಳ ಬೆಳವಣಿಗೆ ಹೀಗೆ ಅನಂತವಾಗಿ ಹೋಗುತ್ತದೆಯಾದರೆ ಇಂದು ಪ್ರಪಂಚವೆಲ್ಲ ಬೆಕ್ಟೀರಿಯಗಳಿಂದ ತುಂಬಿರಬೇಕಿತ್ತಲ್ಲವೇ ? ನಿಜ, ಇಂದು ಹಾಗಾಗಿಲ್ಲ. ಪ್ರಪಂಚದಲ್ಲಿ ಬೆಕ್ಟೀರಿಯಗಳಲ್ಲದ ಲಕ್ಷೋಪಲಕ್ಷ ಜೀವಿಗಳಿವೆ. ಅವುಗಳೂ ಜೀವನಕ್ಕೆ ಅನಿವಾರ್ಯ. ಇಂದುಳಿದ ಬೆಕ್ಟೀರಿಯಗಳು ಹಿಂದಿನ ಬೆಕ್ಟೀರಿಯಗಳ ಎಷ್ಟನೆಯದೋ ಕಿರಿದಾದ ಅಂಶಗಳು. ಅವುಗಳಲ್ಲಿ ಎಷ್ಟೋ ಎಷ್ಟೋ ಅಂಶಗಳು ಬದುಕಿನಿಂದ ನಷ್ಟವಾಗಿ ಹೋದುವು, ಆದರೂ ಈಗ ಉಳಿದಿರುವ ಬೆಕ್ಟೀರಿಯಗಳಲ್ಲಿ ತೀರ ಪ್ರಾಚೀನಕಾಲದ ಬೆಕ್ಟೀರಿಯಗಳ ಜೀವನಯಾತ್ರೆಯ ವಿಸ್ತಾರವಾದ ರೂಪ ಕಾಣುತ್ತಿದೆ.

**ವ್ಯಕ್ತಿತ್ವ ಅಮರತ್ವದ ಅಂಶ**

ಜೀವನದಲ್ಲಿನ ವ್ಯಕ್ತಿತ್ವವು ಈ ತೆರನಾದುದು. ಒಂದು ವ್ಯಕ್ತಿಯಲ್ಲಿ ಪ್ರಕಟವಾದ

ಶಕ್ತಿಗಳು ಅಭಿವೃದ್ಧಿಗೊಂಡು ಅದನ್ನು ಅವನು ಬದುಕಿಗೆ ತರುವ ಶರೀರ ಸಾಯುವ ಮೊದಲೇ, ಆ ಶಕ್ತಿಗಳು ಸುತ್ತಲಿನ ಆವರಣದಲ್ಲಿ ಅಂದರೆ ಇತರ ವ್ಯಕ್ತಿಗಳ ಜೀವನದಲ್ಲಿ ಬೆರೆಯುತ್ತವೆ. ಆ ಮೂಲಕ ಅವು ಸಾವನ್ನು ಧಿಕ್ಕರಿಸಿ ಅಮರವಾಗುತ್ತವೆ. ಒಬ್ಬ ವ್ಯಕ್ತಿ ತಾನು ಬದುಕಿನಲ್ಲಿ ಇತರ ಮನುಷ್ಯ ಕುಟುಂಬವನ್ನು ಸಂಧಿಸದೆ ಹೋದರೂ, ಅವನು ತನ್ನ ಅಮರತ್ವವನ್ನು ಸಾಧಿಸಬಲ್ಲ. ಆ ವ್ಯಕ್ತಿ ತನ್ನ ಉದ್ದಾಮ ಜೀವನದಿಂದ ಇಲ್ಲವೆ ಉಜ್ವಲ ಪ್ರೇರಣೆಯಿಂದ ಕಾಲವನ್ನು ಧಿಕ್ಕರಿಸಿ ನಿಲ್ಲಲು ಬರುತ್ತದೆ. ಅವನಾಡಿದ ಮಾತುಗಳು ನಾಣ್ಣುಡಿಗಳಾಗಬಹುದು. ಅವನು ಕಂಡುಹಿಡಿದ ತತ್ವಗಳು ಗ್ರಂಥಸ್ಥವಾಗಿ ಸಾವಿರ ವರುಷಗಳ ಮುಂದಿನ ಬದುಕಿಗೆ ನೆರವಾಗಬಹುದು. ಅವನ ಕೃತಿಗಳು ಅಂದರೆ ಅವನು ಮಾಡಿದ ಯಂತ್ರಗಳು, ಕೆತ್ತಿದ ವಿಗ್ರಹಗಳು, ಆಡಿದ ಮಾತುಗಳು ನೂರಾರು ವರ್ಷಗಳ ಬದುಕಿಗೆ ನೆರವಾಗಿ, ಪರಿಣಾಮ ಉಂಟುಮಾಡಬಹುದು. ಅದರಿಂದಲೇ ಒಬ್ಬ ಬುದ್ಧನೋ, ಇನ್ನಾವ ಋಷಿಯೋ ಆಡಿದ ಮಾತು ಸುತ್ತಲಿನ, ಸಮಕಾಲೀನ ಜೀವನಕ್ಕೆ ಉಂಟುಮಾಡಿದ ಪರಿಣಾಮಕ್ಕಿಂತ ಹೆಚ್ಚಾಗಿ, ಸಾವಿರ ಎರಡು ಸಾವಿರ ವರ್ಷಗಳ ಬಳಿಕ ಬಂದ ಜೀವನಕ್ಕೆ ಬೆಳಕನ್ನು ಕೊಡುವುದು ಸಾಧ್ಯವಾಗುತ್ತದೆ. ಆದರೆ ಆ ಬುದ್ಧನ ನಡೆನುಡಿ, ಕೃತಿಗಳ ವರ್ಚಸ್ಸು ಇಂದಿನವರ ಎಟುಕಿಗೆ ಸಿಗಲು, ನಮಗೂ ಅವನಿಗೂ ನಡುವೆ ಸಾಗಿದ ಎರಡು ಸಾವಿರ ವರ್ಷಗಳಲ್ಲಿ ಬದುಕಿದ ಜನಜೀವನವೇ ಕಾರಣ. ಜನಜೀವನದ ಪ್ರವಾಹದಿಂದಾಗಿ, ಅಂದಿನ ಬುದ್ಧನು ಇಂದಿನ ತನಕವೂ ಬದುಕಿರುವಂತೆಯೇ ಸರಿ.

ಅಂದಿನ ಬುದ್ಧನು ತನ್ನ ಜೀವನ ಕಾಲದಲ್ಲಿ ಒಬ್ಬನು ವ್ಯಕ್ತಿಯೆನಿಸಿದರೂ ಅವನ ಜೀವನದ ಕ್ರಿಯೆಗಳಿಗೆ ಅವನೊಬ್ಬನೇ ಸರ್ವಾಧಿಕಾರಿಯಲ್ಲ. ಅವನಿಗೂ ಹಿಂದಕ್ಕೆ ಸಾಗಿದ ಜೀವನದ ವರ್ಚಸ್ಸಿನ ಹಿರಿಯ ಸಾಕ್ಷಿ ಅವನು. ಅನೇಕರ ಕರುಣೆ, ಅನೇಕರ ದುಃಖ, ಅನೇಕರ ಅಶಾಂತಿಗಳು ಅವನಲ್ಲಿ ತೀಕ್ಷ್ಣವಾಗಿ ಪ್ರಕಟಗೊಂಡು, ಅವನ ಮೂಲಕವಾಗಿ ಸುತ್ತಲಿನ ಜೀವನಕ್ಕೆ ನೆರವಾದ ಪ್ರತ್ಯುತ್ತರ ಪಡೆದುವು.

**ಸಮಷ್ಟಿ ರೂಪ**

ಜೀವನವನ್ನು ಹೀಗೆ ಸಮಷ್ಟಿಯಿಂದ ನಾವು ನೋಡಬೇಕೆ ವಿನಾ ವ್ಯಕ್ತಿ, ವ್ಯಕ್ತಿಗಳನ್ನು ಬೇರೆ ಬೇರೆಯಾಗಿ ಎಣಿಸಿ ತಿಳಿಯುವುದು ತಪ್ಪು. ಆಗ 'ಸಾವು' ಎಂಬುದು ಅರ್ಥವಿಲ್ಲದ ಒಂದು ಮಾತೆನಿಸೀತು. 'ವ್ಯಕ್ತಿ' ಎಂಬುದು ಜೀವನದ ಶಕ್ತಿಯು ಮೊಳೆತು, ಬೆಳೆದು ವಿಸ್ತರಿಸಲು ಅನುಕೂಲವಾದ ಒಂದು ಸಾಧನ. ವ್ಯಕ್ತಿಯು ಶರೀರದಲ್ಲಿ ಈ ಉದ್ದೇಶಗಳನ್ನು ನೆರವೇರಿಸಿ ಸಾಗಿಸುವ ಚೇತನ ಇರುವಷ್ಟು ಕಾಲ ಅದು ಬದುಕುವುದು ಅವಶ್ಯ. ತನ್ನಿಂದಾಗುವ ಕೆಲಸ ಮಾಡಿ ಮುಗಿದರೆ ಆ ಶರೀರದ ಕೆಲಸವಾಯಿತು. ಅಷ್ಟರೊಳಗೇನೆ ವ್ಯಕ್ತಿಯ ಅನೇಕ ವಿಧವಾದ ಶಕ್ತಿಗಳು ಸುತ್ತಲಿನ ಅನೇಕ ಜೀವಿಗಳಲ್ಲಿ ಮೂಡಿ, ಮುಂದುವರಿಯುವುದರಿಂದ ಆ 'ವ್ಯಕ್ತಿ'ತ್ವಕ್ಕೆ ಕೊನೆಬಂದರೂ ಜೀವನಕ್ಕೆ ಕೊನೆ ಇಲ್ಲ. ಈ ಮಾತು ಸ್ವಾಭಾವಿಕವಾಗಿ ಆಗುವ ಮರಣಗಳಿಗೆ ಅನ್ವಯಿಸಬಹುದೇ

ಹೊರತು, ಎಳೆತನದ ಸಾವುಗಳಿಗೋ, ಕೊಲೆ, ಅಪಘಾತ, ಪಿಡುಗು ಇವುಗಳಿಂದ ಬರುವ ಅಕಾಲ ಮರಣಕ್ಕೋ ಅನ್ವಯಿಸೀತೇ ಎಂದು ನೀವು ಕೇಳಬಹುದು. ಮೃತ್ಯುವಿಗೆ ತುತ್ತಾಗುವ ವ್ಯಕ್ತಿಗಳೂ ಬದುಕಿರುವಷ್ಟು ಕಾಲ ಇನ್ನೊಬ್ಬರ ಜೀವನದಲ್ಲಿ ಬೆರೆತು ಪಾಲುಗಾರರಾಗುತ್ತಾರೆ. ಆದರೆ ಅವರ ವ್ಯಕ್ತಿತ್ವದ ವಿಸ್ತರಣಕ್ಕೆ ಅವರ ಶರೀರಗಳು ಸಂಪೂರ್ಣ ಸಹಾಯವಾಗುವುದಿಲ್ಲ. ಅಂಥ ವ್ಯಕ್ತಿಗಳ ಬಾಳ್ವೆ ಅಪೂರ್ಣ, ನಿಜ. ಆದರೆ ನಾವು ಈ ತೀರ್ಮಾನವನ್ನು—ಕೆಲವೊಂದು ಜೀವಿಗಳನ್ನೂ ಅವುಗಳ ಹಿತಾಹಿತಗಳನ್ನೂ, ಬೇರೆಯಾಗಿಯೇ ಎಣಿಸಿ ಮಾಡಲು ಬರುವಂತಿಲ್ಲ. ಒಟ್ಟು ಜೀವನ ಪ್ರವಾಹದಲ್ಲಿ ಲಕ್ಷೋಪಲಕ್ಷ ಜೀವ ಜಾತಿಗಳು ಸೇರಿವೆ. ಆ ಒಂದೊಂದು ಜೀವಜಾತಿಯು ಬೆಳವಣಿಗೆಯೂ ಆಗಬೇಕು. ಆಗ ಒಂದು ಜೀವಜಾತಿಯ ಸ್ವಾರ್ಥವು ಇನ್ನೊಂದು ಜೀವ ಜಾತಿಯ ಸ್ವಾರ್ಥಕ್ಕೆ ಅಡ್ಡವಾಗಿ ಬರಬಹುದು. ಮನುಷ್ಯ ಕುಟುಂಬದಲ್ಲೇ, ಒಂದು ಜೀವಕುಲದ ಸ್ವಾರ್ಥ ಇನ್ನೊಂದಕ್ಕೆ ಅಡ್ಡವಾಗಿ ಬಂದು ಸಮರಗಳಾಗಿ, ವ್ಯಕ್ತಿಯು ಅಕಾಲ ಮರಣವನ್ನು ಸಾಧಿಸಬಹುದು. ಅಂಟುರೋಗದ ಕ್ರಿಮಿಗಳಿಗೂ ಮನುಷ್ಯ ಸಮುದಾಯಕ್ಕೂ ಇಂಥ ಕಾಳಗವಾಗಬಹುದು. ಇದರಿಂದ ಮಾನವವ್ಯಕ್ತಿಗೆ ಅಹಿತ ವಾದೀತು. ಜೀವನ ಪ್ರವಾಹಕ್ಕೂ ಅಹಿತವಾಗಬಹುದು. ಆದರೆ ಇಂಥ ಅನೇಕ ಅಹಿತ ಗಳು ಜೀವನ ಪ್ರವಾಹಕ್ಕೆ ಎಚ್ಚರ ಹುಟ್ಟಿಸಿ, ಮುಂದೆ ಇವಕ್ಕೂ ಕಡಮೆ ಹಾನಿಯಾಗು ವಂತೆ ಮಾಡಬಹುದು. ಬಹು ದೊಡ್ಡ ಜೀವನ ಪ್ರವಾಹದ ಸೆಳವಿನಲ್ಲಿ ಆಗುವ ಎಷ್ಟೋ ಘರ್ಷಣೆಗಳು, ವ್ಯಕ್ತಿಗೆ ಅರ್ಥವಾಗದೆ ಹೋಗುವುದರಲ್ಲಿ ಆಶ್ಚರ್ಯವಿಲ್ಲ. ಜೀವನ ಪ್ರವಾಹದ ಹಿತವನ್ನು ಎಣಿಸುವಲ್ಲಿ ಮಾನವನಿಗೆ ಮೃತ್ಯುವಾಗಿ ಬರುವ ರೋಗಾಣು ಗಳೂ ಮುಖ್ಯವೆನಿಸಬಹುದು.

## ಸಾವು ವಿಶ್ರಾಂತಿ

ನಾವು ನಮ್ಮ ಎಟುಕಿಗೆ ಸಿಗುವ ಜೀವನವನ್ನು ತಿಳಿಯಲು ಪ್ರಯತ್ನಿಸಿದರೆ ಸಾಕು. ನಾವು ನಮ್ಮಲ್ಲಿ ಚೇತನ ತುಂಬಿರುವಷ್ಟು ದಿನ ಸುತ್ತಲಿನ ಬದುಕಿಗೆ ಆದಷ್ಟು ಕಡಮೆ ಹಾನಿಮಾಡಿ, ಜೀವನದ ಆದಷ್ಟು ಪೂರ್ಣಲಾಭ ಹೊಂದಿ, ನಮ್ಮ ಮನಸ್ಸೂ, ಕೃತಿಗಳೂ ಎಷ್ಟು ಹಿಗ್ಗಿ ವಿಸ್ತರಿಸಬಹುದೋ ಅಷ್ಟಕ್ಕೆ ಸಮನಾಗಿ ಬೆಳೆದರಾಯಿತು. ಮುಂದೆ ಶರೀರ ಕಳಚುವುದೆಂಬ ಭೀತಿ ಏತಕ್ಕೆ? ಅದರಿಂದ ಹೆಚ್ಚಿನ ಕೆಲಸವಾಗುವು ದಿಲ್ಲವೆಂದೇ ಅದು ಕಳಚುತ್ತದೆ. ದುಡಿದ ಜೀವನಕ್ಕೆ ಸಾವು ವಿಶ್ರಾಂತಿ; ಬಹುಮಾನ.

ವ್ಯಕ್ತಿಯು ತನ್ನನ್ನು ಬೇರೆಯೇ ಸ್ವತಂತ್ರಜೀವಿ ಎಂದು ಭ್ರಮಿಸಿ ನಡೆಯುವುದ ರಿಂದ, ಒಟ್ಟು ಜೀವನಕ್ಕೆ ಆಗುವ ಹಾನಿ ಅಷ್ಟಿಷ್ಟಲ್ಲ. ಆ ಪ್ರತ್ಯೇಕತನದ ಕಲ್ಪನೆಯಿಂದಾಗಿ, ಬರಿಯ ಸ್ವಂತ ದುಃಖವನ್ನು ನಿವಾರಿಸಿಕೊಂಡು ಸುಖವನ್ನು ಹೆಚ್ಚಿಸಿಕೊಳ್ಳುವುದರಲ್ಲಿ ಅವನು ಶ್ರಮಪಡುತ್ತಾನೆ. ಈ ದೃಷ್ಟಿಯನ್ನು ಸಾರುವ ತತ್ವಜ್ಞಾನ ಉಚ್ಚಧ್ಯೇಯ ವನ್ನು ಸಾರಿದಂತೆ ಕಂಡರೂ ಅದು ಮನುಷ್ಯನಲ್ಲಿ ಸಂಕುಚಿತ ಶೀಲಗಳನ್ನು ಬೆಳೆಯಿಸು ತ್ತದೆ. ವ್ಯಕ್ತಿ, ಇಂದಿನ ದಿನದಲ್ಲಿ ಬರಿಯ ತನ್ನ ಸುಖಕ್ಕಾಗಿ ಹೆಣಗಾಡುವ ಜೀವಿಯಾಗಿ

ಕಾಣಿಸಿದರೂ, ಬದುಕು ಮುಂದುವರಿದಂತೆ, ಜೀವನಪಥ ವಿಸ್ತರಿಸಿದಂತೆ ಈ ವ್ಯಕ್ತಿ ಪರ ಭಾವನೆಯು ಕಳಚೀತು. ಆ ತತ್ವವನ್ನು ಅವಲಂಬಿಸಿ ಕಟ್ಟಿದ ತತ್ವಜ್ಞಾನಗಳೂ ಆಗ ಕುಸಿದಾವು.

**ಬೇರೆ ಆತ್ಮವಿಲ್ಲ**

ವ್ಯಕ್ತಿಗೆ ಬೇರೆಯೆ ಆದ ಆತ್ಮವಿಲ್ಲ. ಆ ಆತ್ಮಕ್ಕೆ ಬೇರೆಯೆ ಆದ ಜನ್ಮವಿಲ್ಲ—ಎಂಬುದನ್ನು ನಾವು ತಿಳಿಯಬೇಕು. ಎಲ್ಲ ಜೀವಿಗಳ ಜೀವನವೂ ಅಷ್ಟು ಅನ್ಯೋನ್ಯ ಬೆರೆತದ್ದು. ಎಲ್ಲ ಕಾಲದ ಬದುಕೂ, ಅಷ್ಟು ಅನ್ಯೋನ್ಯವಾದ, ಅವಿರತವಾದ ಒಂದು ಪ್ರವಾಹ. ಹರಿಯುವ ನದಿಯೊಂದರಲ್ಲಿ ಬಿಂದಿಗೆಯೊಂದನ್ನು ಮುಳುಗಿಸಿ, ಪಾತ್ರೆಯೊಳಗಿನ ನೀರು ಬೇರೆಯೇ ಎಂದು ಭ್ರಮಿಸುವಷ್ಟು ಸಾಮ್ಯವಿದೆ. ಆದರೆ ಆ ಪಾತ್ರೆಯನ್ನು ಒಮ್ಮೆ ಹೊರಕ್ಕೆ ತೆಗೆದು, ತಿರುಗಿ ಅದೇ ತಾವಿನಲ್ಲಿ ಸುರಿದಲ್ಲಿ ಹಿಂದಿನ ಮತ್ತು ಈಗಿನ ನೀರುಗಳೆರಡೂ ಒಂದೆಯೇನು ? ಮೊದಲಿನ ಪಾತ್ರೆಯೊಳಗಣ ನೀರು, ಪಾತ್ರೆ ಕಳಚಿದ ಕ್ಷಣಕ್ಕೆ ಪ್ರವಾಹದ ಪಾಲಾಗಿ, ನೂರಾರು ಜಲಕಣಗಳ ಅಂಶವಾಗಿ ಹೋಯಿತು. ಇನ್ನೊಮ್ಮೆ ನಾವು ಪಾತ್ರೆ ಮುಳುಗಿಸಿದಾಗ ಬಂದ ನೀರಿನ ಕಣಗಳೇ ಬೇರೆ.

**ಇಂದಿನ ವ್ಯಕ್ತಿ**

ವ್ಯಕ್ತಿಗೆ ಇಂದು ದೊರೆಯುವ ಬದುಕು ಹಿಂದೆಯೂ ದೊರಕಿಲ್ಲ. ನಾಳೆಯೂ ದೊರಕುವುದಿಲ್ಲ. ಈ ವ್ಯಕ್ತಿ ಇಂದಿಗೆ ಮಾತ್ರ ಉಳಿಯುವವ. ಈ ವ್ಯಕ್ತಿತ್ವವೂ ಇಂದಿನದು. ಅದು ವ್ಯಕ್ತವಾಗುವ ಮನಸ್ಸು ಶರೀರಗಳೂ ಇಂದಿನವು. ಆದುದರಿಂದ ಇಂದು ಸಾಧಿಸುವ, ಪಡೆಯುವ ಜೀವದ ವಿಕಾಸವನ್ನು ಇಂದಿನ ಬದುಕಿನಲ್ಲೇ ನಾವು ಸಾಧಿಸಿಕೊಂಡು ಜೀವನ ಪ್ರವಾಹಕ್ಕೆ ನೆರವಾಗಬೇಕು. ಜೀವಿಗೆ ಬದುಕು ಮುಖ್ಯ. ಅದೇ ಸರ್ವಸ್ವ. ನಾಳೆ ಈ ಜೀವಿಯೂ ಇಲ್ಲ. ಈ ಬದುಕೂ ಇಲ್ಲ. ಆದುದರಿಂದಲೇ ವ್ಯಕ್ತಿಗೆ ಜೀವನ ಮಾಯೆಯೂ ಅಲ್ಲ; ವ್ಯರ್ಥವೂ ಅಲ್ಲ. ಯಾವೆಲ್ಲ ಶಾರೀರಿಕ ಮಾನಸಿಕ ಚೇತನಗಳೊಡನೆ ವ್ಯಕ್ತಿ ಹುಟ್ಟಿದನೋ, ಅವೆಲ್ಲವುಗಳೂ ಆ ವ್ಯಕ್ತಿಯ ಜೀವನಕ್ಕೆಗಾಗಿಯೇ ಇವೆ. ಅವೆಲ್ಲವುಗಳ ಉಪಯೋಗವನ್ನೂ ಅವುಗಳು ಕೊಡುವ ಅನುಭವದ ಸೊಗಸನ್ನೂ, ಜಗವೂ, ತಾನು ಅಂಗವಾಗಿರುವ ಒಟ್ಟು ಜೀವನವೂ ಉಳಿಸಿಕೊಂಡು, ವಿಶಾಲಗೊಳ್ಳುವುದೇ ಜೀವನದ ಕೆಲಸ. ತನ್ನ ಶಕ್ತಿಗಳನ್ನು ಬಡಗೊಳಿಸಿ, ಜಗತ್ತನ್ನು ತಿರಸ್ಕರಿಸಿ ಜೀವನವು ದೊಡ್ಡದಾಗಲಾರದು. ಜೀವಿಯೂ ದೊಡ್ಡವನಾಗಲಾರನು. ಇಲ್ಲಿ ಬದುಕಲಾರದವರು, ಬದುಕೇ ಒಲ್ಲೆ ಎನ್ನುವವರು, ಒಸೆಮಾ ಬೆಳೆಯಲಾರದೆ ಹೋಗಬಹುದಾದ ಚಿಕ್ಕೀರಿಯಂತೆ, ಜೀವನ ಪ್ರವಾಹಕ್ಕೆ ವ್ಯರ್ಥರಾಗುತ್ತಾರೆ.

**ವ್ಯಕ್ತಿ ಬೆಳೆಯಬೇಕು**

ವ್ಯಕ್ತಿ ಬೆಳೆಯಬೇಕು. ಜೀವನದ ಸೊಗಸುಗಳನ್ನು ಅನುಭವಿಸಬೇಕು. ಅವರಿಂದ ಕಲಿಯುವ ಪಾಠಗಳನ್ನು ಕಲಿತುಕೊಳ್ಳಬೇಕು—ಎಂದೊಡನೆ, ಸಾಲ ಮಾಡಿಯಾದರೂ ತುಪ್ಪವನ್ನು ತಿನ್ನು, ಎನ್ನುವ ಚಾರ್ವಾಕ ಮತ ಸ್ಥಾಪನೆಯಾಗುವುದಿಲ್ಲ. ಸಾಲ

ಮಾಡುವ ಚಾರ್ವಾಕನಿಗೆ ಸಾಲ ಕೊಡುವ ಸಾಲಿಗನ ಸುಖ ದುಃಖವಿಲ್ಲ. ಆತನೂ ಬದುಕಬೇಕೆಂಬ ಸಿದ್ಧಾಂತವಿಲ್ಲ. ಆದರೆ ಯಾವಾತ—ಒಟ್ಟು ಜೀವನದ ಅಂಶವಾಗಿಯೇ ತಾನೊಬ್ಬನಿದ್ದೇನೆ, ತನ್ನ ಸುಖದುಃಖಗಳು ಒಟ್ಟು ಬದುಕಿನಿಂದ ಬರುವುವು, ಒಟ್ಟು ಬದುಕಿನಲ್ಲಿ ಸೇರಿಹೋಗುವುವು—ಎಂದು ತಿಳಿಯುವಷ್ಟು ಕಾಲ—ಆ ತೆರನ ವರ್ತನೆಗೆ ಅವಕಾಶವಿಲ್ಲ.

**ಹಿಂದಿಗಿಂತ ಮುಂದು ಹಿರಿದು**

ವ್ಯಕ್ತಿ ತಾನೇ ತೀರ ಮುಖ್ಯನು ಎಂದು ತಿಳಿಯುವ ಕಾರಣವೂ ಇಲ್ಲ. ಪ್ರಪಂಚವೇ ಮರುಳು ಎಂದು ಆತ ತಿಳಿಯಬೇಕಾಗಿಯೂ ಇಲ್ಲ. ಒಬ್ಬ ಬುದ್ಧನೋ, ಯೇಸುವೋ, ಎಡಿಸನನೋ—ಇವರೆಲ್ಲ ಬದುಕಿಗೆ ಕಳೆಯನ್ನು ಕೊಟ್ಟವರೇ. ಆದರೆ ತಮ್ಮಿಂದಲೇ ಈ ವಿಶ್ವ ಬೆಳೆದಿದೆ—ಎಂದು ಹೇಳುವ ಹೆಮ್ಮೆಯ ಹಕ್ಕು ಯಾರಿಗೂ ಇಲ್ಲ. ಜೀವನ ಪ್ರವಾಹದಲ್ಲಿ ಆವಶ್ಯಕವೂ ಅನುಕೂಲವೂ ಆದ ಪರಿಸ್ಥಿತಿಗಳ ಫಲವೇ ಇಂಥ ವ್ಯಕ್ತಿಗಳು. ಸ್ವತಂತ್ರವಾಗಿ ಅವರೇ ಅವರ ಸರ್ವಸ್ವದ ನಿರ್ಮಾಣ ಕರ್ತರಲ್ಲ. ಜೀವನದ ಶಕ್ತಿ ಅಷ್ಟು ಅಗಾಧವಾಗಿದೆ. ಅದು ಅನಂತ ಹಾನಿಗಳನ್ನು ತಡೆದುಕೊಂಡು ಇಲ್ಲಿಯ ತನಕ ಹರಿದು ಬಂದಿದೆ. "ಪ್ಲೀಯೊಸೀನ್" ಮೊದಲಾದ ಯುಗಗಳಲ್ಲಿ "ಡಿನೋಸರಸ್" "ಬ್ರೊಂಟೋಸರಸ್" ಮೊದಲಾದ ಹೆಜ್ಜೀವಗಳು ಹುಟ್ಟಿ "ನಮ್ಮಂಥ ದೊಡ್ಡ ಜೀವಗಳು ಇನ್ನಾರು ?" ಎಂದು ಹೇಳಬಹುದಾದ ಒಂದು ಕಾಲವಿತ್ತು. ಇಂದಿನ ಯುಗದ ಆನೆಗಳು ಈ ಜೀವಗಳ ಮೊಣಗಂಟಿನಷ್ಟೂ ಎತ್ತರವಾಗಿಲ್ಲ. ಆದರೆ ಇವತ್ತಿನ ಆನೆಯಲ್ಲಿ ವಿಕಸಿತವಾದ ಬುದ್ಧಿಶಕ್ತಿ ಅವರದೇ ಹಿರಿಯನಾದ ಹೆಗ್ಗಾಳಿಗೂ ಇದ್ದಿರಲಿಲ್ಲ. ಹರಿಯುತ್ತಿರುವ ನದಿಯ ಮುಂದು, ಹಿಂದಿಗಿಂತ ದೊಡ್ಡದು. ಜೀವನ ಪ್ರವಾಹವೂ ಹಾಗೇನೆ ಅಲ್ಲಿ ನಾಳಿನ ಬದುಕು ನಿನ್ನೆಗಿಂತ ದೊಡ್ಡದೆಂಬದೇ ಸತ್ಯ. ನಾಡಿದ್ದಿನ ಪಾಲಿಗೆ ನಾಳೆಯೂ ಸಣ್ಣದಾಗಬಹುದು. ಹೀಗಿರುವಲ್ಲಿ, ವ್ಯಕ್ತಿ ತಾನೇ ಬಲು ದೊಡ್ಡವನೆಂದು ತಿಳಿಯಬೇಕಾಗಿಲ್ಲ.

ಒಟ್ಟು ಜೀವನ ವಿಸ್ತರಿಸುತ್ತಿರುವುದರ ಫಲವಾಗಿಯೇ ಅನೇಕ ದೊಡ್ಡ ವ್ಯಕ್ತಿಗಳು ಹುಟ್ಟುತ್ತಾರೆ. ಜೀವ ಸಮುದಾಯದಲ್ಲಿ ಎಷ್ಟೋ ಜೀವಿಗಳು ಹೆಚ್ಚಿನ ಉಪಯೋಗಕ್ಕೆ ಬಾರದೆ ಸಾಯುತ್ತವೆ. ಇನ್ನೆಷ್ಟೋ ಜೀವಿಗಳು ಹೊರೆ ಹೊರುವ ಆಳಿನಂತೆ, ಬರಿ ಜೀವನ ಶಕ್ತಿಯನ್ನಷ್ಟೆ ಉಳಿಸಿಕೊಂಡು ಸಾಯುತ್ತವೆ. ಆದರೂ—ಆಗಾಗ ಕೆಲವೊಂದು ಅಪೂರ್ವ ವ್ಯಕ್ತಿಗಳು ಹುಟ್ಟಿ, ತಮ್ಮ ಚೈತನ್ಯದಿಂದ ನೆರೆಕರೆಯ ಜೀವನಕ್ಕೆ ಹುಮ್ಮಸ ಕೊಡುತ್ತಾರೆ. ಹೆರವರ ಬದುಕು ವಿಕಸಿಸುವುದಕ್ಕೆ ಕಾರಣರಾಗುತ್ತಾರೆ. ಅವರ ವಿಚಾರ ಸರಣಿಯ ಪರಿಣಾಮ ಒಟ್ಟು ಬದುಕಿಗೆ ದೊರೆಯುತ್ತದೆ. ಆದರಂತೆ ಒಟ್ಟು ಜೀವನಕ್ಕೆ ಹಾನಿಕಾರಕ ಶಕ್ತಿಗಳನ್ನು ಸಲ್ಲಿಸುವ 'ಜಂಗೀಸ್ ಖಾನರು' 'ಹಿಟ್ಲರರು' ಇದ್ದೇ ಇರುತ್ತಾರೆ. ಒಟ್ಟು ಜೀವನದ ಅನೇಕ ಬಗೆಯ ಕೊರತೆಗಳೆ ಪ್ರತಿಬಿಂಬಿಸಿ, ಇಂಥ ವ್ಯಕ್ತಿಗಳ ನಿರ್ಮಾಣವಾಗುತ್ತದೆ. ಬುದ್ಧನಂಥ ವ್ಯಕ್ತಿಗಳು ಜೀವನ ರಥದ ಗಾಲಿಯನ್ನು

ನಾಲ್ಕು ಸುತ್ತುಗಳಷ್ಟು ಮುಂದೆ ಸೆಳೆದರೆ, ಜಂಗೀಸ್‌ಖಾನರು ಒಂದೆರಡು ಸುತ್ತುಗಳಷ್ಟು ಅದನ್ನು ಹಿಂದೆ ಸೆಳೆಯುತ್ತಾರೆ. ಲಕ್ಷ ವರುಷಗಳ ಹಿಂದಿನ ಗವಿ ಮನುಷ್ಯ ಇಂದಿನ ಮನುಷ್ಯನಲ್ಲಿ ಫಲಗೊಂಡುದನ್ನು ಕಾಣುವಾಗ, ಜೀವನ ಪ್ರವಾಹ ಮುಂದುವರಿದಿದೆ ಎಂದೇ ಹೇಳಬೇಕು.

**ಅನಂತ ಜೀವನದ ವರ್ತಮಾನದ ದೃಶ್ಯ**

ಈ ಪ್ರವಾಹದ ಅಂಶವಾದ ವ್ಯಕ್ತಿ ಜೀವನವನ್ನು ನಾವು ಏನೆಂದು ಕರೆಯಬೇಕು ? ಅದು ಬೇರೆಯೇ ಶರೀರದಲ್ಲಿ ವ್ಯಕ್ತವಾಗುತ್ತಿದೆಯಾದರೂ ಅದು ಸ್ವತಂತ್ರವಲ್ಲ. ಅದರಲ್ಲಿ ಸ್ವತಂತ್ರವೆನಿಸಿದ ಮನಸ್ಸು ಕಾಣಿಸಿದರೂ ಅಷ್ಟು ನಿರಂಕುಶ ಮನಸ್ಸು ಅಲ್ಲ. ಆ ಶರೀರ ದಲ್ಲಿ ವ್ಯಕ್ತವಾಗುವ ಗುಣ, ಕ್ರಿಯೆಗಳನ್ನು ಹಿಂದಿನ ಯುಗಕ್ಕೆ ಬಿಗಿಯುವಂಥ ಸ್ವಭಾವ, instinct) ವರ್ತನೆ (behaviour) ಇವುಗಳು ಮಾತ್ರವೂ ಅದಲ್ಲ. ಇವುಗಳಿಂದೆಲ್ಲ ವ್ಯಕ್ತಿ ಬದ್ಧವಾದರೂ ಅವುಗಳಿಂದಲೂ, ಸುತ್ತಲಿನ ಪರಿಸ್ಥಿತಿಯಿಂದಲೂ ಸ್ವಂತ ಪ್ರೇರಣೆ ಯಿಂದಲೂ ಕಾಣಿಸುವ ಈ ಜೀವವನ್ನು ವ್ಯಕ್ತಿ ಎನ್ನಿರಿ, ಆತ್ಮ ಎನ್ನಿರಿ, ಇನ್ನಾವುದೇ ಹೆಸರಿನಿಂದ ಕರೆಯಿರಿ—ಅದು ಅನಂತ ಜೀವನದ ವರ್ತಮಾನ ಕಾಲದ ಒಂದು ಚೇತನ ಮಯ ದೃಶ್ಯವೆನ್ನಬೇಕಷ್ಟೆ.

## ೯ ಇಂದು ದೊಡ್ಡದು—?

**ಜೀವನದ ಉದ್ದೇಶವೇನು ?**

ಮನುಷ್ಯನನ್ನು ಸಾವು ಹುಟ್ಟುಗಳ ಪ್ರಶ್ನೆಗಳು ಬೆರಗುಗೊಳಿಸಿದಷ್ಟೇ ಅಪಾರವಾಗಿ ಸೃಷ್ಟಿ ವೈಚಿತ್ರ್ಯವು ಬೆರಗುಗೊಳಿಸುತ್ತದೆ. ತಾನೇಕೆ ಹುಟ್ಟಿದ್ದೇನೆ, ತಾನೇಕೆ ಸಾಯುತ್ತಿದ್ದೇನೆ—ಎಂಬ ಪ್ರಶ್ನೆಯನ್ನು ಕುರಿತು ಅವನು ವಿಚಾರಿಸಿ ತನ್ನ ಜೀವನದ ಉದ್ದೇಶವೇನು ಎಂಬ ತರ್ಕಕ್ಕೆ ಹೊರಡುವಂತೆ ಅವನು ಪ್ರಪಂಚದ ಉದ್ದೇಶವೇನು ಎಂಬ ತರ್ಕಕ್ಕೂ ಹೊರಡುತ್ತಾನೆ. ತನ್ನ ಬದುಕನ್ನು ಕುರಿತು ವ್ಯಕ್ತಿಯಾದವನು ಪ್ರಶ್ನೆ ಮಾಡುವುದು ಸ್ವಾಭಾವಿಕ. ತಾನು ಬದುಕಿರುವಷ್ಟು ಮಿತ ಕಾಲದಲ್ಲಿ ಹೇಗಿರಬೇಕು. ಎಂದು ವಿಚಾರ ಮಾಡುವುದು ಅವನ ಹದ್ದಿಗೆ ಸಿಗಬಹುದಾದ ವಿಷಯ. ಆದರೆ ಅದೇ ಉಸಿರಿನಲ್ಲಿ–ಅನಂತವಾದ ವಿಶ್ವದ ವ್ಯಾಪಾರವನ್ನೇ "ಇದರ ಉದ್ದೇಶವೇನು ?" ಎಂದು ಕೇಳುವುದು, ತನ್ನ ಅಳತೆಗೆ ಮೀರಿದ ಕೆಲಸಕ್ಕೆ ತೊಡಗಿದಂತೆ. ತನ್ನ ಜೀವನ ಪ್ರಪಂಚಕ್ಕೆ ಸಂಬಂಧಿಸಿದ ವಿಷಯಗಳನ್ನು ತಿಳಿಯುವಷ್ಟು ಸುಲಭದಲ್ಲಿ ಪ್ರಪಂಚದ ರಹಸ್ಯವನ್ನು ತಿಳಿದಾನೆಯೆ ? ಎಷ್ಟೋ ವ್ಯಕ್ತಿಗಳು—ಪ್ರಪಂಚದ ಗುರಿ ಏನು ?—ಎಂದು ತಿಳಿಯುವುದರಲ್ಲೇ ಕಾಲ ಕಳೆದುದುಂಟು. ಹಾಗೆ ತಿಳಿಯುವುದೇ ಜೀವನದ ಉದ್ದೇಶ–ಎಂದು ನಂಬಿದವರುಂಟು. ಇವುಗಳಲ್ಲಿ–ಮೊದಲನೆಯ ತರ್ಕದಿಂದ ಎರಡನೆಯ ಮಾತು ಸಿದ್ಧನಾಗುವುದಿಲ್ಲ.

**ಮಿತ–ಜ್ಞಾನಿ**

ಈ ವಿಷಯಕ್ಕೆ ಗಮನ ಕೊಡುವ ಮೊದಲು—ವ್ಯಕ್ತಿಯು ವಿಶ್ವ ವ್ಯಾಪಾರದ ಪೂರ್ಣ ರಹಸ್ಯವನ್ನು ತಿಳಿಯಲು ಶಕ್ತನೆ ?—ಎಂದು ಪ್ರಶ್ನೆ ಮಾಡುವ. ಆ ಪ್ರಥಮದಲ್ಲಿ ವಿಶ್ವವ್ಯಾಪಾರವು ನಿರ್ದಿಷ್ಟವಾದ ಇಂಥದೇ ಗುರಿಯನ್ನು ಸೇರುವುದುಂಟೇ ಎಂಬ ಪ್ರಶ್ನೆಯು ಉಂಟಾಗುತ್ತದೆ. ಮನುಷ್ಯ ಎಲ್ಲಕ್ಕೂ ಮೊದಲು, ತನ್ನ ಅಳತೆಯೇನು, ತನ್ನ ಶಕ್ತಿಗಳ ಅಳತೆಯೇನು, ಎಂದು ವಿಚಾರಿಸಬೇಡವೆ ? ವ್ಯಕ್ತಿಯು ತನ್ನ ಮನಸ್ಸಿನ ಆಳವನ್ನೇ ತಿಳಿಯುವುದು ಕಷ್ಟವಾದ ಸಂಗತಿ. ಅದಕ್ಕೆ ಮೊತ್ತಮೊದಲು ತನ್ನ ಯಾವತ್ತು ಸ್ವಾರ್ಥಗಳನ್ನೂ ಸಿದ್ಧಾಂತಗಳನ್ನೂ ಬದಿಗಿರಿಸಬೇಕಾಗುತ್ತದೆ. ತನಗೇ ಅರಿವಿಲ್ಲದಂತೆ, ತನ್ನಲ್ಲಿ ಮನೆಮಾಡಿಕೊಂಡ ಅನೇಕ ಮೊಂಡಶೀಲಗಳನ್ನೂ, ತೀರ್ಮಾನಗಳನ್ನೂ, ತರ್ಕಸರಣಿಯನ್ನೂ ದೂರ ಇರಿಸಬೇಕಾಗುತ್ತದೆ. ಹಾಗೆ ಮಾಡಿದ ಮೇಲೆಯೂ–ವಿಶ್ವ ಜೀವನದಂಥ, ಕಲ್ಪನೆಯ ಎಟುಕಿಗೂ ಮೀರಿದ ವಿಷಯವನ್ನು ತಿಳಿಯಲು, ಅವನ ಬದುಕು ಎಷ್ಟು ವಿಸ್ತಾರವಾಗಿರಬೇಡ ? ವಿಶ್ವದ ಅನೇಕ ತಾರೆ,

ಸೂರ್ಯ, ಗ್ರಹಗಳ ಸಮುದಾಯದಲ್ಲಿ ಆವನಿರುವ ಭೂಮಿ ಒಂದು ದೂಳಿನ ಕಣ. ಆ ಭೂಮಿಯಲ್ಲಿ ವಾಸಿಸುವ ಕೋಟ್ಯಾನುಕೋಟಿ ಜೀವಿಗಳಲ್ಲಿ ಮಾನವರು ಒಂದು ಸಣ್ಣ ಪಂಗಡ. ಈ ಮನುಷ್ಯ ವರ್ಗದಲ್ಲೇ ಬೇರೆ ಬೇರೆ ಬಳಗಗಳು, ಬೇರೆ ಬೇರೆ ಆವರಣ ದಲ್ಲಿ, ಕಾಲದಲ್ಲಿ ಬೆಳೆದು, ಅನೇಕ ಬಗೆಯ ಸಭ್ಯತೆ, ಸಂಸ್ಕೃತಿಗಳನ್ನು ಕಟ್ಟಿ ಬಂದಿವೆ. ಅಂಥ ನೆಲಗಟ್ಟಿನ ಮೇಲೆ—ವ್ಯಕ್ತಿಯಾದವನ ಶೀಲವೂ, ಮನಸ್ಸೂ, ಜೀವನವನ್ನು ಕುರಿತಾದ ತೀರ್ಮಾನಗಳೂ ಉತ್ಪನ್ನವಾಗಿವೆ. ತಾನೆಷ್ಟೇ ದೊಡ್ಡವನಿರಲಿ, ಒಬ್ಬ ಮನುಷ್ಯ ಅವೆಲ್ಲವುಗಳನ್ನು ತಿಳಿಯಬಲ್ಲನೆ? ಜೀವನ ಪ್ರವಾಹದ ಉದ್ದೇಶವನ್ನು ಕುರಿತು ಪ್ರಶ್ನೆ ಮಾಡುವ ಮನುಷ್ಯ—ಆ ಪ್ರವಾಹ ಬರಿಯ ಮನುಷ್ಯರಿಂದಲೆ ತುಂಬಿದೆ ಎಂದು ತಿಳಿದರೆ ಹೇಗೆ? ಅಥವಾ ಆ ಪ್ರವಾಹದಲ್ಲಿ ಪರಿಪಕ್ವಕ್ಕೆ ಬಂದವನು ಮನುಷ್ಯನು ಮಾತ್ರ ಎಂದು ನಿರ್ಧರಿಸಿದರೆ ಹೇಗೆ? ಮನುಷ್ಯ-ಜೀವಿ ಈ ಪ್ರವಾಹದ ಒಂದು ತೀರ ಕಿರಿಯ ಅಂಶ. ಅವನ ಬಗೆಗೂ, ಅರಿವಿಗೂ ಹೊರಗಾದ ಜೀವಗಳು ಅಸಂಖ್ಯಾತವಾಗಿ ಇವೆ. ಈ ಎಲ್ಲ ಒಟ್ಟು ಜೀವನ ಪ್ರವಾಹದ ರಹಸ್ಯ ಇಲ್ಲವೆ ಉದ್ದೇಶ ಸಾರ್ಥಕವಾಗಿ ತಿಳಿಯಲು ಪ್ರಯತ್ನಿಸುವ ಮನುಷ್ಯನ ಜ್ಞಾನದ ವಿಸ್ತೃತಿ ಎಷ್ಟು?

**ಅತ್ಯಲ್ಪ ಪರಿಚಯ**

ವಿಶ್ವವ್ಯಾಪಾರದಲ್ಲಿ ಜೀವಕೋಟಿಗಳು ಎಷ್ಟೇ ಅಗಾಧವಾದ ಚಮತ್ಕೃತಿಗೆ ಕಾರಣ ವಾಗಿದ್ದರೂ, ಅದರಲ್ಲಿ ನಿರ್ಜೀವ ಜಗತ್ತಿನ ವ್ಯಾಪಾರವೂ ಅಷ್ಟೇ ಅಗಾಧವಾಗಿದೆ. ಇಲ್ಲವೆ ಅದಕ್ಕೂ ಮಿಗಿಲಾಗಿರಬಹುದು. ಅವು ಜಡಜಗತ್ತಿನ ಅಂಶಗಳೆಂದೆನಿಸಿಕೊಂಡರೂ, ಅವಕ್ಕೆ ಸ್ವಂತ ಮನಸ್ಸಿಲ್ಲ ಎಂಬುದು ನಿಜವಾದರೂ, ಆ ಜಡಜಗತ್ತಿನ ಮತ್ತು ನಮ್ಮ ಕುಲವನ್ನೇ ಕುಣಿಸುತ್ತಿವೆ—ಆ ಶಕ್ತಿಗಳು. ಇಂಥ ಚೈತನ್ಯಗಳ ಮೇಲೆ ಮಾನವನ ಹತೋಟಿಯೆಂಬುದಿಲ್ಲ. ಯಾವುದಾದರೊಂದು ದಿನ, ತಾರೆಗಳ ಪಥದಲ್ಲಿ ಬದಲಾವಣೆ ಯಾದರೆ, ಈ ನಮ್ಮ ಭೂಮಿಯು ಅರೆ ನಿಮಿಷದಲ್ಲಿ ಪುಡಿಯಾಗಬಹುದು. ಅಂಥ ವಿಧ್ವಂಸಕ್ಕೆ ಕಾರಣವಾಗುವ ಶಕ್ತಿಗಳು ತಾರೆಗಳ ರಾಜ್ಯಕ್ಕೆ ಸೇರಿದುವು. ನಮ್ಮ ಅಳವಿಗೆ ಮೀರಿದುವು. ಇವೆಲ್ಲವನ್ನೂ ಎಣಿಸಿಕೊಂಡರೆ–ಮಹಾ ಸಮರವೊಂದರಲ್ಲಿ ಭಾಗಿಯಾಗುವ ಸಾಮಾನ್ಯ ಸಿಪಾಯಿಗಿಂತಲೂ ಕಡೆ, ಮನುಷ್ಯ ವ್ಯಕ್ತಿ. ಕಳೆದ ಮಹಾ ಸಮರದ ವಿಷಯವನ್ನೇ ನೆನೆದು ಯೋಚಿಸುವ. ಸಾಮಾನ್ಯ ಸೈನಿಕನಿಗೆ ಹಿಟ್ಲರನ ಇಲ್ಲವೆ ಚರ್ಚಿಲನ, ಸ್ಟೇಲಿನನ ಯುದ್ಧನೀತಿಯ ಪರಿವೆಯಾದರೂ ಉಂಟಾಗಬಹುದೇನು? ತಾನೇ ಸೇರಿಕೊಂಡಿರುವ ಭೂಪಡೆಯ ಗಮನ ನಿರ್ಗಮನವನ್ನು ಅವನು ಎಣಿಸ ಬಲ್ಲನೆ? ಅವನ ಮಿತ ಜೀವನದಲ್ಲಿ ತನ್ನ ಪಾಲಿಗೆ ಬಂದ ಕೆಲಸವನ್ನು ಅವನು ನಿರ್ಧರಿಸ ಬಹುದೇ ಹೊರತು, ಮಹಾಯುದ್ಧದ ವಿವಿಧ ಚಲನೆಗಳನ್ನು ಅವನು ನಿರ್ಣಯಿಸಲಾರ. ಈ ಜೀವನ ಪ್ರವಾಹವು ಈ ಸಮರಕ್ಕಿಂತ ದೊಡ್ಡದಾದ, ಭವ್ಯವಾದ, ವಿಸ್ಮಯಕರ ವಾದ ಪ್ರಶ್ನೆ. ಇಲ್ಲಿ ಪಾತ್ರವಹಿಸುತ್ತಿರುವ ಅನೇಕ ಶಕ್ತಿಗಳ ತಿಳಿವೂ ಸಂಪರ್ಕವೂ ಮನುಷ್ಯ ವ್ಯಕ್ತಿಗೆ ಆಗುತ್ತಲಿಲ್ಲ. ಅವನ ಪರಿಚಿತ ಪ್ರಪಂಚದಲ್ಲೂ, ಒಂದು ಜೀವಿಯು

ಹೇತು ಇನ್ನೊಂದು ಜಾತಿಯ ಜೀವಿಗೆ ತಿಳಿದಿಲ್ಲ. ಹುಲಿಯ ಬಾಳ್ವೆಯ ಹೇತು ಹೋತಕ್ಕೆ ತಿಳಿಯದು. ಹೋತದ ಜೀವನದ ಹೇತು ಹುಲಿಗೆ ತಿಳಿಯದು. ಹುಲಿ ಏಕೆ ಬದುಕಿದೆ–ಎಂದು ಮನುಷ್ಯ ತಿಳಿಯಲಾರ. ಅವವುಗಳ ನಿಕಟ ಪರಿಚಿತಿಗೆ ಬೇಕಾದ ನುಡಿ ಇಲ್ಲ ; ಆತ್ಮೀಯತೆಯಿಲ್ಲ.

**ನಾಳಿನ ಬದುಕಿನ ಅರಿವು**

ವಿಶ್ವ ಜೀವನದ ಉದ್ದೇಶವನ್ನು ತಿಳಿಯಲು ಹಂಬಲಿಸುವ ವ್ಯಕ್ತಿ ಮಿಕ್ಕ ಜೀವಿಗಳೊಡನೆ ಸ್ನೇಹ ಸಂಪರ್ಕಗಳನ್ನು ಬೆಳೆಯಿಸಿಕೊಂಡಿರಬೇಕು. ತನಗೆ ಉಪಯುಕ್ತವಾಗಿರಲಿ ಹಾನಿಕಾರಿಯಾಗಲಿ–ಎಲ್ಲ ತೆರನ ಜೀವಿಗಳ ರೀತಿ, ಬಯಕೆ, ಸುಖದುಃಖಗಳನ್ನು ತಿಳಿಯಬೇಕು. ವ್ಯಕ್ತಿಯಾದವನು ಬರಿಯ ತನ್ನೊಬ್ಬನ ಬದುಕಿನ ಉದ್ದೇಶವನ್ನು ತಿಳಿಯಬೇಕಾದರೂ ಈ ಬಗೆಯ ನೋಟ ಆವಶ್ಯಕ. ತನ್ನ ಬದುಕಿನೊಡನೆ ಹೊಂದಿರುವ ಇತರ ಜೀವಕೋಟಿಗಳಲ್ಲಿ ಸಾಧ್ಯವಾದಷ್ಟು ಸಮರಸತೆಯಿಂದ ಬೆರತು ಅವುಗಳ ಹಿತಾಹಿತವನ್ನು ಚಿಂತಿಸುವಷ್ಟು ಸಾಹಸಪಡಬೇಕು. ಹಾಗೆ ಯತ್ನಿಸಿದಲ್ಲಿ ತನ್ನ ಸುತ್ತಲಿನ ಬದುಕಿನ ತೀರ ಕೊನೆಯ ಹಂತ ತಿಳಿಯದೆ ಹೋದರೂ, ಇಂದಿನ ಬಾಳ್ವೆಗೆ ತಗುಲಿಕೊಂಡಿರುವ ನಾಳಿನ ಬದುಕಿನ ಅರಿವಾದರೂ ಆದೀತು. ಉಳಿದೆಲ್ಲ ಜಗತ್ತು ಮಿಥ್ಯವೆಂದು ಸಾರುವ ವ್ಯಕ್ತಿಗೆ ಇಷ್ಟು ಮಿತವಾದ ರಹಸ್ಯವೂ ತಿಳಿಯಲಾರದು.

ಈಗ ನಾವು ಪ್ರಪಂಚದ ಕಟ್ಟಕಡೆಯ ಗುರಿಯ ವಿಚಾರವಾಗಿ ಯೋಚಿಸುವ. ಹಿಂದೆ ಹೇಳಿದ ರೀತಿಯಲ್ಲಿ ಒಬ್ಬ ವ್ಯಕ್ತಿಯು ಜೀವನ ಪ್ರವಾಹದೊಡನೆ ಬೆರೆಯುತ್ತಾನೆ ಎನ್ನುವ. ಆಗಲೂ ಅದನ್ನು ತಿಳಿಯಲು ಬಂದೀತೇ ?

**ಕಾಣಲಾರದ ದೂರ**

ಈ ಕಾರಣ ಒಂದರಿಂದಲೇ ಅಲ್ಲ–ನಮ್ಮ ಭೂಮಿಯಲ್ಲಿ ಜೀವಗಳು ಕಾಣಿಸಿಕೊಂಡು ಎಷ್ಟೋ ಕೋಟಿಗಟ್ಟಲೆ (೩೦೦,೦೦೦,೦೦೦) ವರ್ಷಗಳಾದುವೆಂದು ವಿಜ್ಞಾನಿಗಳು ಹೇಳುತ್ತಾರೆ. ಆ ಜೀವನ ವಿಕಾಸದಲ್ಲಿ ಮನುಷ್ಯ ಕಾಣಿಸಿಕೊಳ್ಳುವುದಕ್ಕೇನೆ ಎಷ್ಟೋ ಲಕ್ಷಾಂತರ ವರ್ಷಗಳಾದುವಂತೆ. ಭೂಮಿಯು ಜೀವನದ ಪ್ರಥಮ ಹುಟ್ಟಿನ ದಿನವಲ್ಲಿ, ಇದ್ದ ಯಾವುದಾದರೊಂದು ಜೀವಿಯು ತನ್ನಿಂದ ಮುಂದೆ ೩೦೦,೦೦೦,೦೦೦ ವರ್ಷಗಳ ಅನಂತರ ಮನುಷ್ಯ ಜೀವಿ ಹುಟ್ಟುತ್ತಾನೆ ಎಂದು ಆಗ ತೀರ್ಮಾನಿಸುವುದು ಸಾಧ್ಯವೇ ? ಅದರಷ್ಟೇ ನಿಷ್ಫಲ ಪ್ರಶ್ನೆ–ಇಂದಿನ ಮಾನವನದು. ನಾಳೆ ಲಕ್ಷಾವಧಿ ವರ್ಷಗಳ ಬಳಿಕ ಪ್ರಪಂಚ ಹೇಗಿದ್ದೀತು ಎಂದು ಕೇಳುವ ಪ್ರಶ್ನೆ. ಮೊನ್ನಿನ ಜೀವನ ನಿನ್ನೆಯದಕ್ಕೆ ಎಡೆಮಾಡಿಕೊಟ್ಟಿತು. ನಿನ್ನಿನದು ಇಂದಿನ ರೂಪಕ್ಕೆ ಕಾರಣ. ಇಂದಿನದು ನಾಳೆಯ ಬದುಕಿಗೆ ನೆರವು. ನಾಳಿನದು ನಾಡಿದ್ದಿಗೆ. ಇಂದಿನ ಸ್ಥಿತಿಯನ್ನು ಕಂಡು ಒಂದೆರಡು ನಾಳೆಗಳ ತನಕ ಜೀವನ ಹೇಗಿರಬಹುದು ಎಂದು ಊಹಿಸಬಹುದು. ಬಹು ನಾಳೆಗಳ ಆಚೆ ಏನಾಗುವುದೆಂದು ಹೇಳಲು ಶಕ್ಯವೇ ? ಈ ಒಂದೊಂದು ನಿನ್ನೆಯನ್ನೂ ಒಂದೊಂದು ನಾಳೆಯನ್ನೂ ಕೋಟಿ ವರ್ಷಗಳ ಅಳತೆಯಲ್ಲಿ

ಅಳೆಯಬೇಕಾದ ಪ್ರಸಂಗವಿರುವಾಗ, ತೀರ ನಾಳಿನ ಆಚೆಗೆ ಜೀವನ ಹೇಗಿದ್ದೀತು? ಹೇಗೆ ಕೊನೆಗೊಂಡೀತು—ಎಂಬ ಪ್ರಶ್ನೆ, ನಮ್ಮ ಅಳತೆಗೆ ಮೀರಿದ್ದಲ್ಲವೆ! ಮಾತ್ರವಲ್ಲ–ಅದು ಸಿದ್ಧಾಂತವಾಗಿ ಮಾಡಿಟ್ಟ ನಿರ್ಣಯವಲ್ಲ. ನಿಸರ್ಗವೇ ತನ್ನ ನಾಳಿನ ಬದುಕನ್ನು ಊಹಿಸಬಲ್ಲ ಶಕ್ತಿ. ಅದರ ಮುಂದಿನ ದಿನದ ದಿಕ್ಕನ್ನದು ಅರಸಬಹುದು. ಅಷ್ಟನ್ನು ಬಿಟ್ಟು ಮತ್ತೂ ಆಚಿನದನ್ನು ಅದೇನೆ ಅಳೆಯಲಾರದು. ಪ್ರಪಂಚವು–ಕಾಲಮಾನದ ವಿಸ್ತೃತ ಪಥದಲ್ಲಿ ಇಂದು, ಒಂದು ಬಿಂದುವಾಗಿದೆ. ಅದರ ಹೆಜ್ಜೆಯ ಜಾಡು ಬರಿಯ ನಿನ್ನೆ ಮೊನ್ನಿನ ತನಕದ್ದು. ಅಷ್ಟೊಂದು ಅದಕ್ಕೆ ಗೋಚರಿಸಬಹುದು. ನಾಳಿನ ದಾರಿಯ ಒಲವನ್ನು ತುಸುವೇ ಮುಂದುವರಿಸಿ, ಅದು ಹೇಗೆ ಹೋದೀತು, ಎಂದು ಊಹಿಸ ಬಹುದು. ಆದರೆ ಬಹು ಆಚಿನ ನಾಳೆಯೆಂಬುದು ಆ ಅನಂತ ಪಥದಲ್ಲಿ ಇನ್ನೂ ರೂಪಿತ ವಾಗಬೇಕಷ್ಟೆ. ಎಷ್ಟೋ ನಾಳಿನ ಚರ್ಯೆಗಳಿಂದ ಅದು ನಿರ್ಧಾರವಾಗಬೇಕು.

**ಜೀವನದ ಗುರಿ**

ಒಟ್ಟು ಜೀವನದ ಗುರಿ ಏನು—ಎಂಬುದು ತೀರ ವಿಚಿತ್ರವಾದೊಂದು ಸಮಸ್ಯೆ. ಅದರಲ್ಲಿ ವ್ಯಕ್ತಿ ಎಲ್ಲಿಗೆ ಹೋಗಿ ಮುಟ್ಟುತ್ತಾನೆ—ಅಥವಾ ಒಟ್ಟು ಜೀವನ ಎಲ್ಲಿಗೆ ಹೋಗಿ ಮುಟ್ಟುತ್ತದೆ—ಎಂಬುದು ಮಾಡಿಟ್ಟ ನಿರ್ಧಾರವಲ್ಲ. ಬಹುದೂರದ ನಾಳೆಯ ಗುರಿಯನ್ನು ತಿಳಿಯಲು ನಮ್ಮ ಶಕ್ತಿಗಳು ಸಾಲದು ಎಂದಿಷ್ಟೇ ಹೇಳಬಹುದು. ಆ ದಾರಿ ಯನ್ನು ಬಿಡುವ. ಆದರೂ ನಮ್ಮ ಬದುಕು ಹಿಂದೆ ನಡೆದುದರ ಪುನರಾವರ್ತನೆ ಎಂದು, ನಾವು ತೀರ್ಮಾನಿಸುವಂತಿಲ್ಲ. ಅದು ಯಂತ್ರವೊಂದರ ಗಾಲಿಯಂತೆ ತಿರುಗಿ ತಿರುಗಿ ಹೊರಟ ಸ್ಥಾನಕ್ಕೇ ಬರುವುದೂ ಕಾಣಿಸದು. ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಒಂದು ಘಟನೆಯಂತೆ, ಇನ್ನೊಂದು ಘಟನೆ ಇಲ್ಲ. ಒಂದು ಜೀವದಂತೆ ಇನ್ನೊಂದು ಜೀವವಿಲ್ಲ. ಒಂದು ದಿನದಂತೆ ಇನ್ನೊಂದು ದಿನವಿಲ್ಲ. ನಿನ್ನಿನಂತೆ ಇಂದು ಕಂಡರೂ, ನಿನ್ನೆ ಬೇರೆ, ಇಂದು ಬೇರೆ—ಎಂಬಷ್ಟು ವ್ಯತ್ಯಾಸದಿಂದ ಕೂಡಿದ ಬಾಳು ನಮ್ಮದು. ತೀರ ಹತ್ತಿರ ದಿಂದ ನೋಡುವಾಗ ಇಲ್ಲಿ ವ್ಯತ್ಯಾಸಕ್ಕಿಂತ ಸಾಮ್ಯವೇ ಹೆಚ್ಚಾಗಿ ಕಾಣುತ್ತದೆ. ಅವುಗಳ ಲ್ಲಿನ ಪ್ರತ್ಯೇಕತೆ, ನಾವೀನ್ಯ ನಮಗೆ ಕಾಣಿಸದೆ ಹೋಗಬಹುದು. ಆದರೆ, ಬಹು ಹಿಂದಿನ ದಿನದೊಡನೆ 'ಇಂದ'ನ್ನು ಹೋಲಿಸಿದಾಗ, ಜೀವನದ ದಾರಿ ತುಸು ತುಸುವಾಗಿ ಬವಲಿಸಿ, ಹೆಚ್ಚಿನ ವ್ಯತ್ಯಾಸ ಹೊಂದುತ್ತ ಬಂದುದನ್ನು ಕಾಣುತ್ತೇವೆ. ಯುಗಮಾನಗಳ ಅಳತೆಯಿಂದ ಸಾಗುವ ಈ ಜೀವನ ಪ್ರವಾಹದಲ್ಲಿ ವ್ಯತ್ಯಾಸ ಕಾಣಬೇಕಾದರೆ, ಮನುಷ್ಯ ಮಾನದ ಅಳತೆಯ ಕೋಲು ಸಾಲದಾಗುತ್ತದೆ. ವಿಸ್ತೃತವಾದ ಜೀವ ಜೀವಿಗಳ ವಿಕಾಸ, ಐತಿಹಾಸಿಕ ಪರಿವರ್ತನೆ, ಸಂಸ್ಕೃತಿ ನಾಗರಿಕತೆಗಳ ಹುಟ್ಟು ಸಾವುಗಳ ವಿಸ್ತಾರ ಕ್ಷೇತ್ರ ವನ್ನು ನಾವು ನಿಲುಕಿ ನೋಡಿದಾಗ ಮಾತ್ರ, ಬಂದಿರುವ, ಆಗಿರುವ ವ್ಯತ್ಯಾಸಗಳು, ಉನ್ನತಿ, ಅವನತಿಗಳು—ನಮಗೆ ಹೊಳೆಯುತ್ತವೆ. ಆ ಮಾನದಿಂದ ಅಳೆದಲ್ಲಿ, ಜೀವನದ ಗುರಿ ಪೂರ್ಣವಾಗುವುದಕ್ಕೋ, ಮಾನವನು ತನ್ನ ವ್ಯಕ್ತಿ ಪೂರ್ಣತೆಯನ್ನು ಹೊಂದುವು ದಕ್ಕೋ, ಯುಗಮಾನದ ಪರಿಮಾಣವೇ ಬೇಕಾಗುವಂತೆ ತೋರುತ್ತದೆ. ನಮ್ಮ ಮಿತ

ಆಯುಷ್ಯದ ಅಳತೆ,-ಶಕ್ತಿಗಳ ನಿಲುಕಿಗೆ ಅದು ದೂರವಾದುದು. ನಿಲುಕಿಗೆ ಸಿಗು ವಷ್ಟನ್ನು ತಿಳಿದು, ಅದರಿಂದ ಪರಿವರ್ತನೆಗೊಂಡು, ತುಸುವೇ ಮುಂದುವರಿಯಬಹು ದಾದ ನಾವು ಅಷ್ಟನ್ನೇ ಮಾಡಬೇಕು. ಅದಕ್ಕೂ ಮುಂದೆ ಚಾಚುವ ಕೈಯು ಚಂದ್ರ ನನ್ನು ಹಿಡಿಯಲು ಹೋದ ಕೈಯಂತೆಯೇ ಸರಿ.

**ಇಂದು ದೊಡ್ಡದು**

ಕಟ್ಟಕೊನೆಯ ಗುರಿಯನ್ನು ಸೇರಿದರೇನೆ ಸುಖ ಎಂಬುದು ಅಲ್ಪಾಯುವಾದ ಮನುಷ್ಯನು—ತನ್ನ ನಿತ್ಯ ಲಾಭ, ಹಾನಿ, ಕಷ್ಟಗಳ ಮೇಲಿಂದ ಕಟ್ಟಿದ ಆಸೆಯಾಗಿದೆ. ಇದಕ್ಕಿಂತ—ಜೀವನವನ್ನು ಪ್ರಜ್ಞಾಪೂರ್ಣವಾಗಿ ನಡೆಸುವ ಚೈತನ್ಯಮಯ ಬಾಳ್ವೆಯೇ ನಮಗೆ ಹೆಚ್ಚಿನ ಆದರ್ಶವಾಗಬಾರದೇಕೆ ? ನಾಳಿನ ವಿಶ್ರಾಂತಿಗಿಂತ ಇಂದಿನ ಬದುಕೇ ನಮಗೆ ಹಿರಿದೆನಿಸಬಾರದೇಕೆ ? ನಾಳೆ ಏನೂ ಮಾಡದೆ ಇರುವ, ಏನೂ ಆಗದೆ ಇರುವ —ದಿನಕ್ಕಿಂತ ಇಂದು ಏನೂ ಆಗಿರುವ ಏನೂ ಮಾಡುತ್ತಿರುವ ದಿನ ಹಿರಿಯದೆಂದು ತಿಳಿಯಬಾರದೇಕೆ ? ನಾಳೆ ಏನೆಂಬ ಪ್ರಶ್ನೆಗಿಂತ 'ಇಂದು ಹೇಗೆ' ಎನ್ನುವ ಪ್ರಶ್ನೆ ಬದುಕಿಗೆ ಮಹತ್ತರವಾಗಿ ಕಾಣಿಸಬೇಕು. ಬದಲು ವಿಶ್ವದ ಹೊಣೆಯನ್ನೋ, ವಿಶ್ವದ ಗುರಿಯನ್ನೋ ಕಾಣಬಯಸುವುದು ಅಸಾಧ್ಯ ಗೋಷ್ಠಿ, ಅಧಿಕ ಪ್ರಸಂಗವಲ್ಲವೆ ? ಆ ರೀತಿಯು ಬಾಳ್ವೆಗೆ ಭೂಷಣವೆಂದು ನನಗನಿಸುವುದಿಲ್ಲ. ಇಂದು ನಮಗೆ ದೊಡ್ಡದು. ಇಂದಿನ ಬದುಕು ಅಷ್ಟೇ ದೊಡ್ಡದು. ಅದು ನಿನ್ನೆಗೂ ನಾಳೆಗೂ ಕಡಮೆಯಾಗದಷ್ಟು, ಎಂದೂ ಕಡಮೆ ಎನಿಸದಷ್ಟು ದೊಡ್ಡದು. ಅದು ಊಹೆ, ತರ್ಕ, ವಿರಕ್ತಿಯ ನೀತಿ ಗಳಿಂದ ತೀರ್ಮಾನವಾಗಲಾರದು. ತನಗೂ ಮೀರಿದ ಪ್ರಶ್ನೆಗಳನ್ನು ಮನುಷ್ಯ ಬದುಕಿಗೆ ತಗಲಿಸಿಕೊಂಡು, ತಾನೇ ಕಲ್ಪಿಸಿದ ಭೂತಕ್ಕೆ ಬೆದರಿ, ಜೀವನದಿಂದ ಪಲಾಯನವೆಸಗು ವುದು ಬದುಕಿನ ಹಾದಿಯಲ್ಲ. ಜೀವನವನ್ನೆಲ್ಲ ಮಾಯೆ ಎಂದು ಅಲ್ಲಗಳೆದು ಸಾಗುವವ ರನ್ನು ಜೀವನ ಪ್ರವಾಹ ಮರೆತೇ ಮುಂದೆ ಸಾಗುತ್ತದೆ. ಒಂದೊಂದು ವ್ಯಕ್ತಿಯೂ ತನ್ನ ಬದುಕನ್ನು ಜೀವನ ಪ್ರವಾಹಕ್ಕೆ ಬರಡಾಗಿ ಮಾಡಿಕೊಂಡಲ್ಲಿ, ಅವನ ಆಯುಷ್ಯ ಬರ ಡಾದೀತೇ ವಿನಾ, ಜೀವನ ಪ್ರವಾಹ ಬರಡಾಗಲಾರದು. ಈ ತೆರನ ಲಕ್ಷೋಪಲಕ್ಷ ಜೀವಗಳ ಹಾನಿಗಳನ್ನು ಸಹಿಸಿ, ಮುಂದಕ್ಕೆ ಸಾಗುವ ಭರ, ಮಹತಿ, ಅದರಲ್ಲಿದೆ. ಮನುಷ್ಯ ಮರವಾಗಬಾರದು. "ಮರ"ಕ್ಕಿಂತ ಭಿನ್ನವಾದ ಚಟುವಟಿಕೆ, ಶಕ್ತಿಗಳನ್ನು ಗಳಿಸಿದ ವ್ಯಕ್ತಿಯು ಮಾನವ. ಆತ ಎಷ್ಟು "ಚರ"ನಾಗಬಹುದೋ ಅಷ್ಟು ಚರನಾಗ ಬೇಕು.

**ಬಾಳ್ವೆ ಬದುಕುವುದಕ್ಕೆ**

ಬಾಳ್ವೆ ಇರುವುದೇ ಬದುಕುವುದಕ್ಕಾಗಿ ; ಬದುಕಿನಿಂದ ಬೆಳೆಯುವುದಕ್ಕಾಗಿ. ಮಳೆಯಾಗಿ ಉದುರಿದ ಹನಿ ಅಲ್ಪವಾಗಿರಬಹುದು. ಆ ಹನಿ ನೆಲದಲ್ಲಿ ಬಿದ್ದು ಹುದುಗಿ ಹೋಗುವ ಅದರ ಆಟ ಕ್ಷಣಿಕವಾಗಿಯೂ ತೋರಬಹುದು. ಜೀವನ ಪ್ರವಾಹದಲ್ಲಿ ಹುಟ್ಟಿ, ಸಾಯುವ ಪ್ರತಿಯೊಂದು ಜೀವಿಯೂ ಹೀಗೆ ಕ್ಷಣಿಕವೂ ಅಲ್ಪವೂ ಅಹುದು,

ಆದರೆ ಅಂಥ ಹನಿಗಳೇ ನೆಲವನ್ನೊದೆದು ಬುಗ್ಗೆಗಳಾಗುತ್ತವೆ. ಅವು ಜಿನುಗಬೇಕು. ಹಂಬಲಿಸಿ ಹರಿಯಬೇಕು. ನದಿಯಾಗಿ ಒಗ್ಗಿ ವಿಸ್ತರಿಸಿ ತೊಡರುಗಳನ್ನು ಕೊಚ್ಚಿ ಮುಂದಕ್ಕೆ ಹರಿಯಬೇಕು. ಬೀಳುವ ಮಳೆಯ ಹನಿಗೆ ನಾಳಿನ ನದಿಯ ಕಲ್ಪನೆ ಆಗದಾದರೂ, ಆ ನದಿಗೆ ಅಂಥ ಹನಿಗಳೇ ಕಾರಣ.

**ದುಃಖವೂ ತಿಳಿವಿಗೆ ಕಾರಣ**

ಜೀವನ ಕ್ಷಣಿಕವಾಗಿದ್ದರೆ ಏನು ಕೆಟ್ಟಿತು ? ನಮ್ಮ ಸುತ್ತಲಿನ ಎಲ್ಲ ಕ್ಷಣಿಕ ವಸ್ತುಗಳಂತೆಯೆ ನಾವು ; ಹೆಚ್ಚೂ ಅಲ್ಲ; ಕಡಮೆಯೂ ಅಲ್ಲ. ಆ ಕ್ಷಣಕ್ಕೂ ಮೀರಿ ಬದುಕಬೇಕೆಂಬ ಅತ್ಯಾಸೆ ನಮಗೆ ಬೇಕಿಲ್ಲ. ಈ ಕ್ಷಣಕಾಲದ ಚೈತನ್ಯಕ್ಕೆ ಆಳಾಗುವುದು ಮೊದಲಿನ ಕೆಲಸ. ದೂರದ ನಾಳೆಗಾಗಿ ಹಂಬಲಿಸುವುದು ಮತ್ತಿನ ಕೆಲಸ. ಬಾಳ್ವೆ ಇರುವಷ್ಟು ದಿನ ಅದರ ಅರಿವು ನಮಗಾಗಲಿ. ಜೀವನದ ಸೊಗಸು, ಕೊರತೆಗಳ ಅನುಭವವಾಗಲಿ. ಅದರಿಂದ ನಮ್ಮ ಮನಸ್ಸು ವಿಸ್ತರಿಸಲಿ. ಪ್ರತಿಕ್ಷಣವೂ ನಮ್ಮ–ಸುತ್ತ ನಡೆಯುವ ಕದನ, ಸ್ನೇಹ, ಸಂಧಾನಗಳು ಅವವುಗಳ ಉದ್ದೇಶಗಳನ್ನು ನಮಗೆ ಪರಿಚಯ ಮಾಡಿಕೊಡಲಿ. ನಮ್ಮ ಮನಸ್ಸು ತೆರೆದಿರುವಲ್ಲಿ ಒಂದೊಂದು ಸಾವು, ಒಂದೊಂದು ನೋವು, ಬವಣೆಗಳು ಒಂದೊಂದು ಹಿಗ್ಗು, ಒಂದೊಂದು ಆನಂದ, ಒಂದೊಂದು ಸುಖದಷ್ಟೇ ಅರಿವನ್ನು ಕೊಟ್ಟಾವು. ಬಾಳ್ವೆಯಲ್ಲಿ ನಮ್ಮ ಜೀವನ ಇತರರ ಜೀವನಗಳೊಡನೆ ಎಷ್ಟು ಹೆಚ್ಚಾಗಿ ಹೊಂದಿಕೊಳ್ಳುತ್ತದೋ ಅಷ್ಟಷ್ಟು ಹೆಚ್ಚಾಗಿ ನಮ್ಮ ಬದುಕು ಪಕ್ವವಾಗುತ್ತದೆ ; ಸವಿಯಾಗುತ್ತದೆ. ಉಳಿದ ಜಗತ್ತಿನ ಬಾಳ್ವೆಗೂ ಅದು ಸೊಗಸನ್ನು ಉಂಟುಮಾಡುತ್ತದೆ.

ಬದುಕು ಏನೆಲ್ಲ ನಮಗೆ ಕೊಟ್ಟಿರಲಾರದು ? ಏನೆಲ್ಲ ನಮಗೆ ಕೊಡಲಾರದು ? ಅನುಭವಿಸುವ ನಮ್ಮ ಶಕ್ತಿಗಳು ಎಷ್ಟು ಸೂಕ್ಷ್ಮವಾಗುತ್ತವೋ ಪರಿಶೀಲನೆಯ ನಮ್ಮ ನೋಟವು ಎಷ್ಟೆಷ್ಟು ಮೊನಚಾಗುತ್ತದೆಯೋ, ಇತರರ ಜೀವನದಲ್ಲಿ ನಮ್ಮ ಹೃದಯ ಎಷ್ಟೆಷ್ಟು ವಿಸ್ತೃತವಾಗಿ ಬೆರೆಯುತ್ತದೆಯೋ, ಅಷ್ಟಷ್ಟು ಹಿರಿದಾದ ಸುಗ್ಗಿಯು ನಮ್ಮ ಬದುಕಿನ ಬೆಳೆಗೆ ದೊರೆತೀತು.

# ೧೦ ವಿಸ್ತೃತ ಜೀವನ

## ಇಂದ್ರಿಯಗಳ ಪಾತ್ರ

ಬಾಳ್ವೆಯ ಮಹತ್ವವನ್ನು ಬದುಕಿಯೇ ತಿಳಿಯಬೇಕಲ್ಲದೆ ಅನ್ಯಥಃ ಅಲ್ಲ. ಬಾಳ್ವೆ ಇರುವುದೇ ಬದುಕುವುದಕ್ಕಾಗಿ. ಅದರ ನಿರಾಕರಣೆಯು ಬಾಳ್ವೆಗೆ ಸಲಿಸುವ ಉತ್ತರವಲ್ಲ. ಹೀಗೆಂದ ಬಳಿಕ ಬಾಳ್ವೆಯ ಸೊಗಸನ್ನು ಅರಿಯಬೇಕಾದ ವ್ಯಕ್ತಿಯು, ತನ್ನ ಜೀವನ ಎಷ್ಟು ತುಂಬಿ, ವಿಶಾಲವಾಗಿ ಹರಡಬಹುದೋ ಅಷ್ಟೊಂದು ತುಂಬು ಜೀವನವನ್ನು ಮಾಡಬೇಕು. ಅಂಥ ವ್ಯಕ್ತಿಯು ಆ ಉದ್ದೇಶವನ್ನು ಹೇಗೆ ಸಾಧಿಸಲು ಸಾಧ್ಯ ? ಅವನು ಎಷ್ಟು ಹೆಚ್ಚಾಗಿ ಪ್ರಪಂಚದ ಜೀವಿ ಜೀವೇತರ ವಸ್ತುಗಳೊಡನೆ ಬೆರೆಯಲು ಯತ್ನಿಸುತ್ತಾನೆಯೋ, ಎಷ್ಟೊಂದು ಅಧಿಕ ಪ್ರಮಾಣದಲ್ಲಿ ಅವನು ಪ್ರಪಂಚದ ಬಾಳ್ವೆಯೊಡನೆ ತನ್ನ ಸುಖ ದುಃಖಗಳನ್ನು ಹೊಂದಿಸಿಕೊಳ್ಳಲು ಶಕ್ತನಾಗುತ್ತಾನೆಯೋ, ಅಷ್ಟಷ್ಟು ತುಂಬಿದ ಜೀವನ ಅವನದಾಗುತ್ತದೆ. ಮನುಷ್ಯನಿಗೆ ಪ್ರಪಂಚದ ಪರಿಚಯ ಆಗುವುದಾಗಲಿ, ಅದರೊಡನೆ ಅವನು ತನ್ಮಯ ಹೊಂದುವುದಾಗಲಿ, ಅವನ ಇಂದ್ರಿಯಗಳಿಂದ ಆಗಬೇಕಾದ ಕೆಲಸ. ಮನುಷ್ಯನ ವಿಚಾರವಾಗಿ ಹೀಗೆನ್ನಬಹುದು—ಅವನ ಕಣ್ಣುಗಳು—ಇಲ್ಲಿ ಕಾಣಬಹುದಾದಷ್ಟು ಸೊಗಸನ್ನೆಲ್ಲ ಕಾಣಬೇಕು. ಬದುಕಿಗೆ ಒಪ್ಪುವ ಚೆಲುವಾವುದು, ಒಪ್ಪದ ಚೆಲುವಲ್ಲದ್ದಾವುದು—ಎಂಬುದನ್ನು ಅವನ ನೋಟ ಹೇಳಬೇಕು. ಆ ಪರಿಪಾಠ, ಸೂಕ್ಷ್ಮತೆ, ಆಯ್ಕೆ ಅವನ ಕಣ್ಣಿಗೆ ಇಲ್ಲದೆ ಹೋದರೆ, ಅವನ ಕಣ್ಣು ಕೊಡಬಹುದಾದ ಅನುಭವಗಳು ಅಷ್ಟೊಂದು ಮಟ್ಟಿಗೆ ಬಡವಾಗುತ್ತವೆ. ಅವನ ಕಿವಿ—ಪ್ರಪಂಚದ ಧ್ವನಿ, ನಾದ, ಸದ್ದು, ಗಲಭೆ, ಆರ್ಭಟೆ, ಚೀರಾಟಗಳಿಂದ ತನ್ನ ಜ್ಞಾನವನ್ನು ಗಳಿಸಬೇಕು. ಯಾವುದರಿಂದ ತಾನು, ತನ್ನವರು ಹಿತ ಪಡೆಯಬಹುದು, ಯಾವುದು ಜೀವಿಗೆ ಉಲ್ಲಾಸಕಾರಿಯಾದುದು, ಯಾವುದು ಮನಸ್ಸನ್ನು ಮೇಲಕ್ಕೆತ್ತಬಲ್ಲುದು, ಯಾವೆಲ್ಲ ಸ್ವರರಾಶಿಗಳು ಬದುಕಿನ ವಿರಸವನ್ನು ಸೂಚಿಸುತ್ತವೆ, ಯಾವುದು ಜೀವನ ಸಮರಕ್ಕೆ ಶ್ರುತಿ, ಯಾವುದು ಅಪಶ್ರುತಿ ಎಂಬುದನ್ನೆಲ್ಲ ತಿಳಿಯುವ ಸೂಕ್ಷ್ಮತೆ ನಮ್ಮ ಕಿವಿಗೆ ಬರಬೇಕು.

## ಇಂದ್ರಿಯಗಳಿದ್ದರೆ ಮನಸ್ಸು

ಸುಖದುಃಖಗಳ ಅನುಭವವನ್ನು ವ್ಯಕ್ತಿಗೆ ದೊರಕಿಸುವ ಸ್ಪರ್ಶೇಂದ್ರಿಯಗಳು, ರಸ ಆಸ್ವಾದನೆಗೆ ಅರ್ಹವಾದ ಜಿಹ್ವೆ, ವಿವಿಧ ವಾಸನೆಗಳನ್ನು ಒದಗಿಸುವ ಮೂಗು—ಇವೆಲ್ಲವುಗಳೂ ತಂತಮ್ಮ ಕ್ಷೇತ್ರದಲ್ಲಿ ಪಳಗಬೇಕು.

ಸಂಸಾರದ ಅನೇಕ ಘಟನೆಗಳು ನಿಸರ್ಗದ, ಅನೇಕ ದರ್ಶನಗಳು, ಜೀವನದ

ಅನೇಕ ಸ್ನೇಹ, ಸೌಹಾರ್ದಗಳು ಇಂದ್ರಿಯಗಳ ಮೂಲಕವಾಗಿಯೆ ನಮಗೆ ದೊರೆಯಬೇಕು. ಮನಸ್ಸಿನ ತೆರೆಯ ಮೇಲೆ ಅವುಗಳು ಮೂಡಬೇಕು. ಹಾಗೆ ಮೂಡಿ, ವಿವಿಧ ಪ್ರತಿಕ್ರಿಯೆಗಳನ್ನು ಉಂಟುಮಾಡಿ, ಮನಸ್ಸು ಪಕ್ವವಾಗಬೇಕು. ಇಂದ್ರಿಯಗಳು ಕೊಡುವ ಅನುಭವಗಳಿಂದಲೇ ಮನಸ್ಸು ಹಿಗ್ಗುವುದು ಅಥವಾ ಕುಗ್ಗುವುದು. ಆ ಮನಸ್ಸಿನ ಏರಿಳಿತಗಳನ್ನು ಹೊಂದಿ, ವ್ಯಕ್ತಿಯ ನಡೆನುಡಿಗಳು ಪರಿಣಾಮಗೊಳ್ಳುವುದರಿಂದ ವ್ಯಕ್ತಿಗೂ ಬಾಹ್ಯ ಜಗತ್ತಿಗೂ ಇರುವ ನಡವಳಿಕೆಯು ರೂಪಿತವಾಗುತ್ತದೆ. ಮನಸ್ಸಿನ ತೆರೆಯಮೇಲೆ ಬೀಳುವ ಅನೇಕ ಅನುಭವದ ಬಿಂಬಗಳು ಬರಿದೆ ಶೇಖರಗೊಳ್ಳಬೇಕೆಂದಿಲ್ಲ. ಅವು ವಿಸ್ತಾರಗೊಳ್ಳಬಹುದು, ಇಲ್ಲವೆ ಸಂಕೋಚಗೊಳ್ಳಬಹುದು. ಸದಾ ಚೇತನವಾಗಿ ಉಳಿಯಬಹುದು. ಅನುಭವಗಳ ಸಂಖ್ಯೆ ಅಧಿಕವಾದಂತೆ, ಅವುಗಳನ್ನು ಕೂಡಿಡುವ ಮನಸ್ಸು ನಿಸ್ವಾರ್ಥದ್ದಾದಂತೆ, ಮನೋರಾಜ್ಯದಲ್ಲಿ ಸ್ಥಾಪನೆಯಾಗುವ ಬಿಂಬಗಳು ಹೆಚ್ಚು ಕಡಿಮೆಯಾಗುತ್ತವೆ. ಅವುಗಳಲ್ಲಿ ಸಮರಸ ಉಂಟಾಗುತ್ತದೆ. ಹಾಗೆ ಉಂಟಾದಲ್ಲಿ ಮಾತ್ರ ವ್ಯಕ್ತಿಗೂ ಬಾಹ್ಯ ಜಗತ್ತಿಗೂ ಇರುವ ಸಂಬಂಧವೂ ಸಮರಸವಾಗಿ ನಡೆದೀತು.

### ಕಣ್ಣು, ಕಿವಿ

ಮನಸ್ಸನ್ನು ಪಕ್ವಮಾಡುವುದರಲ್ಲಿ ಕಣ್ಣಿಗಿರುವಷ್ಟು ಹೆಚ್ಚಿನ ಹೊಣೆ ಇತರ ಇಂದ್ರಿಯಗಳಿಗಿಲ್ಲ. ಅನಂತರದ ಸ್ಥಾನ ಕಿವಿಗೆ. ಬದುಕಿನ ಅನೇಕ ವಸ್ತುಗಳ ಪರಿಚಯ, ಘಟನೆಗಳ ಪರಿಚಯ, ಕಣ್ಣಿನಿಂದಲೇ ಆಗಬೇಕು. ಮನಸ್ಸಿನ ತೆರೆ ಹಲವು ದೃಶ್ಯಬಿಂಬಗಳಿಂದ ತುಂಬಿ ಹೋಗುತ್ತದೆ. ನಮ್ಮ ಕಣ್ಣಿಗೆ ಬೀಳುವ ಬರಹದಿಂದಾಗಿ, ನೂರಾರು ವ್ಯಕ್ತಿಗಳ ಅನುಭವ ಚಿತ್ರಗಳೂ ಆ ತೆರೆಯ ಮೇಲೆ ಬೀಳುತ್ತವೆ. ಧ್ವನಿರಾಜ್ಯವು, ಕಿವಿಯ ಮೂಲಕ ಮನಸ್ಸಿನ ಮೇಲೆ ಕೆದರುವ ಅನುಭವಗಳು, ಇಷ್ಟೊಂದು ಹೆಚ್ಚಲ್ಲ. ಆದರೆ, ಧ್ವನಿಗಳಲ್ಲಿ ಮುಖ್ಯವಾದ ಮಾತು, ಬರಹದಂತೆಯೆ ಇತರರ ಅನುಭವಗಳನ್ನು ಮೊದಣಿ ಕೊಡುತ್ತದೆ. ಒಲುಮೆ, ಪ್ರಣಯ, ಪ್ರೇಮ, ಭಕ್ತಿ, ವೈರಗಳಂಥ ಜೀವಜೀವಗಳನ್ನು ಸೆಳೆಯುವ ಇಲ್ಲವೆ ದೂರಮಾಡುವ ಶಕ್ತಿಗಳ ಪರಿಚಯ ನಮಗೆ ಕಣ್ಣು ಕಿವಿಗಳಿಂದಾಗುವ ಕೆಲಸಗಳು.

### ನಿಸರ್ಗದ ಹಿನ್ನೆಲೆ

ಜೀವನದಲ್ಲಿ ಕಣ್ಣುಗಳ ಪಾತ್ರ ಬಹು ಮಹತ್ವದ್ದು. ಅದು ಎಷ್ಟೆಲ್ಲವನ್ನು ಜೀವನಕ್ಕೆ ದೊರಕಿಸಿಕೊಡಬಹುದು ಎಂಬುದನ್ನು ಸ್ವಲ್ಪ ಸೂಕ್ಷ್ಮವಾಗಿ ವಿಚಾರಿಸುವ. ಎಲ್ಲ ಜೀವಿಗಳೂ ವಿಶಾಲವಾದ, ವಿವಿಧವಾದ ನಿಸರ್ಗದ ತೆರೆಯ ಮುಂದುಗಡೆ ತಮ್ಮ ಜೀವನ ನಾಟಕವನ್ನು ಅಭಿನಯಿಸುತ್ತವೆ. ಬಯಲು, ಆಕಾಶ, ಮುಗಿಲು, ನದಿ, ಕಡಲುಗಳಲ್ಲಿ ನಮ್ಮ ಜೀವನಕ್ಕೆ ಹಿನ್ನೆಲೆಯೂ ಇದೆ, ನಾಟಕವೂ ಇದೆ. ಅವುಗಳನ್ನು ಬಿಟ್ಟುಬಿಟ್ಟು ವ್ಯಕ್ತಿಗಳಿಗೆ ಪ್ರಾಣಿಗಳೂ ಇವೆ, ಪಕ್ಷಿಗಳೂ ಇವೆ. ಆಹಾರಾವಶ್ಯಕದ ತುದಿಯಿಂದ ತುದಿಯ ತನಕ ಹರಡಿದ್ದು, ಬಾನಿನ ಕುಡಿಯನ್ನೇ ಇಣುಕಿ ನೋಡುವ

ಹಿಮವತ್ಪರ್ವತವು, ಆರ್ಯಾವರ್ತವಲ್ಲಾದ ಹಲವೊಂದು ಜನಾಂಗಗಳ ಜೀವನ ನಾಟಕಕ್ಕೆ ಚಿರಸಾಕ್ಷಿಯಾಗಿದೆ. ಅದೂ ಕೂಡ ಜಗತ್ತಿನ ಮಾನದಿಂದ ಅಚಿರವೆನಿಸಿದರೂ, ಅದರ ಮುಂದೆ ನಾಟಕವಾಡುವ ಜೀವಿಗಳ ಪಾಲಿಗೆ ಅದು ಚಿರವಸ್ತುವೇ. ಇವೆಲ್ಲವುಗಳ ಬಾಳ್ವೆ ಮಿಂಚಿನಂತೆ ಮಾಯವಾಗಿ ಹೋಗಿದ್ದರೆ, ಅದು ಇನ್ನೂ ನೆಲೆಯಾಗಿ ನಿಂತ, ಇವೆಲ್ಲವುಗಳ ಸಾವನ್ನು ಕಂಡು ಕಲ್ಯಾಣವನ್ನು ಕೋರಿದ ಶಿವನಂತೆ ಪ್ರೇರಣೆ. ಆರ್ಯರ ಮನೋಭಾವನೆ, ತತ್ವಜ್ಞಾನ, ಸಂಸ್ಕೃತಿಗಳು ಹಿಮಾಲಯವನ್ನು ಮರೆತಿದ್ದರೆ ಇಂದೆಷ್ಟು ಬರಡಾಗಿ ಕಾಣಿಸುತ್ತಿದ್ದುವೊ! ನಮ್ಮ ಪಾಲಿಗೆ ಹಿನ್ನೆಲೆಯಾದ ಇಂಥ ತೆರೆ ಎಷ್ಟು ವಿಶಾಲವಾಗುವುದೋ ಮನಸ್ಸು ಅಷ್ಟು ಚಾಚಿ ವಿಸ್ತರಿಸಲು ಸಹಾಯ. ನಮ್ಮ ಕಣ್ಣೆದುರಿನ ಬೆಟ್ಟಗಳು ಎಷ್ಟು ಉನ್ನತವಾಗಿರುತ್ತವೋ ನಮ್ಮ ಮನಸ್ಸಿನ ಬಯಕೆ ಅಷ್ಟು ಎತ್ತರಕ್ಕೆ ಏರಲು ಬಯಸುತ್ತದೆ. ಇಂಥ ಹಿನ್ನೆಲೆಗಳು ವರ್ಷದ ವಿವಿಧ ಋತುಗಳಲ್ಲಿ ಬೇರೆ ಬೇರೆ ವೈಯ್ಯಾರ ಒನಪುಗಳನ್ನು ತಾಳುತ್ತವೆ. ಒಂದೇ ಕಡಲು, ಒಂದೇ ನದಿ, ಒಂದೇ ಬಯಲು, ಒಂದೇ ಬೆಟ್ಟ—ಮುಂಜಾನೆ ಬೇರೆ, ಮಧ್ಯಾಹ್ನ ಬೇರೆ, ಸಂಜೆ ಬೇರೆ, ರಾತ್ರಿ ಬೇರೆ. ಬೇಸಿಗೆಯಲ್ಲಿ ಬೇರೆ, ಮಳೆಯಲ್ಲಿ ಬೇರೆ, ವಸಂತದಲ್ಲಿ ಬೇರೆ, ಹೇಮಂತದಲ್ಲಿ ಬೇರೆ—ಹೀಗೆ ಕಾಣಿಸುವುದರಿಂದ ಎಂಥ ಬಂಜೆ ಮನಸ್ಸೂ ಹುರುಪುಗೊಂಡು, ಭಾವನೆಗಳ ಓಲಾಟಕ್ಕೆ ತೇಲಾಡುತ್ತದೆ. ಚಿರವಾಗಿ ಕಾಣಿಸುವ ನದಿ, ಬಯಲು, ಬೆಟ್ಟಗಳು ಕಾಲಮಾನದ, ದಿನಮಾನದ ಒನಪು ವೈಯ್ಯಾರಗಳನ್ನೆಲ್ಲ ತೊಟ್ಟು ಬರುವಾಗ, ಅವುಗಳ ಜೀವನದಲ್ಲಿ ಹಾಸು ಹೊಕ್ಕಾದ ಬಾನು, ಎಣೆವಕ್ಕಿಯಂತೆ ಈ ಮೇಳವನ್ನು ಪೂರ್ಣಗೊಳಿಸುತ್ತದೆ. ಬಟ್ಟಬಯಲಾಗಿರುವ ಅಂಬರಮಾರ್ಗವು ಪೀತಾಂಬರವಾಗುವುದುಂಟು. ಹೊನ್ನಿನ ಹಾಳೆಯಾಗುವುದುಂಟು. ಚುಕ್ಕಿಗಳ ತೋಟವಾಗುವುದುಂಟು. ತೇಜಸ್ಸಿನಿಂದ ಕಣ್ಣನ್ನು ಕುಕ್ಕುವುದುಂಟು. ಲಾಲಿತ್ಯದಿಂದ ಮನಸ್ಸನ್ನು ಮೋಹಿಸುವುದುಂಟು. ಪ್ರಶಾಂತಿಯಿಂದ ತೃಪ್ತಿಗೊಳಿಸಿ ತಲೆ ತೂಗಿಸುವುದುಂಟು. ತನ್ನ ನಗ್ನ ಸೌಂದರ್ಯದಿಂದಲೇ ಬಾನು ನಿಸರ್ಗಕ್ಕೆ ಮೇಳವಾದುದು ಸಾಲದೆಂಬಂತೆ, ಮುಗಿಲ ಬಟ್ಟೆಯನ್ನುಟ್ಟು ತೋರದ ರಸಾವೇಶವಿಲ್ಲ. ಶಾಂತಿ, ಕರುಣ, ರೌದ್ರಗಳೆಲ್ಲ ಮುಗಿಲುಗಳಲ್ಲಿ ಮನೆ ಮಾಡಿಕೊಂಡಿರಬೇಕು—ಎನ್ನುವ ಭ್ರಾಂತಿ ಯಾರಿಗೂ ಆಗುತ್ತದೆ. ಹೀಗೆ ಗಗನದೊಡನೆ ಮೇಳವಾಗಿ ನಿಂತ ನಿಸರ್ಗದ ನೂರಾರು ಭವ್ಯ ನೋಟಗಳು, ಜೀವಿಗಳ ಮುಂದೆ ತಾವೂ ನಾಟಕವಾಡುತ್ತವೆ. ನಮ್ಮ ಜೀವನ ನಾಟಕ ಮಾತ್ರ ಅರ್ಥಪೂರಿತವಾದದ್ದಾದಲ್ಲಿ, ಅವುಗಳ ಹಿಮ್ಮೇಳ ಅರ್ಥಹೀನವಾದದ್ದೆ?

**ಬಡವರಿಗೂ ದೊರೆಯುವ ಭಾಗ್ಯ**

ಕಣ್ಣಿಗೆ ಕಾಣಿಸದಂಥ ಬರಹ, ಕಿವಿಗೆ ಕೇಳಿಸದಂಥ ಮಾತು, ನಿಸರ್ಗದ ನೋಟದಲ್ಲಿ ಅಡಕವಾಗಿವೆ. ಅವುಗಳೇ ತನ್ನ ಹಿಮ್ಮೇಳ, ತನ್ನ ಜೀವನಕ್ಕೆ ಅವೇ ಹಿನ್ನೆಲೆ—ಎಂದು ತಿಳಿಯಬಲ್ಲ ವ್ಯಕ್ತಿಗೆ ನಿಸರ್ಗ ತಿಳಿಸುವಷ್ಟು ಸತ್ಯ ಸೊಗಸುಗಳು ಇನ್ನಾವುದರಿಂದಲೂ ದೊರೆಯಲಾರವು. ತಾಸುತಾಸುಗಳ ಶಾಸ್ತ್ರ, ಕಾವ್ಯ ಪ್ರವಚನಗಳಿಂದ, ದಿನ

ದಿನಗಳ ಜೀವನ ಸಂಗರದಿಂದ, ಯುಗಯುಗಗಳ ಮೂಕ ತಪಸ್ಸಿನಿಂದ ದೊರೆಯುವ ಜ್ಞಾನವನ್ನು ಕ್ಷಣದಲ್ಲಿ ದೊರಕಿಸುವಷ್ಟು ಶಕ್ತಿ ನಿಸರ್ಗಕ್ಕಿದೆ. ಅವು ಕೊಡುವ ಪ್ರೇರಣೆ ಹೊಸ ಗಾಳಿಯಷ್ಟು ಹಸನು! ಒಮ್ಮೆ ನಿಸರ್ಗದೊಡನೆ ಮೈಮರೆತು ತಲ್ಲೀನರಾದೆ ವೆಂದರೆ, ಕಣ್ಮುಂದಿರುವ ಲೋಕದಿಂದ ಪ್ರೇರಿತವಾದರೂ, ಬೇರೆಯೆ ಇನ್ನೊಂದು ಲೋಕ ಕಾಣಿಸುತ್ತದೆ. ಜೀವವು ವ್ಯಕ್ತಿ ಭಾಷೆಯನ್ನು ಮರೆತು ವಿಸ್ತಾರವಾದ ಬಣ್ಣ ಗಳಲ್ಲಿ, ನಾದಗಳಲ್ಲಿ, ತೆರೆಗಳಲ್ಲಿ, ಲೋಲುಪ್ತವಾದಂತೆ ಕಾಣುತ್ತದೆ. ಅಲ್ಲಿ ದೊರೆಯುವ ಸುಖ, ಸವಿ, ಅನುಭವ ಸಾಧ್ಯ. ಆದರೆ ಸ್ಮರಣೆಗೊ, ವರ್ಣನೆಗೊ ಬರಲಾರವು. ಅದ ರಿಂದ ವ್ಯಕ್ತಿ ಗಳಿಸುವ ಲಾಭ ಅಷ್ಟಿಷ್ಟಲ್ಲ. ಯಾರೂ ಕಸಿಯಲಾರದ, ಯಾರು ನೋಡಿ ದರೂ ಬರಿದಾಗದ, ಯಾವ ಚೌಕಶಿಗೂ ಪಾತ್ರವಾಗದ ಸೌಂದರ್ಯ ಅದು. ಸೊಗಸಾದ ಹಿಮವತ್ಪರ್ವತದ ಬುಡಕ್ಕೆ ಹೋಗುವುದಕ್ಕೋ ಕಡಲತೀರಕ್ಕೆ ಹೋಗುವುದಕ್ಕೋ ನಡೆ ಯಬೇಕು ನಿಜ. ಹಣವೂ ಬೇಕಾದೀತು. ಆದರೆ ಬಡವರ ಮನೆಯ ಬಾಗಿಲಲ್ಲೂ ನಿಸರ್ಗ ವಿದೆ. ನೋಟದಿಂದ ಹಿಗ್ಗುವಷ್ಟು ಅವಕಾಶವಿದೆ. ಇದರಿಂದ ನಿಸರ್ಗ ನಿರೀಕ್ಷಣೆಯ ಆನಂದ, ಬಡತನ ಶ್ರೀಮಂತಿಕೆಗಳ ಅಂತರಗಳನ್ನು ಅಲ್ಲಗಳೆಯಬಲ್ಲುದು–ಎಂದರೂ ತಪ್ಪಿಲ್ಲ.

**ಕಾಗದದ ಹೂ**

ನಿಸರ್ಗದಲ್ಲೊಂದಾಗುವ ಪ್ರವೃತ್ತಿ ಬೆಳೆದಂತೆ ಮನುಷ್ಯನ ಮನಸ್ಸು ದಿನೇ ದಿನೇ ಅರಳುತ್ತದೆ. ಅಂತೆಯೇ ವಿಸ್ತರಿಸುತ್ತದೆ. ನಿಮ್ಮ ಕೈಗೆ ವಿಶಾಲವಾದ ಸ್ವರ್ಗ ಸಿಗುವಂತಿ ದ್ದರೆ ಇನ್ನೊಬ್ಬನ ಕೈಯ ಕಾಗದದ ಹೂವಿಗಾಗಿ ಬಾಯಿ ಬಿಡಬೇಕೇ ? ನಾಗರಿಕತೆಯು ನಮ್ಮ ಮುಂದೆ ರಾಶಿರಾಶಿಯಾಗಿ ಸುರಿಯುತ್ತಿರುವ ಅನೇಕವಾದ ಸುಖೋಪಕರಣಗಳು ಕಾಗದದ ಹೂಗಳಂತೆ. ಹಣವೇ ಅವುಗಳ ಪ್ರೇರಣೆ. ಹಣವೇ ಅವುಗಳ ಸಮಾಧಿ. ನಿಸರ್ಗ ಕೊಡುವ ಸುಖ ಎಂದೂ ಅಷ್ಟು ಬರಡಲ್ಲ. ಅದರ ಸೇವನೆಗಾಗಿ ನಮ್ಮ ವ್ಯಕ್ತಿತ್ವವನ್ನು ನಿಸರ್ಗದಲ್ಲಿ ಮರೆಯಿಸಬೇಕಾಗುತ್ತದೆ. ಅಲ್ಲಿ ನಮ್ಮ ಮನಸ್ಸು ಸಣ್ಣದ ರಿಂದ ದೊಡ್ಡದರಲ್ಲಿ ಲೀನವಾಗುತ್ತದೆ. ಮಾತ್ರವಲ್ಲ ಹಿಗ್ಗಿ ವಿಸ್ತರಿಸಿ ಹರಿಯುತ್ತದೆ. ಆದರೆ ನಾಗರಿಕತೆಯ ಕಾಗದದ ಹೂವು ಹಾಗಿಲ್ಲ. ಅದನ್ನು ಪಡೆಯುವ ಕ್ರಮವಂತೂ ದೊಡ್ಡವನು ಸಣ್ಣವನಾಗುವ ಮಾರ್ಗ. ಈ ಕಾಗದದ ಹೂವಿಗಾಗಿ ಹತ್ತು ಐವತ್ತು ಮಂದಿ ಮೇಲಾಟ ನಡೆಸಿ, ಒಬ್ಬೊಬ್ಬರಿಗೆ ಮಾತ್ರ ದೊರಕಿ ಉಳಿದವರಿಗೆ ಇಲ್ಲದಾಗುವ ವಸ್ತು. ಅದನ್ನು ಪಡೆದ ಮೇಲೆ—ಪಡೆದವನ ಮನಸ್ಸಿನಲ್ಲೊಂದು ಹೆಮ್ಮೆ ; ಉಳಿ ದವರ ಮನಸ್ಸಿನಲ್ಲೊಂದು ಕುಗ್ಗು. ನಿಸರ್ಗದ ಯಾವ ಸುಖವೂ ಈ ತೆರನದ್ದಲ್ಲ. ಮನಸ್ಸನ್ನು ಚಿಕ್ಕದಾಗಿ ಮಾಡುವ ಪ್ರವೃತ್ತಿಯುಳ್ಳುದ್ದಲ್ಲ. ನೋಟಕರ ಸಂಖ್ಯೆಯಿಂದ ನಿಸರ್ಗ ಬರಿದಾಗಲಾರದು. ಅಂತೆಯೇ ಹಿಮಾಲಯ ಎಂದಿಗೂ ನಮ್ಮ ಪ್ರೇರಣೆ. ಫ್ಯೂಜಿಯಾಮಾ ಬೆಟ್ಟ ಎಂದಿಗೂ ಜಪಾನಿಯರ ಪ್ರೇರಣೆ. ಆಲ್ಪ್ಸ್ ಪರ್ವತ ಎಂದಿಗೂ ಸ್ವಿಸ್ ಜನರ ಭಾಗ್ಯ.

**ಅನುಭವಾತೀತ ಸೌಂದರ್ಯ**

ನಿಸರ್ಗ ಬರಿಯ ಸೊಗಸನ್ನು ಉಣಿಸುವುದರಲ್ಲಿ ಮಾತ್ರ ಶ್ರೇಷ್ಠವೆಂದು ತಿಳಿಯ ಬೇಕಿಲ್ಲ. ಆ ಸೊಗಸಿನ ಹಿಂದೆ ಏನೋ ಒಂದು ಸತ್ಯವಿದೆ ಎಂಬ ಪ್ರೇರಣೆಯೂ ಅದ ರಿಂದ ದೊರೆಯುವುದಾದುದರಿಂದಲೇ ಅದು ದೊಡ್ಡದು. "ನಿಕೊಲಸ್ ರೋರಿಚ್"ನಂಥ ಚಿತ್ರಕಾರನು ಹಿಮಾಲಯದ ಅಥವಾ ತಿಬೇಟಿನ ಬೆಟ್ಟಗಳ ಮೈಬಣ್ಣಗಳಿಗೆ ದಣಿದಂತೆಯೆ ಕಾಣುವುದಿಲ್ಲ. ಆ ಮೈಬಣ್ಣಗಳ ಹಿಂದೆ ನಲಿದಾಡುವ ಇನ್ನೇನೋ ಒಂದು ಚೇತನ ಇದೆ. ಅವನ ಚಿತ್ರಗಳಲ್ಲಿ ವ್ಯಕ್ತ ಬಣ್ಣಗಳು ಮಾತನಾಡುವಂತೆ ಅವ್ಯಕ್ತವಾದ ಬೇರೊಂದು ನುಡಿ ಇದೆ. ಹಿಮಾಲಯದ ಆತ್ಮವೊಂದು ವಿವಿಧ ಮನೋವೃತ್ತಿಗಳಲ್ಲಿ ಜೀವಂತವಾಗಿ ದ್ದಂತೆ ಕಾಣುತ್ತದೆ. ನಿಸರ್ಗದ ಬಾಹ್ಯನೋಟ—ಕಾರ್ಮುಗಿಲು ಬಿರುಗಾಳಿಗಳಲ್ಲಿ, ನೆರೆ, ಭೂಕಂಪಗಳಲ್ಲಿ ಕ್ರೂರವಾಗಿ ಕಾಣಿಸಬಹುದು. ವಸಂತದಲ್ಲಿ ನಗುವಿಂದಲೂ ಹೇಮಂತ ದಲ್ಲಿ ಕ್ಷುಬ್ಧತೆಯಿಂದಲೂ ಕಾಣಿಸಬಹುದು. ನಿಸರ್ಗದ ನಗುವಾಗಲಿ, ಕೋಪವಾಗಲಿ, ನಿದ್ರೆಯಾಗಲಿ, ಜಾಗರವಾಗಲಿ—ಒಂದೇ ಚೈತನ್ಯದ ವಿವಿಧ ಮನೋಭಾವಗಳನ್ನು ಹೇಳುತ್ತವೆ. ಅಲ್ಲಿನ ಸಾವು ಸಾವಲ್ಲ. ನಗು ನಗುವಲ್ಲ. ಮರುಕ ಮರುಕವಲ್ಲ. ಒಂದೊಂದು ಜೀವ ತಾನು ತಾನೆಂದು ಮೇಲಾಡುವಾಗ ಅವನ್ನೆಲ್ಲ ನುಂಗಿಬಿಡುವ ನೆರೆಯೂ ಕಾಳ್ಗಿಚ್ಚೂ ನಮಗೂ ಮೀರಿದ, ನಮಗೂ ಹಿರಿದಾದ, ನಮ್ಮ ವೈಯಕ್ತಿಕ ಉದ್ದೇಶಗಳನ್ನು ಅಲ್ಲಗಳೆಯುವ ಬೇರಾವುದೋ ಚೈತನ್ಯವನ್ನು ಸಾರುತ್ತವೆ. ನಿಸರ್ಗದ ಹೊರನೋಟಗಳ ನಿರೀಕ್ಷಣೆ ಒಳನೋಟದಲ್ಲಿ ಇನ್ನೇನೋ ಸತ್ಯವನ್ನು ಹೇಳುತ್ತದೆ. ಅದರಿಂದ ದೊರೆಯುವ ಶಾಂತಿ ನಿಸರ್ಗದಷ್ಟೇ ವಿಶಾಲ, ಭವ್ಯ, ಸ್ಥಿರ.

**ಅಲೌಕಿಕ ಪ್ರೇರಣೆ**

ನಿಸರ್ಗದ ಬೆಟ್ಟವೊಂದು ಇಲ್ಲವೆ ಬಯಲೊಂದು, ವಿಶಾಲವಾಗಿ ಹರಡಿದ ಕಡ ಲೊಂದು ನಮ್ಮ ಕಣ್ಣುಗಳಿಂದಲೇ ನಮಗೆ ಗೋಚರ. ಅವುಗಳು ಕೊಡುವ ಹೊರ ನೋಟಕ್ಕೆ ಸಮನಾಗಿ ಒಳನೋಟ ಒಂದಿದೆ ಎಂಬುದು ದುಡಿದದ್ದಾಯಿತು. ವ್ಯಕ್ತಿ ಚಿಕ್ಕ ವನು. ಮನುಷ್ಯನ ನೋಟದ ಅಳಯ ಅಳತೆಗಳು ಸಣ್ಣವು. ಆದರೆ ಅವುಗಳ ಮೇಲೆ ಉನ್ನತವಾದ ಬೆಟ್ಟ, ತೀಕ್ಷ್ಣವಾದ ಮಿಂಚು, ಅಬ್ಬರದಿಂದ ಕೂಡಿದ ಕಡಲು ಪರಿಣಾಮ ಉಂಟುಮಾಡುವಾಗ, ವ್ಯಕ್ತಿ ತನ್ನ ವಸ್ತು ಪ್ರಪಂಚದ ಸಹಜ ಅಳತೆಗಳನ್ನು ತಾತ್ಕಾಲಿಕ ವಾಗಿಯಾದರೂ ಕಳೆದುಕೊಳ್ಳುತ್ತಾನೆ. ಅವನ ಭಾಷೆಯಲ್ಲಿನ ಒಂದು ಎರಡುಗಳು ಹೋಗಿ ನೂರು ಸಾವಿರ, ಕೋಟಿಗಳಾಗುತ್ತದೆ. ಅವನ ಅಳತೆ ಪಟ್ಟಿಯ ಇಂಚು, ಅಡಿ ಗಳು, ಹರದಾರಿ ಯೋಜನಗಳಾಗುತ್ತವೆ. ಸಣ್ಣ ತುಣುಕು ಚೂರುಗಳು ಬೆಟ್ಟ ಬಯಲು ಗಳಷ್ಟು ದೊಡ್ಡವಾಗುತ್ತವೆ. ಯಥಾವತ್ತಾದ ಅವನ ಎಣಿಕೆ ಊಹಾ ರಾಜ್ಯದಲ್ಲಿ ವಿಸ್ತ ರಿಸುತ್ತದೆ. ತಾನು ನಿಸರ್ಗದಲ್ಲಿ ಕಂಡ ಬಣ್ಣ ರೂಪಗಳಿಗಿಂತ ಮಿಗಿಲಾದ ಬಣ್ಣಗಳನ್ನು, ರೂಪಗಳನ್ನು ನಿರ್ಮಿಸಿಕೊಳ್ಳುತ್ತದೆ. ಹೊರಗಡೆ ಕಂಡ ಒಂದೊಂದು ಧ್ವನಿಯು ಈ ಒಳನೋಟದಲ್ಲಿ ವಿಸ್ತರಿಸಿ ಅಲೌಕಿಕವಾದ ಸ್ವರ್ಗವೇ ಆಗಿಬಿಡುತ್ತದೆ. ನಿಜ, ಈ ಸ್ವಪ್ನ

ರಾಜ್ಯದಲ್ಲಿ ಎಲ್ಲವೂ ದೊಡ್ಡ ಆಳತೆಯ ವಸ್ತುಗಳು. ಅವರ ದೊಡ್ಡತನದಿಂದಾಗಿ, ನಿಸರ್ಗ ನಿರೀಕ್ಷಣೆಯ ಕಾಲ ಮುಗಿದ ಮೇಲೆಯೂ ಮನಸ್ಸಿನ ಮೇಲೆ ಅದರ ಸ್ವಪ್ನ ಸಂಸ್ಕಾರ ಉಳಿಯುತ್ತದೆ. ಅಲ್ಲಿನ ಆಯ ಆಳತೆಗಳು ಬದುಕಿನಲ್ಲಿ ಔದಾರ್ಯವನ್ನು ಕಟ್ಟು ವುದಕ್ಕೆ ಸಹಾಯಕವಾಗುತ್ತವೆ. ನಮ್ಮ ನಡವಳಿಕೆಗಳು ಮೊದಲಿಗಿಂತ ಹೆಚ್ಚಾಗಿ ವಿಸ್ತರಿ ಸಲು ಸಾಧ್ಯವಿದೆ.

**ಸೂಕ್ಷ್ಮದರ್ಶನ, ದೂರದರ್ಶನ**

ಇಂದು ಮನುಷ್ಯನ ಕಣ್ಣು ಇಮ್ಮಡಿಸಿದೆ. ಅವನ ಪಾಲಿಗೆ ಈ ತನಕ ಮಹಾ ಸಾಗರ, ಪರ್ವತಾವಳಿ ಇವುಗಳಂಥ ದೊಡ್ಡ ವಸ್ತುಗಳೇ ಪ್ರೇರಕವಾಗಿದ್ದರೆ ಇಂದು ತಾನು ಹೆಚ್ಚಿಸಿಕೊಂಡ ಹೊಸ ಕಣ್ಣುಗಳಿಂದ ಹಿಂದೆ ಕಾಣದ ಎಷ್ಟೋ ನೋಟಗಳು ಅವನ ಕೈಗೆ ಎಟುಕಿವೆ. “ಮೌಂಟ್‌ವಿಲ್ಸನ್ ಒಬ್ಸರ್ವೇಟರಿ”ಯಲ್ಲಿನ ನೂರು, ಇನ್ನೂರು ಇಂಚು ಹರಳುಳ್ಳ ದೂರದರ್ಶಿ ಯಂತ್ರಗಳು ಚಂದ್ರನನ್ನು ಹಿಮಾಲಯಕ್ಕಿಂತ ಹತ್ತಿರ ತಂದಿವೆ. ನಕ್ಷತ್ರಗಳನ್ನು ಊಹಾರಾಜ್ಯದಿಂದ ವಸ್ತುಲೋಕಕ್ಕೆ ತಂದಿವೆ. ಬ್ರಹ್ಮನು ಈ ಭೂಮಿಯನ್ನು ಸೃಷ್ಟಿಸಿ, ಅದರ ಮೇಲೆ ಕುಳ್ಳಿರಿಸಿದ ಕತೆ ಪುರಾಣ ನಮಗೆ ತಿಳಿ ದದ್ದು. ಈ ಭೂಮಿಯೆ ಹಿರಿದು, ಸೂರ್ಯನು ಅದಕ್ಕಿಂತ ಕಿರಿದು ಎಂಬ ಮೌಢ್ಯಕ್ಕೆ ಅದು ಕಾರಣವಾಗಿತ್ತು. ಮನುಷ್ಯನ ಊಹೆ ಕನಸುಗಳು ವಿಸ್ತರಿಸಿದ್ದುದರ ಫಲವಾಗಿ —ದೂರದರ್ಶನ ಸಾಧ್ಯವಾಯಿತು. ಸೂರ್ಯ, ತಾರೆಗಳು ಭೂಮಿಗಿಂತ ದೊಡ್ಡವು ಆಗಿವೆ. ವಿಶ್ವ ವಿಸ್ತರಿಸಿದೆ. ಯುಗ, ಪ್ರಲಯಗಳು ಅವಧಿ, ವೈಶಾಲ್ಯಗಳು ಬೆಳೆದು ಮೇರುಗಳು, ಜಂಬುದ್ವೀಪಗಳು ಯೋಗ್ಯಸ್ಥಾನಕ್ಕೆ ಬಂದು ನಿಂತಿವೆ. ಮನುಷ್ಯನ ಮನಸ್ಸು ಭೂಮಿಗೆ ಅನ್ವಯಿಸುವ ಸ್ವಾರ್ಥವನ್ನು ಮೀರಿ, ವಿಶ್ವದ ವಿಸ್ತೃತ ಕಲ್ಪನೆಯ ಪಾಠವನ್ನಾದರೂ ಕಲಿತುಕೊಂಡಿದೆ.

ಒಂದು ಲೋಕದ ಕಥೆ ಹೀಗೆ! ಇನ್ನೊಂದು ಬೇರೆಯೆ ಲೋಕವಿದೆ. ಇದೂ ಮನುಷ್ಯನ ಬರಿಗಣ್ಣಿಗೆ ಆಳವಲ್ಲದ ಲೋಕವಾಗಿತ್ತು. ಸಮೀಪವಾಗಿದ್ದರೂ ಕ್ಷುಲ್ಲಕವಾ ಗಿತ್ತು. ಸೂಕ್ಷ್ಮತೆಯ ಕಡೆಗೆ ಮನುಷ್ಯನ ಕಾಂಕ್ಷೆ ಬೆಳೆದು ಸೂಕ್ಷ್ಮದರ್ಶಿ ನಿರ್ಮಾಣ ವಾಯಿತು. ಒಂದೊಂದು ಸಸ್ಯಕಣದ, ಜೀವಕಣದ, ರಕ್ತಕಣದ ಒಳಗಡೆಯ ಲೋಕ ಅಪಾರವಾದದ್ದು, ವಿಚಿತ್ರವಾದದ್ದು—ಎಂದು ಅದು ಹೇಳತೊಡಗಿದೆ. ಹೊರಗಡೆ ಕಾಣುವ ರೂಪ ವೈಚಿತ್ರ್ಯದ ಬೆಡಗು ಒಂದು ಎಲೆಯ ಕಣದಲ್ಲೋ ಪರಾಗದ ಕಣ ದಲ್ಲೋ ಕಾಣುವಂತಾಗಿದೆ. ಎಲ್ಲದಕ್ಕೂ ಮಿಗಿಲಾಗಿ ಬರಿಗಣ್ಣಿಗೆ ಕಾಣಿಸುವ ಜೀವಿಗಳ ಸಂಖ್ಯೆಗಿಂತ ಎಷ್ಟೋ ಸಾವಿರ ಪಾಲು ಅಧಿಕವಾಗಿ ಅಗೋಚರ ಜೀವಿಗಳಿವೆ. ಮನು ಷ್ಯನ ಜೀವಕ್ಕೆ ಹುಲಿಗಿಂತಲೂ ಹೆಚ್ಚಿನ ಭಯಕಾರಕ ಜೀವಿ, ಅಣುವಿಗಿಂತಲೂ ಕ್ಷುಲ್ಲಕ ವಾದ ಬೆಕ್ಟೀರಿಯ—ಎಂದು ಈ ಹೊಸ ದರ್ಶನ ಹೇಳುತ್ತದೆ. ಹೀಗೆ ನಿಸರ್ಗ ನಿರೀಕ್ಷಕನ ಪಾಲಿಗೆ ಲೋಕ ನೂರು ಮಡಿ ವಿಸ್ತರಿಸಿದೆ. ಯಾವ ಕಡೆಗೆ ಹೋದರೂ ಕಣ್ತೆರೆದು ನೋಡುವವನ ಪಾಲಿಗೆ, ಸತ್ಯ ಸೊಗಸುಗಳನ್ನುಣಿಸುವ ಸಾಧನ ಹೆಚ್ಚಿಬಂದಿದೆ.

ನಿಸರ್ಗದ ಮಾನದಿಂದ ಜೀವಿಗಳು ಸಣ್ಣವು. ಮನುಷ್ಯ ಸಣ್ಣವನು. ನಿಸರ್ಗದ ಮುಂದೆ ಮನುಷ್ಯ ಸಣ್ಣವನಾಗಿ ಕಾಣಿಸಿದರೂ, ನಿಸರ್ಗದ ಪ್ರೇರಣೆಯಿಂದ ಮನುಷ್ಯ ದೊಡ್ಡವನಾಗಬಲ್ಲ. ಅವನ ಕಲ್ಪನೆಯಲ್ಲಿ ಹಿಮಾಲಯಕ್ಕಿಂತ ಹಿರಿದಾದ ಬೆಟ್ಟ, ಶಾಂತ ಸಾಗರಕ್ಕಿಂತ ಅಗಾಧವಾದ ಸಾಗರ ಉಂಟಾಗಲಿಲ್ಲವಾದರೂ ಇಂದು ಅವೇ ಭಾವಗಳು ಬೆಳೆದು, ವ್ಯಕ್ತಿ ತಾನು ಮಡಿದರೂ ಮಡಿಯಲಾರದ ಕನಸುಗಳನ್ನು ಕಾಣಲು ಶಕ್ತನಾಗಿದ್ದಾನೆ. ನಿಸರ್ಗ ನಿರೀಕ್ಷಣೆಯಿಂದ ಪ್ರೇರಣೆಗೊಂಡ ಅವನ ಮನಸ್ಸು, ಅನೇಕ ಸುಂದರವಾದ ಭವ್ಯವಾದ ಕನಸುಗಳನ್ನು ಕಟ್ಟಿದೆ. ಅವನೂ ಒಬ್ಬ ವಿಶ್ವಕರ್ಮನಾಗಿದ್ದಾನೆ.

**ಪ್ರತಿಸೃಷ್ಟಿ**

ನಿಸರ್ಗದ ಸಂಪರ್ಕದಿಂದ ಪಡೆದ ಪ್ರೇರಣೆಯು ವ್ಯಕ್ತಿಯ ಜೀವನದಲ್ಲಿ ಲಯವಾಗಬೇಕೆಂದಿಲ್ಲ. ಅದರ ಪ್ರೇರಣೆಗೆ ಪ್ರತಿಯಾಗಿ ಸ್ಫುರಿಸಬಲ್ಲ ಅನೇಕ ಜೀವಗಳಿದ್ದಾರೆ. ನಿಸರ್ಗದಿಂದ ತಮಗೆ ಆದ ಆನಂದ ಅನುಭವಗಳನ್ನು ಅವರು ಪ್ರತಿಯಾಗಿ ಸೃಷ್ಟಿಸಬಲ್ಲರು. ಈ ಪ್ರತಿಸೃಷ್ಟಿಯು—ವ್ಯಕ್ತಿಯ ಮಿತಿಯನ್ನು ಉಳ್ಳುದಾದರೂ, ಅದು ವ್ಯಕ್ತಿ ತನ್ನ ಸುತ್ತಲಿನ ಜಗತ್ತಿಗೆ ಸಲಿಸಬಹುದಾದ ಒಂದು ಪ್ರಾಮುಖ್ಯ ಕಾಣಿಕೆ. ತಾನು ಕಂಡ ಸತ್ಯವನ್ನು ತಾನು ಉಂಡ ಆನಂದವನ್ನು, ಅವನು ತನ್ನ ಜನರಿಗೆ ತಿರುಗಿ ಸಲ್ಲಿಸುತ್ತಾನೆ. ಇದರಲ್ಲಿ ಅವನ ಭಾವಾವೇಶಗಳಿಗೂ, ಊಹೆ ಕಲ್ಪನೆಗಳಿಗೂ ತುಂಬ ಅವಕಾಶವಿರುವುದರಿಂದ ಅದು ಅವನ ವ್ಯಕ್ತಿತ್ವದ ಕಾಣಿಕೆ ಎಂದರೂ ಸಲ್ಲುತ್ತದೆ. ಅವನ ಜೀವನವು ನೆರೆಕೆರೆಯ ಜೀವನದಲ್ಲಿ ಪರಿಣಮಿಸಲು ಅದೊಂದು ಉತ್ತಮ ಸಾಧನ. ನಿಸರ್ಗದಿಂದ ದೊರೆತ ಕಾವ್ಯ ಪ್ರೇರಣೆಯು ಮಾತು, ಗೀತೆಗಳಿಂದ ಪ್ರತಿರೂಪವನ್ನು ತಾಳಿ ನೂರಾರು ಹೃದಯಗಳನ್ನು ಸೇರಿ, ಮೂಲ ಪ್ರೇರಣೆಗೆ ಕಾರಣವಾದ ಆನಂದವನ್ನು ತೆರೆಯಾಗಿ ಆ ಹೃದಯಗಳಲ್ಲಿ ಹರಿಯಿಸಬಲ್ಲದು. ಸೃಷ್ಟಿಯ ಬಣ್ಣ ಬೆಡಗುಗಳಿಂದ, ಲಹರಿ ಆವೇಶಗಳಿಂದ ಪ್ರೇರಿತನಾದ ಚಿತ್ರಕಾರನೊಬ್ಬನು ಬರೆದ ಚಿತ್ರವು, ಇನ್ನಿತರ ಪ್ರೇಕ್ಷಕರ ಮನಸ್ಸಿನಲ್ಲಿ ಅದೇ ಬಗೆಯ ಪ್ರೇರಣೆಯನ್ನು ಕೆರಳಿಸಬಲ್ಲುದು. ಈ ಬಗೆಯ ಪ್ರೇರಣೆಯು—ವ್ಯಕ್ತಿಯ ಮೂಲಕ ಕಾವ್ಯ, ಕವನ, ಗೀತ, ನೃತ್ಯ, ಚಿತ್ರ ಶಿಲ್ಪ ಮೊದಲಾದ ಹಲವು ಮುಖಗಳಿಂದ ಸುತ್ತಲಿನ ಜೀವಿಗಳ ಬದುಕನ್ನು ಸೊಗಸುಗೊಳಿಸಬಲ್ಲುದು. ಬಾಹ್ಯ ಅನುಭವವನ್ನು ತನ್ನ ಹೃದಯದ ಮೂಲಕ ಮಿಕ್ಕ ಜೀವಕೋಟಿಗೆ ಸಲಿಸುವಂಥ ಕೆಲಸ ದೊಡ್ಡದು. ವ್ಯಕ್ತಿ ತಾನಿರುವಷ್ಟು ಕಾಲದಲ್ಲಿ ಮಾಡಬಹುದಾದ ಅತಿ ದೊಡ್ಡ ಕೆಲಸವೆಂದರೂ ಸರಿಯೆ.

ಆದರೆ ಎಲ್ಲ ಬಗೆಯ ವ್ಯಕ್ತಿಗಳೂ ಈ ರೀತಿಯಲ್ಲಿ ಪ್ರತಿಸೃಷ್ಟಿಯನ್ನು ಮಾಡಲಾರರು. ಅತಿ ದೊಡ್ಡ ಕೃತಿಗಳು, ಅತಿ ದೊಡ್ಡ ಕಾವ್ಯಗಳು ಕೆಲವರಿಂದಲೇ ಶಕ್ಯ. ಹೀಗಿದ್ದರೂ ಭಿನ್ನ ಭಿನ್ನ ಮಟ್ಟದ ಜನರು, ಚಿಕ್ಕಪುಟ್ಟ ಕೃತಿಗಳ ನಿರ್ಮಾಣ ಮಾಡಬಹುದು. ಸಂಸಾರದ ಚಿಕ್ಕಪುಟ್ಟ ಆನಂದವನ್ನು ಹೆಚ್ಚಿಸಬಹುದು. ಅನುಭವವನ್ನು ಹಸನು ಮಾಡಬಹುದು.

**ಲಲಿತ, ಕ್ರೂರಶಕ್ತಿಗಳು**

ಈ ತನಕ ಜೀವೇತರ ನಿಸರ್ಗದ ವಿಚಾರವಾಗಿ ಮಾತನಾಡಿದೆವು. ನಿಸರ್ಗದ ತೆರೆಯ ಮುಂದೆ ಎಷ್ಟೊಂದು ಜೀವಿಗಳು ನಲಿಯುತ್ತಲಿಲ್ಲ! ಮನುಷ್ಯನೊಬ್ಬನೇ ಈ ರಂಗಸ್ಥಳದ ಮುಖ್ಯ ನಾಯಕನಲ್ಲ. ನೂರಾರು ಬಗೆಯ ಹಕ್ಕಿಗಳು ಅನೇಕ ಬಗೆಯ ಪಶುಗಳು, ಅಸಂಖ್ಯಾತ ಸಸ್ಯಗಳು ನಮ್ಮ ಮುಂದಿವೆ. ಇದರಲ್ಲಿ ಮನುಷ್ಯನೇ, ನಿಸರ್ಗವು ಉದ್ದೇಶಿಸದ ಬಗೆಯಲ್ಲಿ ಬದುಕು ಸಾಗಿಸುತ್ತಾನೆ ಎಂದರೂ ತಪ್ಪಲ್ಲ. ಉಳಿದುವು ನಿಸರ್ಗದಲ್ಲಿ ಬೆರೆತಂತೆಯೇ ಕಾಣುತ್ತವೆ. ಸಸ್ಯ ಇಲ್ಲವೆ ಪಶು ಪ್ರಾಣಿಗಳ ಜೀವನ ನಿರೀಕ್ಷಣೆಯಲ್ಲಿಯೂ ನಮ್ಮ ಕಣ್ಣು ತಿದ್ದಬೇಕು. ಚೆಲುವಿನಿಂದ ನಮ್ಮ ಬಗೆಯನ್ನು ಬೆರಗು ಮಾಡುವ ಯೋಗ್ಯತೆ ಪ್ರಾಣಕೋಟಿಗಳಿಗಿದೆ. ಹುಲಿಯ ಮೈ ಬಣ್ಣಗಳಲ್ಲಿ ಅಡಗಿದ ಕ್ರೌರ್ಯ, ಹರಿಣದ ಲಾಲಿತ್ಯದಲ್ಲಿ ಅಡಗಿದ ಸೌಮ್ಯ, ಹದ್ದಿನ ಶೀಲಕ್ಕೆ ತಕ್ಕರೂಪ, ಒಲುಮೆಗೆ ತಕ್ಕ ನವಿಲಿನ ಬಳುಕಾಟ–ಇಂಥ ನೂರಾರು ನೋಟಗಳು, ತಮ್ಮ ಚೆಲುವಿನಿಂದ, ಗಂಭೀರತೆಯಿಂದ ನಮ್ಮ ಮನಸ್ಸನ್ನು ಪ್ರೇರಿಸಬಲ್ಲುವು. ಈ ಚೆಲುವಿನ ಪಾಠಕ್ಕೂ ಮಿಗಿಲಾದುದು, ಈ ಜೀವಿಗಳ ಪ್ರಪಂಚದ ಸೆಣಸಾಟ. ಪ್ರತಿಯೊಂದು ಜೀವಿಯೂ ಇನ್ನೊಂದರ ಮೇಲೆ ಅನ್ನಕ್ಕಾಗಿ ಹೊಂದಿದೆ. ಇದರಿಂದುಂಟಾಗುವ ನಿತ್ಯಸಂಗರದಲ್ಲಿ ಬದುಕನ್ನು ಉಳಿಸಲು ಬದುಕನ್ನು ಅಪಹರಿಸುವ ನೋಟ, ಬದುಕಿಗೆ ಅವಶ್ಯವಿಲ್ಲದ ಹಾನಿಯನ್ನು ಮಾಡದಿರುವ ನಿಯಮ, ಸಾವನ್ನು ಧಿಕ್ಕರಿಸುವ ಸಂತತಿಮಾರ್ಗ, ಆ ಸಂತತಿಯನ್ನು ಕಾಯ್ದು ಬರುವ ಬಗೆ–ಇಂಥ ಎಷ್ಟೋ ಎಷ್ಟೋ ಸಂಗತಿಗಳು ಮನುಷ್ಯನ ಕೃತಕ ಸಮಾಜ ನೀತಿಯನ್ನು ತಿದ್ದಬಲ್ಲವು. ಅವನ ಸಾವಿನ ಭೀತಿಗೆ ಸಮಾಧಾನವನ್ನೂ ಬದುಕಿನ ಬಯಕೆಗೆ ಮಿತಿಯನ್ನೂ, ನೀತಿ ತತ್ವಗಳಿಗೆ ಆಳತೆಯನ್ನೂ. ತೋರಿಸಬಲ್ಲವು. ಮನುಷ್ಯನು ಜೀವನಮಾರ್ಗದಲ್ಲಿ ಬಹುಮಟ್ಟಿಗೆ ತಾನು ಇತರ ಪ್ರಾಣಿಗಳಿಂದ ಭಿನ್ನ ಎಂದು ತಿಳಿದಂತೆ ಕಾಣುತ್ತದೆ. ಮನುಷ್ಯನ ವಿಕಾಸವೇ ಪಶುವಿನಿಂದಾಯಿತು. ಪಶು ಪ್ರಕೃತಿ ಎಂಬುದು ನಿಂದ್ಯವಾಗಬೇಕಾಗಿಲ್ಲ. ಪಶು ಸ್ವಭಾವವು ಇನ್ನೂ ಮಾನವನ ಜೀವನದ ಮೇಲೆ ಅಧಿಕಾರ ಹಿಡಿದಿದೆ. ಅದರ ಎಷ್ಟೋ ನಿಯಮಗಳನ್ನು ಅವನು ಮೀರಲಾರ. ಹೀಗಿರುವಲ್ಲಿ ಮನುಷ್ಯ ಸುತ್ತಲಿನ ಜೀವಕೋಟಿಯಿಂದ ಹೊಂದಬಹುದಾದ ಬಾಧ ಅಷ್ಟಿಷ್ಟಲ್ಲ. ಈ ತೆರನ ಜೀವನ ನಿರೀಕ್ಷಣೆಯಿಂದ—ಜೀವನದ ಲಲಿತ ಶಕ್ತಿಗಳಷ್ಟೇ, ಅನಿವಾರ್ಯವಾದವು ಕ್ರೂರ ಶಕ್ತಿಗಳೆಂದೂ, ಬದುಕಿನ ಏಳಿಗೆ ಅವು ಸಲ್ಲಿಸುವ ಪಾಲೂ ಹಿರಿದಾಗಿದೆಯೆಂದೂ ಕಲಿಯಲು ಅವಕಾಶವಾದೀತು.

**ನಾದ ರಂಗ**

ನಾದರಾಜ್ಯದ ಪ್ರೇರಣೆ ಸ್ವಲ್ಪವೇ ? ಸಿಕಾಡಾ (cicada) ಹುಳುವಿನ ಗೀತವನ್ನು ಕೇಳಲು ಮನೆಬಿಟ್ಟು ಅಗಲ್ಕಕ್ಕೆ ತೆವಳುವ ಜಪಾನಿಯರು. ಚೀನಿಯರು ಮರುಳರೆನ್ನಬೇಕೆ ? ವನಗಳಲ್ಲಿ ಸ್ವಾಭಾವಿಕ ಹೊರಡುವ ನಾನಾ ಬಗೆಯ ಚೀರಾಟ, ಕೂಗು, ಕರೆ, ಗೀತ ಇವುಗಳ ಸಂಖ್ಯೆಯು ಎಷ್ಟು ವಿವಿಧವಾಗಿದೆ ! ತನ್ನ ಆಳವನ್ನರಿತು ಒಂದೇ

ಶ್ರುತಿಯಲ್ಲಿ ಚಿಕ್ಕ ಒಂದು ಆಲಾಪವನ್ನು ಹೊರಡಿಸುವ ಗಿಡುಗನ ದನಿ ಅದರ ಶಕ್ತಿಯನ್ನೂ ತೀಕ್ಷ್ಣತೆಯನ್ನೂ ತೋರಿಸಬಲ್ಲುದಾದರೆ, ಬಾಯಿಬಡಕನಂತೆ ಮಂದ್ರದಲ್ಲೇ ವಿಲಪಿಸುವ ಬಾತುಕೋಳಿಯು ತದ್ವಿಪರೀತ ಶೀಲವನ್ನು ತೋರಿಸುತ್ತದೆ. ಹುಲಿಯ ಗರ್ಜನೆ ಅರಣ್ಯದ ಅವತಾರವೇ ಎನ್ನಿಸುವಂತಹುದರೆ, ಮೃಗದ ಕೂಗು ಕತ್ತು ಹಿಚುಕಿದ ಬಡಪಾಯಿಯಂತಿದೆ. ಅವುವುಗಳು ತಮ್ಮ ಹಿಗ್ಗಿನಲ್ಲೂ ವ್ಯಥೆಯಲ್ಲೂ ತೋರ್ಪಡಿಸುವ ಕೂಗುಗಳು ಬಾಳಿನ ಅನೇಕ ಬಗೆಯ ಹಿಗ್ಗು ಕುಗ್ಗುಗಳನ್ನು ನಮಗೆ ವ್ಯಕ್ತಪಡಿಸುತ್ತವೆ. ಇನ್ನು ಬುಲ್ ಬುಲ್, ಶ್ಯಾಮಗಳಂತಹ ಹಕ್ಕಿಗಳು ನುರಿತ ಪಂಡಿತರಾಗಿ ನಾದ ತರಂಗದೊಡನೆ ನಡೆಯುವಾಗ ಮನುಷ್ಯನ ಮನಸ್ಸು ಬೇಕಾದಂತೆ ತಲೆದೂಗಬಲ್ಲುದು. ಹೆಸರಿಲ್ಲದೆ—ಮುಳ್ಳು ಬೇಲಿಯಲ್ಲಿಯೋ, ಕಾಡು ಪೊದೆಯಲ್ಲೋ ಮನೆಮಾಡುವ ಎಷ್ಟೋ ಹೂ ಗುಬ್ಬಿಗಳು ತಮ್ಮ ಜೀವನದ ಉಕ್ಕನ್ನು ರಾಗಲಹರಿಯಲ್ಲಿ ತೋರುತ್ತವೆ. ಇವುಗಳಿಂದ ಮನುಷ್ಯನ ಮನಸ್ಸು ಹಿಗ್ಗಬಹುದು. ಇವುಗಳೆಲ್ಲವುಗಳ ಹಿಂದೆ ನಿಸರ್ಗದ ಜಡ ವಸ್ತುಗಳ ಗಾಯನವಿದೆ, ಅದು ಲಲಿತವೂ ಆಗಬಲ್ಲುದು. ಅದ್ಭುತವೂ ಆಗಬಹುದು. ನಮಗೆ ಸ್ಫೂರ್ತಿಯನ್ನು ಕೊಡಬಲ್ಲುದು. ಭೀತಿಯನ್ನು ಹುಟ್ಟಿಸಬಲ್ಲುದು. ಕಾರ್ಮುಗಿಲುಗಳು ಕೆದರಿ, ಬಿರುಗಾಳಿಗೆ ಮೈಸೊಕ್ಕಿ ನಿಸರ್ಗ ಹುಚ್ಚಾದಾಗ ಬಡಿಯುವ ಸಿಡಿಲು ಕ್ರೌರ್ಯದ ಪರಮಾವಧಿ. ಅದರಂತೆ ಕ್ಷಣಿಕವಲ್ಲವಾದರೂ ಅದ್ಭುತವಾದ ಆರ್ಭಟೆಗಳೆಷ್ಟೋ ಇವೆ. ರೌದ್ರದಲ್ಲಿ ಜ್ವಾಲಾಮುಖಿಯ ಉಕ್ಕನ್ನು ಹೋಲುವ ಆರ್ಭಟೆಗಳೇ ಕಡಮೆ ಎನ್ನುತ್ತಾರೆ. ಅದನ್ನು ಕೇಳಿಯೆ ಅನುಭವಿಸಬೇಕು. ನಾನು ಕೇಳಿದವನಲ್ಲ. ಆದರೆ ನೀರಿನ ಅನೇಕ ಬಗೆಯ ಘೋರ ರಾಗಾಲಾಪಗಳನ್ನು ಕೇಳಿದ್ದೇನೆ. ಉನ್ನತ ಜಲಪಾತವೊಂದು ಮುಂಗಾರು ಮಳೆಯಿಂದ ಕೊಬ್ಬಿ ಜೋಗಿನಂಥ ಸ್ಥಳದಲ್ಲಿ ಗತಿಗೆಟ್ಟು ಧುಮುಕುವಾಗ, ನಮ್ಮ ಶ್ರವಣ ಶಕ್ತಿಗೆ ಅತೀತವಾದ ಧ್ವನಿಯಾಗುತ್ತದೆ. ಅದರ ಘರ್ಜನೆಯ ಮುಂದೆ ಮನುಷ್ಯ ಬಾಯ್ದೆರೆಯಲಾರ. ಮುಂಗಾರು ಮಳೆಯ ಮುಗಿಲು ಕೆದರಿ, ಕಡಲ ತೀರದ ಮೇಲೆ ತನ್ನ ಉಕ್ಕನ್ನು ಚೆಲ್ಲುವಾಗ, ಅದರ ಮೈ ಸೊಕ್ಕಿಗೆ ಬಲಿಯಾಗಿ ಕಡಲು ಮೊರೆಯತೊಡಗಿತೆಂದರೆ, ದಡದಲ್ಲಿನ ಗಿಡಮರಗಳು ಅದುರತೊಡಗಿದುವೆಂದರೆ, ಮೇಲೆ ಮಳೆ ನೀರು ಮತಿಗೆಟ್ಟು ಹೊಯ್ಯತೊಡಗಿತೆಂದರೆ, ಆ ನಿಸರ್ಗದ ರೌದ್ರರೂಪ ವರ್ಣಿಸಲಾರದ್ದು. ಅದರಂತೆ ಕಾಳ್ಗಿಚ್ಚೊಂದು ಹೊಸ ಹಸಿ ಮರಗಳನ್ನೆಲ್ಲ ಕರುಣೆ ಇಲ್ಲದೆ ನುಂಗಲು ಹೊರಟು ಗಾಳಿಯನ್ನು ತನ್ನ ಬೆಂಗಾವಲಿಗೆ ಕರೆದರೆ ಆಗಿನದು ಇನ್ನೊಂದೇ ಬಗೆಯ ರೌದ್ರ. ಇದು ಉಗ್ರತೆಯ ಒಂದು ಮಿತಿಯಾದರೆ ಇನ್ನೊಂದು ತುದಿಯಲ್ಲಿ ಲಾಲಿತ್ಯವನ್ನು ಕಾಣಬಹುದು. ನಿಸರ್ಗ ಸದಾ ರೌದ್ರವಾಗಿಯೇ ಇರುವುದಿಲ್ಲ. ಮೆಲುಗಾಳಿಗೆ ನದಿಯ ತೆರೆಗಳ ಗತಿಯು ಕ್ಷೀಣಿಸಿ ದಡವನ್ನು ಚುಂಬಿಸುವ ಸದ್ದು, ಚಿಕ್ಕ ಪುಟ್ಟ ತೊರೆಗಳು ಲಘು ಓಟದಿಂದ ಉರುಟು ಕಲ್ಲುಗಳ ಮೇಲೆ ಓಡುವಾಗ ಉಂಟಾಗುವ ಕಲಕಲ. ರಾತ್ರಿಯಲ್ಲಿ ಓಮ ಎಲೆಗಳ ಮೇಲೆ ಮುತ್ತಾಗಿ ಹನಿಗೊಂಡು ಒಂದೊಂದೆ ಹನಿ ಉದುರುವಾಗ ಹೊರಡುವ ನಾದ, ಗಾಳಿಯ ಮರಕೊಂಬೆ, ತೆಂಗಿನ ಕೊಂಬೆಗಳೊ ತರಂಗ

ವಾಗಿ ಬರುವ ಗಾಳಿಯ ಪ್ರವಾಹ ಬಡಿದು ಹೊಯ್ಯುವ ಸುಯ್ಲು, ನಿಸರ್ಗದ ಶಾಂತ ವಾದ ಆದರೂ ಶಕ್ತಿಹೀನವಲ್ಲದ ಅನೇಕ ಭಾವಗಳನ್ನು ಮನಸ್ಸಿನಲ್ಲಿ ಮೂಡಿಸಬಲ್ಲುವು. ಇವುಗಳೆಲ್ಲ ಮನುಷ್ಯನಿಗೆ ಕೊಡುವ ಪ್ರೇರಣೆಯು ಕಡಿಮೆಯಾಗಿಲ್ಲ. ನಮ್ಮ ದೇಶದವರು ಬರಿಯ ಕೋಗಿಲೆಯ ಪಂಚಮ ಶ್ರುತಿಯನ್ನು ಕೇಳಿ, ನವಿಲಿನ ಗಾಂಧಾರದ ಮೈ ಕುಲು ಕಿನ ಬೆಡಗಿಗೇ ಮರುಳಾಗಿದ್ದರೆ "ಬೀಥೋವನ್"ನಂಥ ವ್ಯಕ್ತಿ ಬೆಳುದಿಂಗಳ ಗೀತಿಕೆಯನ್ನು ರಚಿಸಿದ; "ಕ್ರಾಸ್", ನೀಲ ಡೇನ್ಯೂಬ್ ಎಂಬ ನದಿಯ ಗೀತವನ್ನು ನಿರ್ಮಿಸಿದ. ನಮ್ಮ ಹಳ್ಳಿಯವರಾದರೂ ಎಷ್ಟೋ ಚಿಕ್ಕಪುಟ್ಟ ಹಕ್ಕಿಗಳ ಗೀತಗಳಿಗೆ ಮರುಳಾಗಿ ಜಾನಪದ ಗೀತಗಳನ್ನು ರಚಿಸಿದ್ದಾರೆ. ಬಲ್ಲವರೆನಿಸಿದ ನಮ್ಮ ಮಾರ್ಗಪದ್ಧತಿಯ ಗಾಯ ಕರೇ ನಿಸರ್ಗದ ಗೀತಕ್ಕೆ ಕಿವುಡರಾಗಿರುವಂತೆ ಕಾಣುತ್ತದೆ. ಅವರು ಕಿವಿಗೊಟ್ಟಲ್ಲಿ ನಿಸರ್ಗ ಅವರಿಗೂ ಪ್ರೇರಣೆಯಾಗಬಲ್ಲುದು.

ಗೀತ ವಾದ್ಯ ಮೇಳಗಳು ಮೂಲತಃ ನಿಸರ್ಗ ಗಾನದ ಪ್ರೇರಣೆಗಳೇ. ನಿಸರ್ಗವು ಮನುಷ್ಯನ ಮೂಲಕವಾಗಿ ಇತರ ಜೀವಿಗಳಿಗೆ ಹರಿಯುವ ಸಂಬಂಧವಲ್ಲವೇ ? ಇಲ್ಲೂ ಗಾನವೆಂಬುದು, ಮಿತ ಬುದ್ಧಿಯ ಶಾಸ್ತ್ರವಲ್ಲದೆ ಹೋದರೆ, ನಿಸರ್ಗದಿಂದ ದೊರೆತ ಅನುಭವಗಳು ಅನೇಕ ಬಗೆಯ ಸುಂದರ ಶಕ್ತಿಗಳಾಗಿ, ನಮ್ಮ ಬದುಕನ್ನು ಸೊಗಯಿಸ ಬಲ್ಲುದು.

**ಗಂಧಗಳಿಂದ**

ಬದುಕಿನ ಹಿಗ್ಗಿಗೆ, ರಸ ಗಂಧ ಸ್ಪರ್ಶಗಳ ಸೀಮೆಯೂ ಸಾಕಷ್ಟು ವಿಶಾಲವಾಗಿದೆ. ನೆಲ ಕಾದು, ಮಳೆ ಬಡಿದು, ಗಾಳಿ ಹೊಸದೊಂದು ಮಣ್ಣಿನ ಕಂಪನ್ನು ಹರಡುವಾಗ, ಬೇಸಗೆಯಲ್ಲಿ ಗಾಳಿ ಹೂಗಳ ಹಂದರವನು ಹಾದು ವಿವಿಧ ಪರಿಮಳಗಳನ್ನು ನಮ್ಮೆದುರು ತಂದು ಬೀರುವಾಗ, ಊರಿನ ಬಯಲುಗಳು ಸುಗ್ಗಿಯಲ್ಲಿ ಹಣ್ಣಾಗಿ ಹುಲ್ಲಿಂದ ಹೊರಡುವ ವಾಸನೆಯನ್ನು ಗಾಳಿ ಮೈಗೆ ಎರಚುವಾಗ, ಮನಸ್ಸು ಹಿಗ್ಗುವುದಿಲ್ಲವೆ ? ಈ ಸ್ಥೂಲ ವಾಸನೆಗಳು ಪ್ರೇರಿಸುವಂತೆ ಮನಸ್ಸನ್ನು ಮಲ್ಲಿಗೆ, ಜಾಜಿ ಮೊದಲಾದ ಹೂವುಗಳು ತುಷ್ಟಿಗೊಳಿಸವೆ ? ಇಲ್ಲೂ ನಿಸರ್ಗದ ಕ್ರೂರತನವನ್ನು ಕಾಣಬಹುದು. ಭೀಭತ್ಸ ರೂಪ ವನ್ನೂ ಕಾಣಬಹುದು. ಸವಿ ಸೊಗಸನ್ನೂ ಕಾಣಬಹುದು. ಮನುಷ್ಯನ ತರ್ಕದಲ್ಲಿ– ಗಂಧವೆನಿಸುವ ವಸ್ತು, ಇನ್ನಿತರ ಪ್ರಾಣಿಗಳಿಗೆ ಬೇಡವಾಗುವುದೂ, ಇವನ ಸುಗಂಧ ಅವಕ್ಕೆ ದುರ್ಗಂಧವೆನಿಸುವುದೂ, ಅವುಗಳ ಮೆಚ್ಚುಗೆಯ ವಾಸನೆಗಳು ಇವನಿಗೆ ದುರ್ಗಂಧವೆನಿಸುವುದೂ ನಿತ್ಯದ ಅನುಭವವಾಗಿದೆ. ಬದುಕು ವಿವಿಧ ಜೀವಗಳಿಗಾಗಿದೆ. ನಮಗೆ ಸಲ್ಲದ್ದು ಜಗತ್ತಿಗೇನೆ ಸಲ್ಲದು—ಎಂದು ತಿಳಿಯುವ ಕಾರಣವಿಲ್ಲ.

ಮನುಷ್ಯ ಬೆಳೆಯಲು, ಅರಳಲು ಅವನ ಶಕ್ತಿಗಳು ಇನ್ನೆಷ್ಟೋ ಹೆಚ್ಚಿಗೆ ಬೆಳೆಯ ಬೇಕು. ಅವು ಎಷ್ಟೂ ಬೆಳೆಯಬಹುದು. ಅನುದಿನ ಆಫೀಸು ಕುರ್ಚಿಯಲ್ಲಿ ಸ್ವರ್ಗವನ್ನು ಕಾಣಲು ಬಯಸುವವನು ಬಯಲಲ್ಲಿ ಓಡಾಡಲು, ಹಳ್ಳಗುಡ್ಡಗಳಲ್ಲಿ ತಿರುಗಾಡಲು, ಸಂಜೆ ಮುಂಜಾನೆಗಳಲ್ಲಿ ದಿಗಂತವನ್ನು ನೋಡಲು ಹವಣಿಸಬೇಕು. ವಿರಾಮ ದೊರೆತಾಗ

ಲೆಲ್ಲ ಅನುಕೂಲತೆ ಬಂದಾಗಲೆಲ್ಲ ಕಡಲ ತೀರದ ಮೇಲೆ ಹಾಯಾಗಿ ಮಲಗುವುದಕ್ಕೋ, ಬೆಟ್ಟದ ತುದಿಯ ಮೇಲೆ ಮೌನವಾಗಿ ಕುಳಿತಿರುವುದಕ್ಕೋ, ಗಿಡಮರಗಳ ಎಡೆಯಲ್ಲಿ ಕಣ್ಣನ್ನು ಹಕ್ಕಿಯಿಂದ ಹೂವಿಗೂ, ಹೂವಿಂದ ಹಕ್ಕಿಗೂ ಹೊರಳಿಸುವುದಕ್ಕೋ ಕಲಿಯ ಬೇಕು. ಪ್ರತಿಯೊಮ್ಮೆಯೂ ಅವನ ಜೀವನ ಇದರಿಂದ ವಿಸ್ತರಿಸೀತು. ತಾಳ್ಮೆ ಔದಾರ್ಯಗಳು ಬೆಳೆದಾವು. ನಿಸರ್ಗದ ರಾಗಾಲಾಪದಲ್ಲೊ ರೂಪರೇಖೆಯಲ್ಲೊ ಮೇಳವಿಸದ ಸ್ವರ, ನಡೆಗಳು ಇಂಥವೇ ಎಂದು ತಿಳಿಯಲು ಅವನು ಶಕ್ತನಾದಾನು. ಅಲ್ಲಿಯ ಜೀವನವನ್ನು ಕಂಡು ಮನುಷ್ಯನು ಮನುಷ್ಯ–ಸಮಾಜದ ಕೃತಕ ನೀತಿಯ ನೆಲೆ ಎಷ್ಟು ಭದ್ರವಾಗಿದೆ ಎಂದು ಅಳೆಯುವುದಕ್ಕೂ ಕಲಿತಾನು.

ಈ ಬಗೆಯಲ್ಲಿ ಇಂದ್ರಿಯಗಳು ಜೀವನಕ್ಕೆ ತಂದೊಪ್ಪಿಸಬಲ್ಲಂಥ ಅನುಭವಗಳ ಸಾಮ್ರಾಜ್ಯ ಮಿತವಿಲ್ಲದ್ದು. ಮನುಷ್ಯ ತನ್ನಲ್ಲಿ ತುಂಬಿಸಿಕೊಳ್ಳಬಹುದಾದಷ್ಟು ಜ್ಞಾನ ವನ್ನು ತುಂಬಿಸಿಕೊಳ್ಳುವುದೇ ಕರ್ತವ್ಯವೆಂದು ತಿಳಿಯಬೇಕು. ಆ ಕೆಲಸಕ್ಕಾಗಿ ತನ್ನ ಇಂದ್ರಿಯಗಳ ಸೂಕ್ಷ್ಮತೆಯನ್ನು ಎಷ್ಟು ಹೆಚ್ಚಿಸಬಹುದೊ ಅಷ್ಟು ಹೆಚ್ಚಿಸಿಕೊಳ್ಳಬೇಕು.

## ೧೧ ಸ್ವಾರ್ಥದ ಮಿತಿ

### ಹಾನಿ ಕೊಡದ ಸುಖ

ವ್ಯಕ್ತಿ ಆದಷ್ಟು ಪೂರ್ಣವಾದ ಜೀವನವನ್ನು ಮಾಡಬೇಕು—ಎಂದೊಡನೆಯೆ ತನ್ನ ಸುಖವನ್ನೂ, ಸುಖಸಾಧನಗಳನ್ನೂ ಆದಷ್ಟು ಹೆಚ್ಚಿಸಿಕೊಳ್ಳಬೇಕು ಎಂಬುದನ್ನು ಒಪ್ಪಿದಂತಾಯಿತು. ಆದರೆ ಈ ಮಾತು ಒಂದು ವಿಧದಿಂದ ಮಾತ್ರ ನ್ಯಾಯ. ಜೀವನದ ಸುಖಗಳಿಗೆ ತಾನೊಬ್ಬ ಪಾಲುಗಾರನು ಎಂದು ವ್ಯಕ್ತಿ ತಿಳಿಯುವಂತೆ ಇತರ ಜೀವಿಗಳೂ ತಂತಮ್ಮ ಪಾಲುಗಳಿಗೆ ಅಧಿಕಾರವುಳ್ಳವರು ಎಂದು ತಿಳಿಯಬೇಕು. ಹೀಗಿರುವಲ್ಲಿ ವ್ಯಕ್ತಿ ಎಲ್ಲಿಯತನಕ ಇತರ ಜೀವಿಗಳ ಬದುಕಿನ ಅವಶ್ಯವಾದ ಸಲಕರಣೆಗಳನ್ನು ಅಪಹರಿಸುವುದಿಲ್ಲವೋ ಅಲ್ಲಿಯತನಕ ಅವನ ಸ್ವಾರ್ಥಕ್ಕೆ ಅವಕಾಶವಿದೆ. ಇತರರ ದುಃಖದ ಮೇಲೆ ಅವನ ಸುಖವು ಹೊಂದಿರಬಾರದು. ನಿಸರ್ಗ ನಿರೀಕ್ಷಣೆಯಿಂದ ಪಡೆಯಬಹುದಾದ ಸುಖಗಳಾಗಲಿ ಕಲ್ಪನಾ ಸೃಷ್ಟಿಗಳಿಂದ ಅಂದರೆ ಕಾವ್ಯ, ಕಲೆ ಮೊದಲಾದುವುಗಳಿಂದ ದೊರೆಯುವ ಸುಖಗಳಾಗಲಿ ವ್ಯಕ್ತಿಯನ್ನೇ ಅವಲಂಬಿಸಿರುವವುಗಳು. ಒಬ್ಬನು ಕಡಲನ್ನು ನೋಡಿ ಆನಂದಪಡುತ್ತಿದ್ದಾನೆ ಎಂಬುದರಿಂದ ಇನ್ನೊಬ್ಬನು ಅದೇ ಮಾದರಿಯಲ್ಲಿ ಸುಖಪಡಲು ಯಾವ ಅಡಚಣೆಯೂ ಇಲ್ಲ. ಇಂಥ ಸುಖಗಳನ್ನು ಹೊಂದಿ ಮನುಷ್ಯ ಕೆಟ್ಟಾನು ಎಂಬ ಭೀತಿಯೂ ಇಲ್ಲ.

### ಸುಖ ಸಾಧನಗಳು

ಎಲ್ಲಿ, ಮನುಷ್ಯನ ಸುಖಕ್ಕೂ ಬೆಳವಣಿಗೆಗೂ ವಸ್ತು ಒಡವೆಗಳ ಸಂಗ್ರಹ ಕಾರಣವಾಗುತ್ತದೆಯೊ, ಇತರ ಜೀವಿಗಳ ಮೇಲೆ ಅಧಿಕಾರ ನಡೆಸಬೇಕಾಗುತ್ತದೆಯೋ, ಅಲ್ಲಿ ಸ್ಪರ್ಧೆಯುಂಟಾಗುತ್ತದೆ. ಪ್ರಪಂಚದ ಭೋಗ್ಯ ಸಂಪತ್ತನ್ನು ಬಲಿಷ್ಠರಾದ ಕೆಲವರೇ ಹಂಚಿಕೊಂಡರೆ ಇನ್ನುಳಿದವರ ನೆಲೆ, ಸುಖಗಳಿಗೆ ಅವಕಾಶವಿಲ್ಲದಾಗಬಹುದು. ಭಂಡವಾಳುಗಾರಿಕೆ ಈ ರೀತಿಯಿಂದ ಮನುಷ್ಯ ಸಮಾಜದಲ್ಲಿ ಮಾಡುತ್ತಿರುವ ಹಾನಿ ಬಹಳ. ಹಲವು ದೇಶಗಳಲ್ಲಿ ರೂಢಿಯಾಗಿರುವ ಧನಸತ್ತೆಯ ಪದ್ಧತಿಯು ಬಹು ಜನರ ಸುಖವನ್ನಪಹರಿಸಿ ಕೆಲವರು ಸುಖಪಡಲು ಕಾರಣವಾಗಿದೆ. ಜನಜೀವನಕ್ಕೆ ಅವಶ್ಯವಾದ ಊರಿನ ಕೃಷಿಕ ಭೂಮಿಗಳು ಊರಿನ ಸಾಲ್ಕಾರು ಜನರ ಕೈಗೆ ಬಂದು, ಉಳಿದವರು ತಮ್ಮದೆಂಬ ಎಡೆ ಇಲ್ಲದೆ, ಅನ್ನಕ್ಕೆ ನರಳುವಂತಾಗಿದೆ. ಅದೇ ಮಾದರಿಯಲ್ಲಿ ಗನಿಗಳ ಉತ್ಪನ್ನವೂ ಕಡಲಿನ ಉತ್ಪನ್ನವೂ ಉಳಿದವರಿಗಿಲ್ಲದೆ ತೀರ ಕೆಲವರ ಸ್ವತ್ತಾಗುವುದುಂಟು. ಜನಜೀವನದ ಬದುಕು ಸಾಂಗವಾಗಿ ಸಾಗಬೇಕಾದರೆ ಸಮಾಜದ ಮುಖ್ಯ ಸುಖ ಸಾಮಾಗ್ರಿಗಳಾಗಲಿ ಅನ್ನ ಅರಿವೆಗಳಾಗಲಿ, ಅವುಗಳನ್ನೊದಗಿಸುವ ಸಾಧನಗಳಾಗಲಿ ಒಟ್ಟು ಸಮಾಜದ

ಹಕ್ಕಿನದಾಗಬೇಕಲ್ಲದೆ ಕೆಲವರೇ ಬಾಚಿ, ಬಗರುವ ಸ್ಥಿತಿಯಲ್ಲಿರಕೂಡದು. ಈ ದೃಷ್ಟಿಯಿಂದ ನಾವು ಸಮಾಜವಾದವನ್ನು ಒಪ್ಪಲೇಬೇಕು. ಮಾತ್ರವಲ್ಲ ಈ ದಿನದಲ್ಲಿ ವಾಹನ, ಯಂತ್ರಸಾಧನ ಮೊದಲಾದುವುಗಳಿಂದಾಗಿ ಪ್ರಪಂಚವೆಲ್ಲವೂ ಒಂದೇ ಸಮಾಜ ಎನಿಸಿಕೊಂಡಿದೆ. ನಮ್ಮ ದೇಶಕ್ಕೆ ಬೇಕಾಗುವ ಯಂತ್ರ ಸಲಕರಣೆಗಳು ನಮಗೆ ಯುರೋಪಿನಿಂದ ಬರಬೇಕಾದೀತು. ಅವರಿಗೆ ಬೇಕಾಗುವ ಹತ್ತಿಯನ್ನು ನಾವು ಒದಗಿಸಬೇಕಾದೀತು. ಈ ವಿಶಾಲದೃಷ್ಟಿಯಿಂದ ದೇಶ ವಿದೇಶಗಳೊಳಗಿನ ಆರ್ಥಿಕ ಯೋಜನೆಗಳು ನಿರ್ಮಾಣವಾಗದಿದ್ದರೆ, ಸಮರಗಳು ಅನಿವಾರ್ಯವಾಗುತ್ತವೆ. ಶಾಂತಿ ಸಂಧಾನಗಳು ಬರಿಯ ಕಾಲಕ್ಷೇಪದ ಸೋಗುಗಳಾಗುತ್ತವೆ.

**ಎಲ್ಲ ಜೀವಗಳ ಹಕ್ಕು**

ಮುಖ್ಯ ಸಾಧನಗಳನ್ನು ಸಾಮಾಜಿಕವೆಂದು ಮಾಡುವಾಗಲೂ ಬರಿಯ ಇಂದಿನ ಸಮಾಜವೊಂದನ್ನೆ ನಾವು ಎಣಿಸಿದರೂ ತಪ್ಪಾಗುತ್ತದೆ. ಊರಿನ ಕಾಡುಗಳಾಗಲಿ, ಗನಿಗಳಲ್ಲಿನ ಕಲ್ಲಿದ್ದಲು ಪೆಟ್ರೋಲು, ಚಿನ್ನಗಳಾಗಲಿ, ಕಡಲಿನ ಮೀನುಗಳಾಗಲಿ ಈಗಿನ ಒಂದು ತಲೆಮಾರಿನವರಿಗೆ ಮೀಸಲಾಗಿಟ್ಟ ಬದುಕುಗಳಲ್ಲ. ಅವುಗಳಲ್ಲಿ ಹಲವು ನಿನ್ನಿನ ಜನತೆಗೆ ದೊರೆತಿರದು. ಈ ದಿನ ಹಲವಾರು ಅಂಥ ಗನಿಗಳೂ, ಸಂಪತ್ತುಗಳೂ ನಮ್ಮ ಪಾಲಿಗೆ ದೊರಕಿರುತ್ತವೆ ನಿಜ. ಬರಿಯ ನೂರಿನ್ನೂರು ವರ್ಷಗಳಲ್ಲೋ, ಸಾವಿರ ವರ್ಷಗಳಲ್ಲೋ ಅವನ್ನೆಲ್ಲ ಮುಗಿಸಿ ಬರಿದು ಮಾಡುವ ದೃಷ್ಟಿಯಿಂದ, ಒಂದು ಸಮಾಜವಾಗಲಿ ಒಂದು ತಲೆಮಾರಿನ ಜನರಾಗಲಿ, ವರ್ತಿಸಬಾರದು. ನಮ್ಮ ವಸ್ತ್ರ ಒಡವೆಗಳ ದೃಷ್ಟಿಗೂ ಒಂದು ಆಯು, ಅಳತೆಯನ್ನಿಟ್ಟುಕೊಂಡಿರಬೇಕು. ಮನುಷ್ಯ ಕುಟುಂಬವು ಪ್ರಪಂಚದ ವಸ್ತು ಒಡವೆಗಳನ್ನು ಎಷ್ಟೊಂದು ಹಕ್ಕಿನಿಂದ ಬಯಸುತ್ತಿದೆಯೊ ಅದೇ ಬಗೆಯ ಹಕ್ಕು, ಪ್ರಪಂಚದ ಇತರ ಜೀವಿಗಳಿಗೂ ಸಸ್ಯಗಳಿಗೂ ಇರಲಾರದೇ ? ಊರಿನ ಕಾಡುಗಳ ಪಾರುಪತ್ಯವೆಲ್ಲ ಮನುಷ್ಯನಿಗೇನೆ ಸಂದುವೆ ? ಕಡಲಿನ ಮೀನುಗಳೆಲ್ಲ ಅವನ ಹೊಟ್ಟೆಗೇನೆ ನಿರ್ಮಾಣವಾದುವೆ ? ಸುಂದರವಾದ ಹಕ್ಕಿಗಳ ಗರಿ, ತುಪ್ಪಳಗಳು ಯುರೋಪಿನ ಮಹಿಳೆಯರ ಟೋಪಿಗಳನ್ನು ಅಲಂಕರಿಸಲು ನಿರ್ಮಾಣವಾದುವೇ— ಎಂಬುದನ್ನು ನಾವು ವಿಚಾರಿಸಬೇಕು. ಮನುಷ್ಯ ತನ್ನ ಬದುಕಿನ ಎಡೆಯನ್ನೂ ಅವಶ್ಯಕತೆಯನ್ನೂ ಇನ್ನೊಬ್ಬನು ಅಪಹರಿಸಬಾರದು ಎಂದು ಹೇಗೆ ತಿಳಿಯುತ್ತಾನೆಯೋ, ಹಾಗೆಯೇ ಇತರ ಜೀವಿಗಳೂ ಬದುಕಿನ ನೆಲೆಯನ್ನು ಕೇಳಿಯೇ ಕೇಳುತ್ತವೆ. ನಿಸರ್ಗದಲ್ಲಿ ಬಲಿಷ್ಠನಾದವನಿಗೆ ಮಾತ್ರ ಬಾಳ್ವೆ ಎಂಬ ಸಿದ್ಧಾಂತ ಅನೇಕ ಬಾರಿ ನಮಗೆ ಒಪ್ಪಿಗೆಯಾಗಿ ಕಂಡುಬಂದರೂ, ಜೀವನದ ಒಟ್ಟು ಹಿತಕ್ಕೆ ಅದೊಂದೇ ನ್ಯಾಯವಾದ ಸಿದ್ಧಾಂತವಲ್ಲ. ಮನುಷ್ಯ ಎಷ್ಟೆಷ್ಟು ಇತರರ ಸುಖವನ್ನು ಅಪಹರಿಸುತ್ತಾನೋ ಅಷ್ಟು ಒಟ್ಟು ಜೀವನ ಬರಿದಾಗುತ್ತದೆ. ಅದರಿಂದ ನಾಳಿನ ಮನುಷ್ಯಜೀವನವೂ ವ್ಯಥೆಗೆ ಗುರಿಯಾಗಬಹುದು. ಪಶುಪ್ರಾಣಿಗಳ ಜೀವನವನ್ನು ಪರಿಶೀಲಿಸಿದವರಿಗೆ ಈ ಮಾತು ಚೆನ್ನಾಗಿ ತಿಳಿದೀತು. ಪಶುವಿಜ್ಞಾನಿಗಳು ಜೀವಿಗಳ ಸಮತೆ ("Balance of life") ಎಂಬೊಂದು

ತತ್ವವನ್ನು ಒಪ್ಪುತ್ತಾರೆ. ವ್ಯಕ್ತಿ ಬರಿಯ ತನ್ನೊಬ್ಬನನ್ನೇ ನೋಡಿಕೊಂಡು ವ್ಯವಹರಿಸುವ ರೀತಿಯಿಂದ ಸಮಾಜದ ಇಂದಿನ ಮತ್ತು ನಾಳಿನ ಜೀವನಗಳೆರಡಕ್ಕೂ ಧಕ್ಕೆ ಬರುತ್ತದೆ. ಜೀವಜೀವಿಗಳು ಪರಸ್ಪರ ಒಂದನ್ನೊಂದು ಹೊಂದಿಕೊಂಡಿವೆ. ಮನುಷ್ಯ ಕಾಳನ್ನು ತಿಂದು ಬೆಳೆಯುತ್ತಾನೆ. ಅವನ ಆಹಾರಕ್ಕೆ ಎತ್ತು, ದನಗಳು ನೆರವಾಗಬೇಕು. ಅವನು ಬೆಳೆದ ಬೆಳೆ ಸಮೃದ್ಧಿಯಾಗಲು ನೆಲದಲ್ಲಿ ಸಾರಜನಕವನ್ನು ಒದಗಿಸುವ ಬೆಕ್ಟೀರಿಯಗಳಿಂದ ತೊಡಗಿ, ಪರಾಗವಿಶ್ರಣ ಮಾಡಿ ಕಾಳುಗಳಿಗೆ, ಬೀಜಗಳಿಗೆ ಕಾರಣವಾಗುವ ಪತಂಗಗಳ ತನಕ ಇರಬೇಕು. ಅವನ ಬೆಳೆಯನ್ನು ಹಾಳು ಮಾಡುವ ಇಲಿಗಳ ನಾಶಕ್ಕೆ ಹಾವುಗಳು ಬೇಕು. ಕ್ರಿಮಿಕೀಟಗಳ ನಾಶಕ್ಕೆ ನೂರಾರು ಬಗೆಯ ಹಕ್ಕಿಗಳು ಬೇಕು. ಇವೆಲ್ಲ ಮಾನವನ ಹೇಳಿಕೆಯಂತೆ ವರ್ತಿಸದಿದ್ದರೂ ಅವಿಲ್ಲದೆ ಮನುಷ್ಯರ, ಕೃಷಿಕ ಜೀವನ ಸಾಗಲಾರದು. ಆದುದರಿಂದಲೇ ವ್ಯಕ್ತಿ ತನ್ನ ಸ್ವಾರ್ಥವನ್ನು ಸಾಧಿಸುವಾಗಲೂ, ತನಗೆ ಎಷ್ಟು ಕಡಿಮೆ ಸಾಕೋ ಅಷ್ಟರಿಂದಲೇ ತೃಪ್ತನಾಗಬೇಕು. ಇತರ ಪ್ರಾಣಿಗಳ ಸುಖ ಸಾಧಿಸದವನು ತನ್ನ ಸುಖವನ್ನೂ ಸಾಧಿಸಲಾರ.

**ಮಾನಸಿಕ ಬಂಧನ**

ಮನುಷ್ಯನ ಸುಖಸಾಧನಗಳು, ವಸ್ತು ಒಡವೆಗಳನ್ನು ಹೊಂದಿಕೊಂಡಿದ್ದಂತೆಯೇ ಇತರ ಜೀವಿಗಳನ್ನೂ, ಅವುಗಳ ಶ್ರಮವನ್ನೂ ಹೊಂದಿಕೊಂಡಿದೆ ಎಂದು ಹೇಳಿದೆ. ಬರಿಯ ಮನುಷ್ಯಕುಟುಂಬ ಒಂದನ್ನೇ ಎಣಿಸುವ. ವ್ಯಕ್ತಿಯ ಸಂಸಾರ ಸುಖಕ್ಕೆ ಕಾರಣರಾದ ವ್ಯಕ್ತಿಗಳಿದ್ದಾರೆ. ಎರಡನೆ ಹಂತದಲ್ಲಿ ವ್ಯಕ್ತಿಗೆ ಸೇವೆ ಸಲ್ಲಿಸುವ ಆಳುಗಳಿರಬಹುದು. ಇದಲ್ಲದೆ ಮೂರನೆಯ ವರ್ಗವೂ ಇದೆ. ಒಬ್ಬನ ಪ್ರತಿಷ್ಠೆಗೂ, ವರ್ಚಸ್ಸಿಗೂ ಕಾರಣರಾದ ವ್ಯಕ್ತಿಗಳೂ ಇರುತ್ತಾರೆ. ಎರಡನೆಯದಕ್ಕೆ ಉದಾಹರಣೆಯಾಗಿ ಒಂದು ಗಿರಣಿಯ ಕೂಲಿಗಾರರನ್ನೂ ಅವರ ಯಜಮಾನನನ್ನೂ ಸೂಚಿಸಬಹುದು. ಮೂರನೆಯದಕ್ಕೆ ಉದಾಹರಣೆಯದಾಗಿ ಅರಸ, ಅವನ ಪ್ರಜೆ, ಧರ್ಮಗುರು ಅವನ ಶಿಷ್ಯವರ್ಗ —ಇವರನ್ನು ಉದಹರಿಸಬಹುದು. ಎಲ್ಲಿಯ ತನಕ ವ್ಯಕ್ತಿ ತನ್ನ ಸುಖಕ್ಕಾಗಿ, ಹಿರಿಮೆಗಾಗಿ, ವರ್ಚಸ್ಸಿಗಾಗಿ ಪ್ರಾಧಾನ್ಯ ಕೊಡುತ್ತಾನೋ, ಅಲ್ಲಿಯ ತನಕ ಅವನ ಅಧೀನದಲ್ಲಿ ದುಡಿಯುವ ಜನರಿಗೆ ಸಂಪೂರ್ಣ ಬೆಳವಣಿಗೆಯ ಅವಕಾಶ ದೊರೆಯದು. ಮನುಷ್ಯನ ಪರಿಪೂರ್ಣ ಬೆಳವಣಿಗೆಯು ಅವನ ಶಾರೀರಿಕವಾದ ಬೆಳವಣಿಗೆಯನ್ನು ಹೊಂದಿಕೊಂಡಷ್ಟೇನೇ ಅದಕ್ಕೊಂದು ಕಡಮೆಯಲ್ಲದ ರೀತಿಯಲ್ಲಿ, ಮಾನಸಿಕವಾದ ಬೆಳವಣಿಗೆಯನ್ನೂ ಹೊಂದಿಕೊಂಡಿದೆ. ಆದುದರಿಂದ ಅದು ಮತ್ತಷ್ಟು ಪ್ರಧಾನವಾದ ಸಂಗತಿ. ಮನುಷ್ಯನ ಶಾರೀರಿಕ ಬಂಧನವನ್ನು ಒಮ್ಮೆಗೆ ಬಿಡಿಸಬಹುದು. ಶರೀರದ ಅಡಚಣೆಗಳನ್ನು ತೊಡೆದಾದ ನಂತರ ಅವನು ಬೆಳೆಯಬಹುದು. ಆದರೆ ಮನಸ್ಸಿಗೆ ಒಮ್ಮೆ ತೊಡಿಸಿದ ನಿರ್ಬಂಧಗಳನ್ನು ಬಹು ಕಾಲದ ಬಳಿಕ ತೊಡೆದು ಹಾಕಿದರೆ, ಹಿಂದಿನ ಬಂಧನದ ಪರಿಣಾಮ ಹೋಗುವುದು ಕಷ್ಟವಾಗುತ್ತದೆ. ಅಂಥ ಅನ್ಯಾಯವಾಗದಿರಬೇಕಾದರೆ— ಆರಂಭದಿಂದಲೂ, ಪ್ರತಿಯೊಂದು ಮನಸ್ಸೂ ಪೂರ್ಣವಾಗಿ ಬೆಳೆಯಲು ಹಕ್ಕುಳ್ಳದ್ದು

ಎಂದು ನಾವು ತಿಳಿಯುವುದೇ ಯೋಗ್ಯ ಮಾರ್ಗ.

**ಕುಟುಂಬದಲ್ಲಿ**

ಸಂಸಾರ ಒಂದನ್ನೇ ನೋಡಹೋದರೂ ಈ ಮಾತಿನ ಆವಶ್ಯಕತೆ ನಮಗೆ ಕಾಣುತ್ತದೆ. ಗಂಡಸು ತನ್ನ ಅಧಿಕಾರದಿಂದಲೇ ಮನೆಯನ್ನು ನಡೆಯಿಸುವವನಾದರೆ ಅವನ ಹೆಂಡತಿಯು ಪೂರ್ಣ ಬೆಳವಣಿಗೆ ಹೊಂದಲಾರಳು. ಮನಸ್ಸಿಗೆ ಸ್ವತಂತ್ರ ವಿಚಾರಶಕ್ತಿಯ ಅವಕಾಶ ಬೇಕು. ಅದು ಬೆಳೆಯಲು ಅನುಕೂಲತೆಗಳೂ ಬೇಕು. ಎಷ್ಟೋ ಮತಗಳ ಜನ ಸಮುದಾಯಗಳಲ್ಲಿ ಸ್ತ್ರೀಗೆ ಮನ್ನಣೆಯೂ ಇಲ್ಲ; ಸರಿಸಮಾನತೆಯೂ ಇಲ್ಲ, ಸ್ತ್ರೀಗೆ ವೇದಗಳನ್ನೋದುವ ಅಧಿಕಾರವಿಲ್ಲ—ಎಂಬವರಿದ್ದಾರೆ. ಸ್ತ್ರೀಗೆ ಪತಿಯೇ ದೇವರೆಂದು ಅವಳ ವಿಚಾರ ಸ್ವಾತಂತ್ರ್ಯಕ್ಕೆ ಆತಂಕ ಹೊರಿಸಿದ ಗುರುಗಳಿದ್ದಾರೆ. ಅವರನ್ನು ಕೇವಲ ವಿಷಯೋಪಭೋಗದ ವಸ್ತುಗಳೆಂದು ತಿಳಿದು ಅಂತಃಪುರದಲ್ಲಿ ತುಂಬಿಸಿಕೊಂಡ ಅರಸುಗಳು, ಮನುವಿನ ಕಾಲದಿಂದ ತೊಡಗಿ ಇಂದಿನ ನವಾಬರ ಕಾಲದ ತನಕವೂ, ಬಂದಿದ್ದಾರೆ. ಸಾಂಪತ್ತಿಕ ಅನುಕೂಲತೆ ಇದ್ದರೆ ನಾಲ್ವರು ಹೆಂಡಿರ ನಾಯಕನಾಗುವುದು ತಪ್ಪಲ್ಲ ಎಂಬುದು ಹಲವರ ತಿಳುವಳಿಕೆ. ಈ ಮನೋವೃತ್ತಿಗೆ ಮತದ ಬೆಂಬಲ, ಪರಂಪರೆಯ ಬೆಂಬಲ, ದೊರೆಯುತ್ತಿರುವುದರಿಂದ-ಗಂಡು ತನ್ನ ಹಕ್ಕನ್ನು ಕಳೆದುಕೊಂಡಿಲ್ಲ. ಇತ್ತ ಯುಗಯುಗದ ದಾಸ್ಯದಿಂದ ಹೆಂಗಸು ತನಗೂ ಒಂದು ಸ್ವತಂತ್ರವಾದ ಮನಸ್ಸಿದೆ. ಅಧಿಕಾರವಿದೆ-ಎಂಬುದನ್ನು ಮರೆಯುವುದೂ ಸಾಧ್ಯವಾಗಿದೆ.

**ಭಂಡವಳುಗಾರಿಕೆಗಾಗಿ**

ಈಗ ಎರಡನೆಯ ಮಟ್ಟದ ಉದಾಹರಣೆ: ಒಬ್ಬ ಧನಿ ತನ್ನ ಕಾರ್ಖಾನೆಯ ಶ್ರಮಗಾರರ ಮೇಲಿನ ನಾಯಕ. ಅವರಿಗೆ ಅನ್ನಕೊಡುತ್ತಾನೆ—ಎನ್ನುವುದರಿಂದ ಆಳು, ಧನಿ ಎಂಬ ಸಂಬಂಧ ಅವರಲ್ಲಿ ನಿಂತಿದೆ. ಈ ಆರ್ಥಿಕ ಸಂಬಂಧ ರಾಜಕೀಯವನ್ನು ಹೊಂದಿದೆ. ಆತನಿರುವ ನಾಡಿನಲ್ಲಿ ಊರಿನ ಆಡಳಿತೆ ಭಂಡವಳುಗಾರರ ಕೈಯಲ್ಲಿರುವಷ್ಟು ದಿನ ಹೆಚ್ಚಿನ ಸುಖ ಸಾಧನಗಳು ಅವನವೇ. ಅವನ ಕಾರ್ಖಾನೆಯ ಜನರು ಗುಲಾಮರಂತೆ. ಈ ಕೃತಿ ಸಾಧ್ಯವಾಗಲು ಅವನ ದೇಶದ ರಾಜಕೀಯ ಆವರಣದಲ್ಲಿ ಭಂಡವಳುಗಾರರ ನೀತಿಯನ್ನು ಎತ್ತಿ ಹಿಡಿಯುವ ಮನೋವೃತ್ತಿ ಇರಬೇಕಾಗುತ್ತದೆ. ಪತ್ರಿಕೆಗಳೂ, ಪುಸ್ತಕಗಳೂ ಅದನ್ನು ಸಾರಬೇಕು. ಶಾಲೆಗಳು ಚಿಕ್ಕಂದಿನಿಂದ ಕೂಲಿಕಾರರ ಮಕ್ಕಳ ಮನಸ್ಸಿನಲ್ಲಿ ಅದನ್ನೇ ಬಿಂಬಿಸಬೇಕು. ಕೂಲಿಕಾರ ಜನರಲ್ಲಿ ಸಮಾನತೆಯನ್ನು ಬಯಸುವ ಸ್ವಾತಂತ್ರ್ಯವನ್ನು ಬಯಸುವ ಆವರಣ, ಆಸೆಗಳಿರಕೂಡದು. ಹೀಗಾಗಿ ಭಂಡವಳುಗಾರರೇ ತುಂಬಿರುವ ದೇಶಗಳಲ್ಲಿ ಜನರ ಶಿಕ್ಷಣದ ಸಲಕರಣೆಗಳು, ನೀತಿಗಳು, ಭಂಡವಳುಗಾರರ ಹಿತಕ್ಕಾಗಿಯೇ ಇರುತ್ತವೆ. ಜನರ ಮನಸ್ಸನ್ನು ರೂಪಿಸುವ ಪತ್ರಿಕೆಗಳು, ರೇಡಿಯೋ. ಪುಸ್ತಕಗಳು, ಶಾಲೆಗಳು, ಸೂಕ್ಷ್ಮವಾಗಿ ಜನಸಾಮಾನ್ಯರ ಮನಸ್ಸಿಗೆ ಮಂಕನ್ನೆರಚುತ್ತ, ಸ್ವತಂತ್ರ ವಿಚಾರ ಶಕ್ತಿಯ ಅವಕಾಶವನ್ನು ತಪ್ಪಿಸುತ್ತ ಸಾಗುತ್ತವೆ. ಶ್ರೀಮಂತನ ಮಗ ಶ್ರೀಮಂತಿನಾಳಿಗಿಲು ಯುವುದಕ್ಕೂ ಕೂಲಿಯ ಮಗ

ಕೂಲಿಯಾಗಿ ಉಳಿಯುವುದಕ್ಕೂ ಎಷ್ಟೆಲ್ಲ ಪರಿಸ್ಥಿತಿಗಳು ಇರಬೇಕೋ ಅವೆಲ್ಲವನ್ನು ಕಲ್ಪಿಸುತ್ತವೆ.

**ಗುರು**

ಮೂರನೆಯ ಸಂಬಂಧ—ರಾಜ–ಪ್ರಜೆ, ಗುರು–ಶಿಷ್ಯರದು. ಇತಿಹಾಸವನ್ನು ಪರಿಶೀಲಿಸಿದಲ್ಲಿ, ನಮ್ಮ ಮಾನಸಿಕ ಬೆಳವಣಿಗೆಗೆ ತಡೆಯಾದವರಲ್ಲಿ ಪರಂಪರೆಯ ಅರಸರು, ಪರಂಪರೆಯ ಗುರುಗಳು ಅತಿ ಹೆಚ್ಚಿನವರೆಂದು ಕಾಣುತ್ತದೆ. ಸಣ್ಣದೊಂದು ಕಾಡು ಜನರ ಕುಟುಂಬವಾಗಲಿ, ವಿಶಾಲವಾದ ಕೆಥೋಲಿಕ್ ಸಂಸ್ಥೆಯಾಗಲಿ, ಹಿಂದೂ ಧರ್ಮದ ಮಧ್ಯಮತರದ ಮತಪಂಗಡಗಳಾಗಲಿ ಕುಂಠಿತವಾಗಿರುವುದು, ಅವು ಅವುಗಳಿಗೆ ಸಿಲುಕಿದ ಜನವೃಂದವು ಪ್ರಪಂಚಕ್ಕೆ ಅನ್ವಯಿಸುವ ಧಾರ್ಮಿಕ ವಿಚಾರಗಳಲ್ಲಿ ಸಣ್ಣ ಬುದ್ಧಿಯವರಾಗಿರುವುದು. ಅವರವರ ಗುರುಗಳ ಪ್ರಾಬಲ್ಯದಿಂದಾಗಿ. ಸಣ್ಣ ಜನರ ಒಂದು ಪಂಗಡವಾದರು ಸರಿಯೆ–ಅವರಲ್ಲಿ ಬುದ್ಧಿವಂತನಾದವನ ಮಾತನ್ನು ಉಳಿದವರು ಕೇಳುತ್ತಾರೆ. ಆದರಿಂದ ಅವನು ಉಳಿದವರ ಮೇಲೊಂದು ವರ್ಚಸ್ಸನ್ನು ಬೀರುತ್ತಾನೆ. ಇವರಲ್ಲಿ ಮೊದಲಿನ ಗುರುವು ತನ್ನ ಜನರ ಹಿತಕ್ಕಾಗಿ ದುಡಿದು, ಅವರಿಗೆ ತಿಳಿಯದ ಸಂಗತಿಗಳಲ್ಲಿ ತನಗೆ ತಿಳಿದುದನ್ನು ಸಲ್ಲಿಸಿ, ಗುರು ಸ್ಥಾನವನ್ನು ಗಳಿಸಿಕೊಂಡ. ತನ್ನ ಜನಗಳು ಬೇನೆಯಿಂದ ನರಳಿದಾಗ ತನಗೆ ತಿಳಿದ ಮದ್ದುಗಳಿಂದ ಗುಣಪಡಿಸಿದ. ತನ್ನ ಜನರು ಕ್ಷಾಮಕ್ಕೋ, ಸಾವಿಗೋ ಭೀತಿಗೊಂಡು ಅದೇನೆಂದು ಕೇಳಿದಾಗ, ತನಗೆ ಇದ್ದ ತಿಳಿವನ್ನು ಅವರ ಮುಂದೆ ಇರಿಸಿ, ಆಗಿನ ಕಾಲದ ಅವರಿಗೆ ಒಂದು ಸಮಾಧಾನ ತಂದ. ಹೀಗೆ ಕಾಲಮಾನದ ದೃಷ್ಟಿಯಲ್ಲಿ ತಮಗೆ ತಿಳಿದ ಪಾರಮಾರ್ಥಿಕ ಬೆಳಕನ್ನು ಹರಡುವವರಲ್ಲಿ ಮಹಮ್ಮದ್, ಯೇಸು, ಬುದ್ಧ, ಜರತುಷ್ಟ್ರ ಮೊದಲಾದವರು ಮಹಾ ವ್ಯಕ್ತಿಗಳೆಂಬ ಮಾತು ನಿರ್ವಿವಾದ. ಅವರ ಹಿರಿಮೆಯಿಂದ ಶಿಷ್ಯರು ಅವರ ಸುತ್ತು ಕಲೆತರು. ಅವರ ಶಿಷ್ಯರಿಂದ ಮತಗಳು, ಸಂಸ್ಥೆಗಳು, ಗುರುಪರಂಪರೆಗಳೆಂದು ಸರಾಗವಾಗಿ ನಡೆಯತೊಡಗಿದವು. ಆಗ ಜನಜೀವನದ ಮನಸ್ಸಿನಲ್ಲಿ ಕ್ರಮೇಣ ದಾಸ್ಯ ಪ್ರವೃತ್ತಿಯು ಉಂಟಾಗತೊಡಗಿತು. ಮೂಲ ಗುರುವಿನ ಹಿರಿತನ ಅವನ ಶಿಷ್ಯರಲ್ಲಾಗಲಿ, ಶಿಷ್ಯರ ಶಿಷ್ಯರಲ್ಲಾಗಲಿ ಉಳಿಯುವುದು ಸಾಧ್ಯವಿಲ್ಲ. ಅಲ್ಲದೆ ಒಬ್ಬ ಗುರು, ತನ್ನ ಆವರಣದ ಮಿತಿಯಿಂದ, ಕಾಲಮಾನದ ಮಿತಿಯಿಂದ ಹೇಳಿದ ಮಾತುಗಳು, ಚಿರಕಾಲಕ್ಕೂ ಒಪ್ಪತಕ್ಕವು ಎಂದು ತಿಳಿಯುವುದು ಬುದ್ಧಿಗೇಡಿತನ.

**ಗುರು ಪರಂಪರೆ**

ಪರಂಪರೆಯಿಂದ ಗುರುವಾಗಿ ಬಂದವರು ಸ್ವಂತ ಪ್ರಭಾವದಿಂದ ಸುತ್ತಲಿನ ಜನರನ್ನು ಆಳಲಾರರು. ಮೂಲ ಗುರುವಿನಲ್ಲಿದ್ದ ಸದ್ಗುಣಗಳು ಶಿಷ್ಯರಲ್ಲಿ ಕಾಣಿಸದಿರುವುದೇ ಹೆಚ್ಚು. ಆದರೂ ಜನತೆಯಿಂದ ಸದಾ ಮನ್ನಣೆ ಬರಬೇಕು ಎಂಬ ಬಯಕೆ ಇದ್ದೇ ಇರುತ್ತದೆ. ಈ ವರ್ಚಸ್ಸನ್ನು ಸಾಧಿಸಲು ಅವನು ಉಪಾಯ ಹೂಡಬೇಕಾಗುತ್ತದೆ. ಜನರಲ್ಲಿ, ಅಂಧಶ್ರದ್ಧೆಯನ್ನು ಬೆಳೆಯಿಸಬೇಕಾಗುತ್ತದೆ. ತನ್ನ ಗುರು ಹೇಳಿದ ಮಾತು

ಗಳಿಗೆ. ತಾನು ಕೊಡುವ ಅರ್ಥಗಳನ್ನು ಅವರು ಒಪ್ಪಬೇಕು. ತನ್ನ ತೀರ್ಮಾನಗಳನ್ನು ಜನರು ಪ್ರಶ್ನಿಸಬಾರದು. ಪ್ರಶ್ನಿಸಿದರೆ ತಮಗೇನಾದೀತೋ ಎಂಬ ಭಯ ಜನರಲ್ಲೂ ಬೇರೂರಬೇಕು. ಹೀಗೆ ನಾಲ್ಕಾರು ತಲೆಮಾರುಗಳ ತನಕ ಒಂದು ಮತ ಸಾಗಿತೆಂದರೆ, ಯಾವ ಯೋಗ್ಯತೆಯೂ ಇಲ್ಲದ ಶುಂಠನು ಸಹ ಜನತೆಗೆ ಗುರುವಾಗಿಬಿಡುತ್ತಾನೆ. ಇತ್ತ ಜನತೆಯಲ್ಲಿ ಸ್ವತಂತ್ರ ವಿಚಾರಶಕ್ತಿ ಮೊಳೆಯದಂತೆ, ಅವರ ಭಾವನೆಗಳು ಸ್ವಲ್ಪದರಿಂದಲೇ ತೃಪ್ತವಾಗುವಂತೆ, ಧರ್ಮಕ್ಕೆ ಬೇರೇಯೆ ಸೋಗನ್ನು ತಂದುಕೊಡುತ್ತಾನೆ. ಮತ ಧರ್ಮಗಳು ಆರಂಭದಲ್ಲಿ ಆತ್ಮ, ಪರಮಾತ್ಮರ ವಿಷಯಕ್ಕೊ, ಜೀವ ಸಾಯುಜ್ಯ ಸಾಧನಕ್ಕೋ ಹುಟ್ಟಿದುವಾದರೂ ಸಂಪ್ರದಾಯದ ಪರಿಪಾಠದಲ್ಲಿ, ಅಂಧಾನುಕರಣೆಯ ಅನೇಕ ಹೊರಗಿನ ಆಚಾರಗಳಲ್ಲಿ ಮುಗಿಯುತ್ತವೆ. ಗುರುಪೂಜೆಗಳು, ಉತ್ಸವ, ಮೆರವಣಿಗೆಗಳು, ಸಭೆ, ಸಮಾರಾಧನೆಗಳು—ಇಂಥ ಬಾಹ್ಯ ರೂಪದಲ್ಲೇ ಮುಗಿದು, ಧರ್ಮಕ್ಕೂ ಜೀವನೋಪಾಯದ ವ್ಯವಸಾಯಕ್ಕೂ ವ್ಯತ್ಯಾಸವಿಲ್ಲದಷ್ಟು ವ್ಯರ್ಥವಾಗಿ ಬಿಡುತ್ತವೆ. ಧರ್ಮ ಈ ಮಟ್ಟಕ್ಕೆ ಇಳಿಯಿತೆಂದರೆ, ಅಂಥ ಸಮಾಜದಲ್ಲಿ ಗುರುವು ಶ್ರೀಮಂತನೂ ಆಗುತ್ತಾನೆ. ಜನರ ಮನಸ್ಸಿನ ಮೇಲೆ ನಾಯಕನೂ ಆಗುತ್ತಾನೆ.

ಸಂಪ್ರದಾಯದ ಪರೆಯನ್ನು ಹರಿದು, ಜನಜೀವನದ ಪ್ರಶ್ನೆಗಳಲ್ಲಿ ಗುರುವಿನ ವ್ಯಕ್ತಿ ಪ್ರತಿಷ್ಠೆಗೆ ಸ್ಥಾನವಿಲ್ಲವೆಂದು ತಿಳಿಯುವ ತನಕ ಹೆಚ್ಚಿನ ಪರಿಸ್ಥಿತಿ ಉಂಟಾಗಲಾರದು. ಎಂಥ ಧರ್ಮವೇ ಇರಲಿ, ಅದು ಸ್ವಾರ್ಥ ಸಾಧನೆಯ ಉದ್ದೇಶವಿಲ್ಲದ ಪ್ರಮಾಣಿಕವಾದ ಯಾವತ್ತು ಅನುಮಾನ ಸಂದೇಹಗಳಿಗೂ ಎದೆಯೊಡ್ಡಿ ನಿಲ್ಲಬೇಕು. ವ್ಯಕ್ತಿಯಲ್ಲಿ ವಿಚಾರಸ್ವಾತಂತ್ರ್ಯ ಪರಮಾವಧಿ ಬೆಳೆಯುವ ತನಕ ಧರ್ಮವು ಬೆಳೆಯಲಾರದು. ಈ ತನಕ ಬೆಳೆದು ಬಂದ ಯಾವತ್ತು ಧರ್ಮಗಳು ಸಂಪ್ರದಾಯದಿಂದ ಪ್ರಗತಿಯಿಲ್ಲದೆ ಹೋದುವು. ಅನುಮಾನ, ಸಂದೇಹಗಳನ್ನು ಉತ್ತರಿಸಿ ಬೆಳವಣಿಗೆ ಹೊಂದಲಿಲ್ಲ. ಸ್ವತಂತ್ರವಾದ ವಿಚಾರ ಪ್ರವಾಹಗಳಿಗೆ ಶಕ್ತವಾದವರಿಂದಲೇ ಅವು ಬೆಳೆದು ಬಂದುದು.

**ಅರಸು**

ಇನ್ನು ಅರಸನ ವರ್ಚಸ್ಸಿನ ವಿಚಾರ. ಆದಿಯ ಮನುಷ್ಯ ಕುಟುಂಬದಲ್ಲಿ, ರಾಜ್ಯಗಳು ಹುಟ್ಟುವ ಮುಂಚೆ, ಜನರು ಗುಂಪುಗಳಾಗಿ ವಾಸಿಸುತ್ತಿದ್ದರು. ಆಹಾರ ಸಂಪಾದನೆಗಾಗಿ ಅವರದು ಸಂಚಾರಿ ಜೀವನವಾಗಿತ್ತು. ಆಗಲೂ ಗುಂಪಿನೊಳಗೆ ವ್ಯಕ್ತಿಗಳಲ್ಲಿ ಕಲಹ ಉಂಟಾಗಬಹುದು. ಅಥವಾ ಬೇರೆ ಯಾವುದಾದರೂ ಬಗೆಯ ಸಂಕಷ್ಟಗಳು ಎದುರಾಗಬಹುದು. ಇಂಥ ಸಮಯದಲ್ಲಿ ಗುಂಪಿನಲ್ಲಿ ಹಿರಿಯನಾದವನೋ, ಬಲಶಾಲಿಯಾದವನೋ ತನ್ನ ವೈಯಕ್ತಿಕ ಪರಾಕ್ರಮದಿಂದ ಇಲ್ಲವೆ ಯುಕ್ತಿಯಿಂದ ಉಳಿದವರಿಗೆ ಮಾರ್ಗದರ್ಶಕನಾಗುತ್ತಾನೆ. ಅಂಥವನು ಗುಂಪಿನ ನಾಯಕನಾಗಿ ಮನ್ನಣೆ ಪಡೆಯುತ್ತಾನೆ. ಎಲ್ಲಿಯ ತನಕ ಅವನಲ್ಲಿ ಗುಂಪನ್ನು ರಕ್ಷಿಸುವ ಶಕ್ತಿ, ಯುಕ್ತಿಗಳಿರುತ್ತವೆಯೋ ಅಲ್ಲಿಯ ತನಕ ಅವನ ನಾಯಕತ್ವ ಉಳಿಯುತ್ತದೆ. ಅವನು ದುರ್ಬಲನಾದರೆ, ಮುದುಕನಾದರೆ,

ಬಲಿಷ್ಠನಾದವನ ಕೈಗೆ ಅದೂ ಹೋಗುತ್ತದೆ. ಈ ತೆರನ ಪಂಗಡದ ನಾಯಕತ್ವ—ಗುಂಪುಗಳು ತಮ್ಮ ಸಂಚಾರಿ ಜೀವನವನ್ನು ಬಿಟ್ಟು ಕೃಷಿಕ ಜೀವನವನ್ನು ಆರಿಸಿ ಒಂದೇ ತಾವಿನಲ್ಲಿ ನೆಲೆಗೊಂಡ ಮೇಲೂ, ಕೆಲಕಾಲ ಉಳಿಯಿತು. ಆದರೆ ಹಲವು ಗುಂಪುಗಳು ಒಂದುಗೂಡಿ ವಿಸ್ತರಿಸಿದಂತೆ, ಗುಂಪಿನ ನಾಯಕನ ಮೇಲಿನ ಅಂಕುಶ ಗುಂಪಿನ ಪ್ರಜೆಗಳಿಗೆ ಕಡಿಮೆಯಾಯಿತು. ಇಂಥ ಕಾಲ ಒದಗಿದೊಡನೆಯೇ ನಾಯಕರು ಅರಸರಾಗಲೆತ್ನಿಸಿದರು. ಅರಸುತನವು ಪರಂಪರೆಯಿಂದ ಬರತೊಡಗಿತು. ಪರಂಪರೆಯ ಹಕ್ಕನ್ನು ಪ್ರಜೆಗಳು ವಾದಿಸಬಾರದೆಂದು, ಅರಸನ ಹಿರಿಮೆಯ ಪುರಾಣಗಳು ಬೆಳೆದುವು. ಅರಸ ದೈವಾಂಶಸಂಭೂತನೆನಿಸಿದನು. ಈಜಿಪ್ಟಿನ ಪರೋವರಲ್ಲಿ ರಾಜತ್ವ ಗುರುತ್ವಗಳು ಏಕಕಾಲದಲ್ಲಿ ಆರೋಪಿಸಲ್ಪಟ್ಟುವು. ನಮ್ಮ ದೇಶದಲ್ಲೂ ಅರಸರ ಪೂರ್ವ ಸಂಬಂಧ, ಸಾಮಾನ್ಯ ಜನರಂತೆ ಇತರ ಮನುಷ್ಯನ ಪೀಳಿಗೆಯಾಗಿ ಕಾಣಿಸದಂತೆ, ಸೂರ್ಯ ಚಂದ್ರರೊಡನೆ ಸೇರಿಸಲ್ಪಟ್ಟಿತು. ಜಪಾನಿಯ ಮಿಕಾಡೊ ಇದರಂತೆ ದೈವಾಂಶ ಸಂಭೂತನೆಂದು ಎಣಿಸಲ್ಪಟ್ಟಿದ್ದಾನೆ. ರಾಜನು ಪ್ರತ್ಯಕ್ಷ ದೇವತೆಯೆನಿಸಿದ ಮೇಲೆ, ಅವನ ಜನಗಳಲ್ಲಿ ಧಾರ್ಮಿಕ ದಾಸ್ಯಭಾವವೂ, ರಾಜಕೀಯ ಗುಲಾಮಗಿರಿಯೂ ಜತೆಜತೆಯಲ್ಲಿ ಬೆಳೆದುಕೊಂಡುವು. ಈ ಮನೋವೃತ್ತಿಯಿಂದ ದೊರೆತನಕ್ಕೆ ಗುಲಾಮರಾದ ದೇಶದ ಪ್ರಜೆಗಳಲ್ಲಿ, ಎಷ್ಟೊಂದು ಅಸಹಾಯಕತನ ಪ್ರಾಪ್ತವಾಯಿತು ಎಂದು ಪರಿಶೀಲಿಸಬಹುದು.

### ವಿಚಾರ ಬೆಳೆಯಲಿ

ಸಮಷ್ಟಿ ಜೀವನದ ಕಲ್ಯಾಣಕ್ಕೆ ಬೇಕಾದ ವಿಚಾರಶಕ್ತಿ ವ್ಯಕ್ತಿಯಲ್ಲಿ ಉಂಟಾಗಬೇಕಾದರೆ, ಎಲ್ಲ ಬಗೆಯ ಮನೋದಾಸ್ಯಗಳೂ ಕಡಿದು ಹೋಗಬೇಕು. ಪರಂಪರೆಯ ನಂಬಿಕೆ, ಅಂಧಶ್ರದ್ಧೆಗಳು ತುಲಸೆಗೆ ಗುರಿಯಾದಂತೆಯೇ ಆರ್ಥಿಕ ವರ್ಚಸ್ಸಿನಿಂದ, ಅಧಿಕಾರ ಬಲದಿಂದ, ವ್ಯಾಪಾರಿ ಯುಕ್ತಿಗಳಿಂದ, ರಾಜಕೀಯ ಪ್ರಚಾರಗಳಿಂದ ಬೀರಲ್ಪಡುವ ಪ್ರತಿಯೊಂದು ಬಗೆಯ ಬಲೆಗಳನ್ನು ಹರಿದು, ವ್ಯಕ್ತಿಯು ಸ್ವತಂತ್ರವಾಗಿ ತನ್ನ ವಿಚಾರ ಮಾಡಬೇಕು. ನಿರ್ಭಯನಾಗಿ ತನ್ನ ವಿಚಾರಗಳನ್ನು ಪ್ರಕಟಿಸಬೇಕು. ಇದಕ್ಕೆ ಎಷ್ಟೆಷ್ಟು ತಡೆ ತೊಡರುಗಳಿರುತ್ತವೆಯೋ ಜನಜೀವನದಲ್ಲಿ ಅಷ್ಟಷ್ಟು ಕೊಳಚೆ ತುಂಬಿಕೊಳ್ಳುತ್ತವೆ. ಈ ಕೊಳಚೆ ಎಷ್ಟೆಷ್ಟು ಹೆಚ್ಚುತ್ತದೋ ಜೀವನದ ಏಳಿಗೆ ಅಷ್ಟಷ್ಟು ಕಠಿಣವಾಗಿ ಬರುತ್ತದೆ.

## ೧೨ ವ್ಯಕ್ತಿಯ ಹಕ್ಕು

**ಮಾನಸಿಕ ಹಿರಿತನ**

ಈ ತನಕ ವ್ಯಕ್ತಿಯ ಸುಖ ದುಃಖಗಳು ಜೀವನ ಪ್ರವಾಹದ ಪ್ರತಿಫಲ ಎಂಬ ವಿಚಾರವನ್ನು ಹೇಳಿದ್ದಾಯಿತು. ವ್ಯಕ್ತಿ ತನ್ನ ಸ್ವಾರ್ಥವನ್ನು ಮಿಕ್ಕವರ ಹಕ್ಕನ್ನು ನಿರಾಕರಿಸಿ ಬೆಳೆಯಿಸಕೂಡದೆಂದು ಹೇಳಿದ್ದಾಯಿತು. ಆದರೆ ಜೀವನದ ಎಷ್ಟೋ ಸಂಗತಿಗಳಲ್ಲಿ –ವ್ಯಕ್ತಿ ಸಾಮಾನ್ಯರಿಗಿಂತ ಎಷ್ಟೋ ಪಾಲು ಹಿರಿಯನಾಗಿ ಬೆಳೆಯಲು ಸಾಧ್ಯವಿದೆ. ಈ ಹಿರಿತನವು ಅವನ ಮಾನಸಿಕವಾದ ಹಿರಿತನ. ಒಬ್ಬನು ನಿಸರ್ಗದಿಂದ ಪಡೆಯಬಹುದಾದ ಆನಂದವು, ಉಳಿದವರು ಅದೇ ಮಾರ್ಗದಲ್ಲಿ ಪಡೆಯಬಹುದಾದ ಆನಂದಕ್ಕೆ ಹೇಗೆ ಚ್ಯುತಿಯನ್ನು ತರುವುದಿಲ್ಲವೋ, ಅದೇ ರೀತಿಯಲ್ಲಿ ವ್ಯಕ್ತಿಯ ಮಾನಸಿಕ ಹಿರಿತನ ಉಳಿದವರ ಮಾನಸಿಕ ಉನ್ನತಿಗೆ ಕುಂದನ್ನು ತರಲಾರದು. ವ್ಯಕ್ತಿ ತನ್ನ ಸಂಪತ್ತಿನ ಬೆಳವಣಿಗೆಯನ್ನು ಮಿತಿಮೀರಿ ಮಾಡಬಹುದಾದರೂ, ಮನಸ್ಸಿನ ಬೆಳವಣಿಗೆಯನ್ನು ಮಾಡಿಕೊಳ್ಳಬಹುದು. ಸಮಾಜದ ಸಂಪತ್ತು ಒಬ್ಬನನ್ನೇ ಸೇರಿದರೆ, ಉಳಿದವರು ಕಷ್ಟಕ್ಕೆ ಗುರಿಯಾಗುತ್ತಾರೆ. ಆದರೆ ಸಮಾಜದಲ್ಲಿ ಮನಸ್ಸಿನ ಸಿರಿವಂತಿಕೆ ಎಷ್ಟು ವ್ಯಕ್ತಿಗಳಲ್ಲಿ ಹೆಚ್ಚುತ್ತ ಬರುವುದೋ ಉಳಿದ ಸಮಾಜಕ್ಕೂ ಅಷ್ಟು ಹೆಚ್ಚಿನ ಲಾಭವಿದೆ.

**ಶಿಕ್ಷಣ ಪ್ರಧಾನ ಜೀವನ**

ಸಮಾಜದಲ್ಲಿ ಶಿಕ್ಷಣಕ್ಕೆ ದೊಡ್ಡ ಸ್ಥಾನ ದೊರೆಯಬೇಕು. ಪ್ರಾಣಿ ಜೀವನದಲ್ಲಿ ಅನುವಂಶೀಯ ಗುಣಗಳು ಶಿಕ್ಷಣದ ಕೆಲಸವನ್ನು ಮಾಡುತ್ತವೆ. ಮನುಷ್ಯನ ನಾಗರಿಕತೆ ಅಷ್ಟೊಂದು ನೈಸರ್ಗಿಕವಾಗಿ ಉಳಿದಿಲ್ಲ. ಮನುಷ್ಯನ ಸಂಸ್ಕೃತಿಯ ಕಲ್ಪನೆಗಳು, ವಿಚಾರ ಸರಣಿಗಳು, ಮತ್ತು ಅವುಗಳ ಮೇಲೆ ಹೊಂದಿಕೊಂಡಂಥ ಅನೇಕ ಚರ್ಯೆಗಳು, ಯುಗ ಯುಗದ ಶಿಕ್ಷಣದ ಫಲವಾಗಿ ಉಂಟಾಗಿವೆ. ಆದುದರಿಂದ ಹುಟ್ಟಿದ ಒಂದು ಕೂಸನ್ನು ತನ್ನಷ್ಟಕ್ಕೆ ಬಿಟ್ಟುಬಿಟ್ಟರೆ ಅದು ತನ್ನ ಹೊಟ್ಟೆಯ ಪಾಡಿಗೂ ಗತಿ ಇಲ್ಲದೆ ಸರಳೀತು. ಆಹಾರ ಸಂಪಾದನೆಯಂಥ ತೀರ ಮುಖ್ಯವಾದ ಸಂಗತಿ ಸಹ ನಿಸರ್ಗದ ಹಾದಿ ಬಿಟ್ಟು ಬೇರೊಂದು ರೂಪವನ್ನು ತಾಳಿದೆ. ಆದುದರಿಂದ, ಮನುಷ್ಯನ ಜೀವನದಲ್ಲಿ ಶಿಕ್ಷಣ ಪ್ರಧಾನವಾಗಿದೆ. ಅವನ ಬೌದ್ಧಿಕ ಜೀವನ, ಅದನ್ನು ಅನುಸರಿಸಿದ ವ್ಯವಹಾರಿಕ ವರ್ತನೆ —ಇವೆಲ್ಲವೂ ವ್ಯಕ್ತಿಯ ಮನಸ್ಸಿನ ಬೆಳವಣಿಗೆಯನ್ನು ಹೊಂದಿಕೊಂಡಿವೆ. ಮನುಷ್ಯ ಸಮಾಜದ ಎಲ್ಲ ವ್ಯಕ್ತಿಗಳೂ ತಂತಮ್ಮ ಮನಸ್ಸಿನ ಬೆಳವಣಿಗೆಗೆ ಹಕ್ಕುಳ್ಳವರೆಂದು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ಎಲ್ಲರೂ ಸಮನಾಗಿ ಹುಟ್ಟಿದ್ದಾರೆ—All men are born equal ಎಂಬ ತತ್ವವೇ ಇದು. ಎಲ್ಲರೂ ಶಿಕ್ಷಣಕ್ಕೆ ಸಮನಾದ ಹಕ್ಕುಳ್ಳವರು— ಎಂಬುದು ಮೊದಲಿನ ಮಾತಿಂದ ಹೊರಡುವ ಎರಡನೆಯ ತತ್ವ. ಪ್ರಜಾಪ್ರಭುತ್ವದಲ್ಲಿ,

ಮುಂದುವರಿದ ಇಂಗ್ಲಂಡಿನಂಥ ದೇಶದಲ್ಲಿಯೂ ಈ ಮಾತು ಕಾರ್ಯರೂಪಕ್ಕೆ ಬಂದಿದೆಯೇ ಎಂದು ವಿಚಾರಿಸೋಣ. ಅಲ್ಲಿನ ಯಾವತ್ತೂ ವಿದ್ಯಾಸಂಸ್ಥೆಗಳು ಎಲ್ಲ ಜಾತಿಯವರಿಗೂ ಎಲ್ಲ ವರ್ಗದವರಿಗೂ ತೆರೆದಿವೆಯಾದರೂ, ಜನರಲ್ಲಿರುವ ಆರ್ಥಿಕ ಅಸಮಾನತೆಯಿಂದ ಹಲವರು ಕಡಿಮೆ ಶಿಕ್ಷಣದಿಂದ ತೃಪ್ತಿಗೊಳ್ಳಬೇಕಾಗಿದೆ. ಬರಿಯ 'ಅ ಆ' ಓದುವುದಕ್ಕೂ ಕೂಡ ಅವಕಾಶವಿಲ್ಲದ ಜನಗಳೂ ನಮ್ಮಲ್ಲಿ ಇದ್ದಾರೆ. ಶ್ರೀಮಂತರಲ್ಲಿ ಮಾತ್ರ ಬುದ್ಧಿ, ಬಡವರಲ್ಲಿ ಅದರ ಕೊರತೆ—ಎಂದು ತೀರ್ಮಾನವೆ ? ಸಮಾಜದಲ್ಲಿನ ಆರ್ಥಿಕ ಅಸಮತೆ, ಅದರೊಳಗಿನ ಜನರ ಮಾನಸಿಕ ಅಸಮತೆಯನ್ನು ಉಳಿಸುವುದಕ್ಕೆ ಕಾರಣವಾಗಿದೆ. ಒಂದು ಸಮಾಜವು ಎಲ್ಲಿಯತನಕ ಪ್ರತಿಯೊಬ್ಬನೂ ಹೆಚ್ಚಿನ ಶಿಕ್ಷಣವನ್ನು ಪಡೆಯಬಹುದಾದ ಅನುಕೂಲತೆಗಳನ್ನು ಸಹ ಕಲ್ಪಿಸಿಕೊಡುವುದಿಲ್ಲವೋ, ಅಲ್ಲಿಯತನಕ ಸಾರ್ವಜನಿಕ ವಿದ್ಯಾಸಂಸ್ಥೆಗಳಿವೆಯೆನ್ನುವುದು ಬರಿಯ ಮಾತು. ಇಷ್ಟನ್ನು ಮಾಡಿಕೊಡುವ ಕರ್ತವ್ಯ ಆಯಾಯ ದೇಶದ ಸರಕಾರದ್ದು.

### ಸಮಾನ ಅನುಕೂಲತೆ

ಎಲ್ಲರಿಗೂ ಸಮಾನವಾದ ಶಿಕ್ಷಣದ ಅನುಕೂಲತೆಯನ್ನು ಮಾಡಿಕೊಟ್ಟಿದ್ದಾರೆ ಎಂದು ತಿಳಿಯೋಣ. ಅಷ್ಟರಿಂದಲೇ ಎಲ್ಲರೂ ಸಮಾನವಾದ ಮಾನಸಿಕ ಉನ್ನತಿಯನ್ನು ಹೊಂದುತ್ತಾರೆಯೇ ? ಎಂಬ ವಾದ ಬರುತ್ತದೆ. ಬರಲಾರದು ಎಂಬುದು ನಿಜದ ಮಾತು. ಎಲ್ಲರಲ್ಲೂ ಸಮಾನವಾದ ಬುದ್ಧಿಶಕ್ತಿ ಇರುವುದಿಲ್ಲ. ಆದರೆ ಶ್ರೀಮಂತರಲ್ಲಿ ಬುದ್ಧಿವಂತರು ತುಂಬಿರುವರೆಂದೂ ಬಡವರಲ್ಲಿ ತಿಳಿಗೇಡಿಗಳೇ ಅಧಿಕವೆಂದೂ ಸ್ಥಾಪನೆಯಾಗುವುದಿಲ್ಲ. ಬುದ್ಧಿ ಲಕ್ಷಣಗಳು ವ್ಯಕ್ತಿಶಃವಾದುವು. ಅವು ಯಾರಲ್ಲೂ ಇರಬಹುದು. ಅನುಕೂಲತೆ ಕಲ್ಪಿಸಿಕೊಟ್ಟಲ್ಲಿ ಅವು ಬೆಳೆಯುತ್ತವೆ. ಕೊಟ್ಟ ಅನುಕೂಲತೆಗಳ ಉಪಯೋಗದಿಂದ ಬೆಳೆಯುವುದೂ ಬಿಡುವುದೂ ವ್ಯಕ್ತಿಗೆ ಬಿಟ್ಟ ಮಾತು.

### ವ್ಯಕ್ತಿಗೆ ತಕ್ಕ ಶಿಕ್ಷಣ

ಮನುಷ್ಯನಿಗೆ ಶಿಕ್ಷಣದಲ್ಲಿ ಸಮಾನ ಅಧಿಕಾರವಿರಬೇಕು—ಎಂದ ಮಾತ್ರಕ್ಕೆ ಅದರಿಂದಲೇ ಸಮಾಜದ ಮತ್ತು ವ್ಯಕ್ತಿಯ ಸಂಪೂರ್ಣ ಹಿತಸಾಧನೆಯಾಗುತ್ತದೆಯೆಂದು ತಿಳಿಯಬೇಕಿಲ್ಲ. ವ್ಯಕ್ತಿಗಳ ಮನಸ್ಸಿನ ಮಟ್ಟಗಳಲ್ಲೂ ವ್ಯತ್ಯಾಸವಿದೆ ; ಅಭಿರುಚಿಗಳಲ್ಲೂ ವ್ಯತ್ಯಾಸವಿದೆ. ಒಂದೊಂದು ಮನಸ್ಸು ಒಂದೊಂದು ಬಗೆಯ, ಉನ್ನತಿಯ ಶಿಕ್ಷಣಕ್ಕೆ ತಕ್ಕುದಾಗಿರುತ್ತದೆ. ಆದುದರಿಂದ ಶಿಕ್ಷಣ ಸಂಸ್ಥೆಗಳ ಕೆಲಸ ಎಷ್ಟು ಕಷ್ಟವೋ ಅಷ್ಟು ಹೆಚ್ಚಿನದೂ ಆಗಿದೆ. ಏಕರೂಪ ಶಿಕ್ಷಣದಿಂದ ಸಮಾಜದ ಉನ್ನತಿಯಾಗಲಾರದು. ಈಗ ಸಾಮಾನ್ಯವಾಗಿ ಎಲ್ಲ ತೆರನ ಮಕ್ಕಳಿಗೂ ಒಂದೇ ಬಗೆಯ ಶಿಕ್ಷಣವನ್ನು ಕೊಡುತ್ತಿದ್ದಾರೆ. ಓದುವ ಕಾಲದಲ್ಲಿ ಅವರ ಅಭಿರುಚಿ ಯಾವ ಕಡೆಗೆ ಹೆಚ್ಚಾಗಿದೆ, ಯಾವಲ್ಲಿ ಕಡಿಮೆಯಾಗಿದೆ ಎಂಬುದನ್ನು ಶಿಕ್ಷಕರು ಶೋಧಿಸಬೇಕಾಗುತ್ತದೆ. ವ್ಯಕ್ತಿಯ ಪ್ರವೃತ್ತಿ ಯಾವ ಬಗೆಯ ವ್ಯಾಸಂಗದಲ್ಲಿ ಅಧಿಕವಾಗಿದೆಯೋ, ಅದಕ್ಕೆ ಹೆಚ್ಚಿನ ಗಮನಕೊಡುತ್ತ ಹೋಗಬೇಕಾಗುತ್ತದೆ. ಶಿಕ್ಷಣ—ವ್ಯಕ್ತಿಯನ್ನು ಸಾಮಾನ್ಯವಾದ ಸ್ಥೂಲ ಜೀವನ ಕ್ರಮ

ಗಳಿಗೆ ತರಬೇತು ಮಾಡುವುದಲ್ಲದೆ, ಅವನಲ್ಲಿ ಇರುವ ಕೆಲವೊಂದು ವಿಶೇಷ ಗುಣಗಳನ್ನು ಚೆನ್ನಾಗಿ ವಿಕಾಸಗೊಳಿಸುವುದಕ್ಕೂ ಪ್ರಯತ್ನಿಸುವಂಥದು. ಎಲ್ಲಿ—ವ್ಯಕ್ತಿಗಳು ತಮ್ಮ ಪರಮಾವಧಿಯ ಮಾನಸಿಕ ಬೆಳವಣಿಗೆ ಹೊಂದಲು ಅವಕಾಶವಿರುತ್ತದೋ, ಅಲ್ಲಿ ಸಮಾಜವು ಅತ್ಯಂತ ಹೆಚ್ಚಿನ ಸಂಸ್ಕಾರವನ್ನು ಹೊಂದುತ್ತದೆ.

**ಸಮಾಜದ ಹೊಣೆ**

ವ್ಯಕ್ತಿ ವೈಶಿಷ್ಟ್ಯದ ಕಡೆಗೆ ಗಮನಕೊಡಬೇಕಾದದ್ದು ಸಮಾಜ, ವ್ಯಕ್ತಿಯ ಕಡೆಗೆ ತೋರಿಸಬೇಕಾದ ಹಿರಿಯ ಕರ್ತವ್ಯ. ಸಮಾಜವು ಅಧಿಕವಾಗಿ ಸಾಮಾನ್ಯ ವ್ಯಕ್ತಿಗಳಿಂದ ಕೂಡಿಕೊಂಡಿರುತ್ತದೆಂಬುದು ನಿಜ. ಇದರಿಂದ ಸಮಾಜದ ನಿತ್ಯ ಜೀವನವೇನೋ ಸಾಗಿ ಹೋಗುತ್ತದೆ. ಆದರೆ ಒಂದು ಸಮಾಜದಲ್ಲಿ ಕಾಲಕ್ಕೆ ತಕ್ಕ ಕ್ರಾಂತಿಯೋ, ಅಭಿವೃದ್ಧಿಗೆ ಬೇಕಾದ ಮುಂದಿನ ಬೆಳಕೋ, ಮನಸ್ಸಿನ ಆರೋಗ್ಯಕ್ಕೆ ಬೇಕಾದ ಆನಂದವೋ, ಅದರ ಕೆಲವೊಂದು ಅಪೂರ್ವ ವ್ಯಕ್ತಿಗಳಿಂದಲೇ ದೊರೆಯಬೇಕು. ಸಾವಿರಾರು ಜನರ ಒಂದು ಸಮಾಜದಲ್ಲಿ, ನಾಲ್ಕಾರು ಮಂದಿಗಳು ತೀರ ಹೆಚ್ಚಿನ ಮನೋದಾರ್ಢ್ಯವುಳ್ಳವರೂ, ಕಲ್ಪನೆಗಾರರೂ, ಶೋಧಕರೂ, ವಿಮರ್ಶಕರೂ ಆಗಿರುವುದುಂಟು. ತಮ್ಮ ಶಿಕ್ಷಣ ಕಾಲದಲ್ಲಿಯೇ ಈ ತೆರನ ವ್ಯಕ್ತಿಗಳು ಉಳಿದ ಬಾಲಕರು ತುಳಿಯುವ ದಾರಿಯನ್ನು ಬಿಟ್ಟು, ತಮ್ಮದೇ ಆದ ಬದುಲು ದಾರಿಯನ್ನು ಹಿಡಿಯುವುದೂ ಉಂಟು. ಶಿಕ್ಷಕರು ಉಳಿದವರನ್ನು ನಡೆಯಿಸುವಂತೆಯೆ ಅವರನ್ನೂ ನಡೆಯಿಸಿದರೆ, ಅವರು ಬೆಳವಣಿಗೆ ಹೊಂದುವ ಬದಲು ಹಾನಿಗೆ ಗುರಿಯಾಗಬಹುದು. ಬದಲು ಅವರ ಸ್ವತಂತ್ರ ಬುದ್ಧಿ ಮಾರ್ಗಕ್ಕೆ ಮರ್ಯಾದೆಯನ್ನು ಕೊಟ್ಟು, ಅವರ ಮಾನಸಿಕ ಪ್ರವೃತ್ತಿಗಳು ಬೆಳೆಯಲು ಎಷ್ಟು ಹೆಚ್ಚಿನ ಅವಕಾಶವನ್ನು ಕಲ್ಪಿಸಲು ಸಾಧ್ಯವೋ ಅಷ್ಟು ಹೆಚ್ಚಿನ ಅವಕಾಶವನ್ನು ಕಲ್ಪಿಸಿ ಕೊಡಬೇಕು. ಇಂಥ ವ್ಯಕ್ತಿಗಳು ವಿದ್ಯಾರ್ಥಿ ದೆಸೆಯಲ್ಲಿರಲಿ, ಪ್ರಬುದ್ಧಾವಸ್ಥೆಯಲ್ಲಿರಲಿ, ಸಮಾಜದ ವಿಶೇಷ ಆದರಕ್ಕೆ ಪಾತ್ರರಾಗಬೇಕು. ಅವರ ರೀತಿಗಳು ಸಮಾಜದ ಪ್ರಚಲಿತ ನಂಬಿಕೆಗಳಿಗೆ ವಿರುದ್ಧವೆಂದು ಕಂಡುಬಂದರೂ ಧೈರ್ಯದಿಂದ ಅವನ್ನು ಬೆಳೆಯಗೊಡಬೇಕು. ಬೆಲ್, ಎಡಿಸನ್‌ನಂತಹ ವ್ಯಕ್ತಿಗಳು ತಮ್ಮ ನವೀನ ಶೋಧನೆಗಳನ್ನು ಸಮಾಜದ ಬೆಂಬಲದಿಂದ ನಿರ್ವಹಿಸಲು ಸಾಧ್ಯವಾಗಬೇಕು. ಇಂಥವರ ಹೆಚ್ಚಿನ ಉತ್ಸಾಹ ತಮ್ಮ ಬಡತನ ನೀಗಿಸುವುದರಲ್ಲಿಯೇ ವ್ಯಯವಾಗ ಬಾರದು. ಸಮಾಜವಾದಿಗಳು ಎನಿಸುವ ಕೆಲವೊಂದು ರಾಷ್ಟ್ರಗಳಲ್ಲಿ ಶಕ್ತಿಯ ಈ ಹಕ್ಕನ್ನೇ ಅಲ್ಲಗಳೆಯುತ್ತಿದ್ದಾರೆ. ತಮ್ಮ ವಿಚಾರ ಸರಣಿಗೆ ವಿರುದ್ಧವಾದ ಯೋಚನಾಸರಣಿಗಳು ಬಾರದಂತೆ ಅದುಮುತ್ತಾರೆ. ಅದು ಸಮಾಜದ ಬೆಳವಣಿಗೆಯ ದಾರಿಯಲ್ಲ.

**ಒಬ್ಬನಿಗಾಗಿ**

ಈ ವಿಚಾರದಲ್ಲಿ ಅಮೇರಿಕದ ಶಿಕ್ಷಣ ಸಂಸ್ಥೆಯೊಂದರ ಮಾದರಿಯನ್ನು ಉಲ್ಲೇಖಿಸಬಹುದು. ಸಂಯುಕ್ತ ಅಮೇರಿಕದ ವಿಶ್ವವಿದ್ಯಾಲಯದ ಒಬ್ಬ ವಿದ್ಯಾರ್ಥಿಯು "ಪೋಸ್ಟ್ ಗ್ರಾಜುಏಟ್" ಶಿಕ್ಷಣ ಕಾಲದಲ್ಲಿ ಏನು ಮಾಡಲೆಂಬ ಯೋಚನೆಗೊಳಗಾದ.

ಅವನ ಅಭಿರುಚಿ ಯಾವುದೋ ಒಂದು ದೇಶದ ಭಾಷೆಯ ಕಡೆಗೆ ಅಧಿಕವಾಗಿತ್ತು. ಈ ಭಾಷೆಯ ಸಂಶೋಧನೆಗಾಗಿ ಆ ವಿಶ್ವವಿದ್ಯಾಲಯದಲ್ಲಾಗಲಿ, ಸಂಯುಕ್ತ ಅಮೇರಿಕದ ಇತರ ವಿಶ್ವವಿದ್ಯಾಲಯಗಳಲ್ಲಾಗಲಿ ಏರ್ಪಾಟು ಇದ್ದಿರಲಿಲ್ಲ. ಆದರೆ ವ್ಯಕ್ತಿಯ ಮಹತ್ವವನ್ನು ಬಲ್ಲ ಅವನ ವಿಶ್ವವಿದ್ಯಾಲಯದವರು, ಅವನೊಬ್ಬನ ಸಲುವಾಗಿಯೆ ಆ ಭಾಷೆಯ ಸಂಶೋಧನೆಗಾಗಿ ಏರ್ಪಾಟುಮಾಡಿದರು. ಅದಕ್ಕೆ ಬೇಕಾಗುವ ಅಧ್ಯಾಪಕತ್ವವನ್ನು ನಿರ್ಮಿಸಿದರು. ಒಬ್ಬನಿಗಾಗಿ ಸಾವಿರಾರು ಡಾಲರು ಹಣವನ್ನು ವೆಚ್ಚಮಾಡಿದರು,

ವ್ಯಕ್ತಿಯ ಸಮಾನತೆಗೆ ಎಷ್ಟು ಮನ್ನಣೆ ಬೇಕೋ, ವೈಯಕ್ತಿಕ ವಿಶೇಷತೆಗೂ ಅಷ್ಟೇ ಮನ್ನಣೆಯನ್ನು ಸಮಾಜ ಕೊಡಬೇಕು. ಏಕೆಂದರೆ ಅವನ ಬದ್ಧಿಬಲದ ಲಾಭ ಮಿಕ್ಕುಳಿದ ಜನತೆಗೆ ನಾಳೆ ದೊರೆಯುವ ಸಂಪತ್ತಾಗುತ್ತದೆ. ಬೆಲ್‌ನ ಟೆಲಿಫೋನುಗಳು, ಎಡಿಸನನ ದೀಪಗಳು, ಪೇಶ್ಚರನ ವೆಕ್ಸಿನ್‌ಗಳು ಇಂದು ಎಲ್ಲ ಬಗೆಯ ಜನರಿಗೂ ಉಪಯುಕ್ತವಾಗಿಲ್ಲವೆ ? ವೈದಿನ ಋಷಿಗಳು, ಗ್ರೀಕ್ ತತ್ವಜ್ಞಾನಿಗಳು, ಆಧುನಿಕ ವೈಜ್ಞಾನಿಕರು ಎಲ್ಲರಿಗೂ ಮಾನ್ಯರಾಗಿಲ್ಲವೆ ? ಅವರು ತೋರಿಸಿಕೊಟ್ಟ ಜ್ಞಾನ, ವಿಜ್ಞಾನಗಳು ಸಾರ್ವಜನಿಕ ಜ್ಞಾನಭಂಡಾರಕ್ಕೆ ದೊರಕಿವೆ. ವ್ಯಕ್ತಿ ವೈಶಿಷ್ಟ್ಯವನ್ನು ಮನ್ನಿಸದಿದ್ದರೆ ಯಾವ ಸಮಾಜವೂ ಅಭಿವೃದ್ಧಿ ಹೊಂದಲಾರದು. ಮನುಷ್ಯ ಕುಲಕ್ಕೆ ಗೌರವ ಬರಲಾರದು.

**ವಿಶೇಷ ವ್ಯಕ್ತಿಗಳಿಂದ**

ಇಂದು ಹಿಂದುಸ್ತಾನಕ್ಕೆ ಏನಾದರೊಂದು ಮಾನ್ಯತೆಯ ಸ್ಥಾನವು ಅರ್ವಾಚೀನ ಪ್ರಪಂಚದಲ್ಲಿ ಉಳಿದಿರುವುದಾದರೆ, ಅದು ನಮ್ಮ ದೇಶದ ಕೆಲವೇ ಮಹನೀಯರಿಂದ. ರಾಧಾಕೃಷ್ಣನ್, ರವೀಂದ್ರನಾಥ, ಮಹಾತ್ಮಾಗಾಂಧಿ, ಪಂಡಿತ ಜವಾಹರ್‌ಲಾಲ. ಸಿ. ವಿ. ರಾಮನ್, ಚಂದ್ರಶೇಖರ್—ಇವರಂಥ ವ್ಯಕ್ತಿಗಳಿಂದ. ನಮ್ಮ ಜನರು ಎಷ್ಟು ಹಿರಿಯ ತತ್ವಜ್ಞಾನಿಗಳಾಗಬಲ್ಲರು, ಎಂಥ ಕಾವ್ಯ ಸ್ವಪ್ನ ಕಟ್ಟಬಲ್ಲರು, ಯಾವ ಧರ್ಮಬುದ್ಧಿ ಹಿಡಿಯಬಲ್ಲರು, ಎಂಥ ರಾಜಕೀಯ ಕಟ್ಟಬಲ್ಲರು, ಏನೆಲ್ಲ ಪರಿಶೋಧನೆ ನಡೆಯಿಸಬಲ್ಲರು—ಎಂಬುದನ್ನು ಇವರು ತೋರಿಸಿಕೊಟ್ಟಿದ್ದಾರೆ. ಇವರಿಗೆ ಸಮಾಜದ ಉಳಿದ ಜನತೆ ಎಷ್ಟು ಋಣಿಯಾದರೂ ಕಡಿಮೆಯೆ.

**ಸ್ವಾರ್ಥಕ್ಕೆ ಸ್ಥಾನ**

ಒಟ್ಟು ಜೀವನದ ಹಿತದಲ್ಲಿ ವ್ಯಕ್ತಿಯ ಹಿತವಿದೆ ಎಂಬುದು ನಿಜವಾದರೂ ವ್ಯಕ್ತಿಯಲ್ಲಿನ ಸ್ವಾರ್ಥಕ್ಕೂ ತಕ್ಕ ಸ್ಥಾನವಿದೆ. ಈ ಸ್ವಾರ್ಥ ಜೀವಿಗಳಲ್ಲಿ ಸ್ವಭಾವಿಕವಾಗಿ ಇರತಕ್ಕ ಗುಣ. ವ್ಯಕ್ತಿಯ ಶಾರೀರಿಕವಾದ ಬೆಳವಣಿಗೆಗೆ ಇದು ಬೇಕು. ಜೀವನ ಸಂಗ್ರಾಮದಲ್ಲಿ ತನಗೆ ವಿರುದ್ಧವಾಗಿ ಕಾಣಿಸುವ ಹಸಿವು ಹಾನಿಗಳನ್ನು ತಡೆಗಟ್ಟಲು ಈ ಶೀಲ ತೀರ ಅವಶ್ಯ. ಆದರೆ ಶಿಕ್ಷಣದಿಂದ, ಸಂಸ್ಕಾರದಿಂದ ಈ ಸ್ವಾರ್ಥ ಅಧಿಕವೂ ಆಗಬಲ್ಲುದು. ಇರಬೇಕಾದ ಮಿತಿಗಿಂತ ಮೀರಿ, ಸಮಾಜ ಹಿತಕ್ಕೂ ಮುಂದಾಗಿ ವ್ಯಕ್ತಿ ಹಿತ ಸಾಧಿಸುವಂಥ ಮಟಕಿಗೂ ಹೋಗಬಹುದು. ವ್ಯಕ್ತಿಗೊಂದು ಬೇರೆಯೆ ಆತ್ಮವಿದೆ. ಅವನವನ

ಸಾಯುಜ್ಯಕ್ಕೆ ಅವನೇ ಹೊಣೆ ಎಂಬೆಲ್ಲ ತತ್ವಗಳು, ಈ ಸ್ವಾರ್ಥವನ್ನು ಬೆಳೆಸುವುದರಲ್ಲಿ ಇಷ್ಟರ ತನಕ ಸಹಾಯವಾಗಿವೆ. ತನ್ನ ಹಸಿವನ್ನು ನೀಗಿಸಲು ತಾನು ಮುಂದಾಗಬೇಕು, ತನ್ನ ನಿವಾಸದ ಮನೆಯನ್ನು ತಾನು ಕಟ್ಟಿಕೊಳ್ಳಬೇಕು—ಎಂಬಂಥ ಗುಣಗಳು ಪ್ರತಿಯೊಂದು ಜೀವಿಯಲ್ಲೂ ಕಂಡುಬರುವ ಸ್ವಾರ್ಥಗಳೇ. ಮನುಷ್ಯನು ಈ ಕೆಲಸ ಮಾಡಬಾರದ್ದಲ್ಲ. ನಿಸರ್ಗವನ್ನು ಪರಿಶೀಲಿಸಿದುದಾದರೆ–ಪ್ರತಿಯೊಂದು ಜೀವಿಯೂ ಬದುಕುವುದಕ್ಕಾಗಿ ಹೋರಾಡುವುದನ್ನು ಕಾಣುತ್ತೇವೆ. ಎಲ್ಲಿತನಕ ಈ ಪ್ರವೃತ್ತಿ (Struggle for existance) ಬದುಕಿನ ನೆಲೆಗಾಗಿ ಸಾಗುವುದೋ ಅಲ್ಲಿಯ ತನಕ ಅದರ ಸಹಜತೆಯನ್ನು ನಾವು ಒಪ್ಪಲೇಬೇಕು. ಬಾಳಬೇಕೆಂಬ ಹಟ ಪ್ರತಿಯೊಂದು ಜೀವಿಯಲ್ಲಿಯೂ ಇರಬೇಕು. ವ್ಯಕ್ತಿಯು ಬಾಳಿದರೇನೆ ಸಮಾಜ ಉಳಿಯುತ್ತದೆ. ಆದರೆ ಯಾವಲ್ಲಿ ವ್ಯಕ್ತಿಯ ಸ್ವಾರ್ಥ ಈ ಅವಶ್ಯಕತೆಯನ್ನು ಮೀರುತ್ತದೋ, ಅಲ್ಲಿ ಇದು ಸಮಾಜ ವಿನಾಶಿಯಾಗುವುದು. ಹುಲ್ಲೆ ಹುಲಿಯ ಆಹಾರ. ಬದುಕುವ ಹಟಕ್ಕಾಗಿ ಹುಲಿ ಹುಲ್ಲೆಯನ್ನು ಒಡಿಯಲೆತ್ನಿಸುತ್ತದೆ. ಯಾವ ದಿನ ಹುಲ್ಲೆ ತಾನಾಗಿ ಹುಲಿಯ ಬಾಯಿಗೆ ಹೋಗಿ ಬೀಳುತ್ತದೋ, ಅಂದರೆ ತನಗೆ ಬೇಕಾದ ಬಾಳ್ವೆಯ ಹಟವನ್ನು ಸಾಧಿಸುವುದಿಲ್ಲವೋ, ಆ ದಿನ ಅದೂ ಅಪರಾಧಿಯಾಗುತ್ತದೆ. ತಾನೂ ಬದುಕಬೇಕು, ಬದುಕಿ ಉಳಿಯಬೇಕು–ಎಂಬ ಸ್ವಾರ್ಥ ಆ ಹುಲ್ಲೆಗೆ ಬೇಕು. ಇತ್ತ ಒಂದು ಹುಲ್ಲೆಯನ್ನು ತಿಂದು ತೃಪ್ತವಾಗಬಹುದಾದ ಹುಲಿ, ಎರಡೆರಡು ಹುಲ್ಲೆಗಳನ್ನು ಕೊಂದು ಕೆಡವಿದ್ದಾದರೆ, ಅದರ ಸ್ವಾರ್ಥ ವಿಘಾತಕ ಸ್ವಾರ್ಥವಾಗುತ್ತದೆ. ಬೇಕಾದುದಕ್ಕಿಂತ ಹೆಚ್ಚಿನ ಹಾನಿಗೆ ಅದು ಕಾರಣವಾಯಿತು. ತಾನು ತಿನ್ನದ ಇನ್ನಾವುದೋ ಒಂದು ಮೃಗವನ್ನು ಅದು ಬರಿದೆ ಕೊಂದುದಾದರೆ, ಅದು ಮಾಡುತ್ತಿರುವ ಅನ್ಯಾಯ ಇನ್ನೂ ಹೆಚ್ಚಿನದೆಂದು ತಿಳಿಯಬೇಕು. ಮನುಷ್ಯನ ಬಾಳ್ವೆಯ ಹೋರಾಟವು ಈ ತೂಕದಿಂದ ನಡೆಯಬೇಕು. ಅವನ ಬೆಳವಣಿಗೆಗಾಗಿ ಬೇಕಾದ ಸ್ವಾರ್ಥವು ಅವನಲ್ಲಿರಲೇ ಬೇಕು. ಆದರೆ ಮೀರಿದ ಸ್ವಾರ್ಥ ಇರಕೂಡದು.

### ಸ್ವಾರ್ಥ ಸರ್ವಸ್ವವಲ್ಲ

ವ್ಯಕ್ತಿ ಬದುಕುವುದಕ್ಕೆ ಸ್ವಾರ್ಥ ಸಹಾಯವಾಗುತ್ತದೆ. ಆದರೆ ಅದರಿಂದಲೇ ಅವನ ಇಷ್ಟ ಪೂರ್ತಿಯಾಗುತ್ತದೆ ಎನ್ನಲಾಗದು. ಶ್ರೀಮಂತಿಕೆಯಿಂದಲೇ ಸಂತೋಷ ದೊರೆಯುತ್ತದೆ ಎನ್ನುವುದೂ ತಪ್ಪು. ಸ್ವಾರ್ಥಿಗಳಾದವರೆಲ್ಲರೂ ಶ್ರೀಮಂತರಾಗುತ್ತಾರೆ ಎನ್ನುವುದೂ ತಪ್ಪು. ಸಮಾಜದಲ್ಲಿ ವಿತರಣೆಯಿದ್ದರೆ ಭೋಗ್ಯವಸ್ತುಗಳಿಗಾಗಿ ವ್ಯಕ್ತಿ ಮಾಡಬೇಕಾದ ಸ್ವಾರ್ಥಪರ ಹೋರಾಟ ಇನ್ನು ಕಡಮೆ ಸಾಕು. ಈ ಯಂತ್ರ ಯುಗದಲ್ಲಿ ಬರಿಯ ಎರಡು ತಾಸಿನ ದುಡಿತದಿಂದ ದಿನದ ಪೂರೈಕೆಯಾಗುವುದು ಸಾಧ್ಯವಿದೆ. ಸಮಾಜದಲ್ಲಿ ಸಮನಾದ ವಿತರಣೆ ಇಲ್ಲದೆಂದೇ ಕೆಲವು ವ್ಯಕ್ತಿಗಳು ದಿನಕ್ಕೆ ಹತ್ತು ತಾಸು ದುಡಿದರೂ ಅವರ ಬದುಕಿನ ಹೋರಾಟ ಮುಗಿಯುವುದಿಲ್ಲ.

ಈ ಸಂಗತಿಯೊಂದೇ ಅಲ್ಲ. ಹಣವೇ ಮನುಷ್ಯನಿಗೆ ಜೀವನದಲ್ಲಿ ತೃಪ್ತಿಯನ್ನು

ತಂದು ಕೊಡುತ್ತದೆ ಎಂದು ತಿಳಿಯುವುದು ತಪ್ಪು. ಸಮನಾದ ವಿತರಣೆ ಇಲ್ಲದ ಸಮಾಜದಲ್ಲಿ ಕೆಲವರೇ ಶ್ರೀಮಂತರಾಗಿದ್ದು ಹಲವರು ಬಡವರಾಗಿರುವುದರಿಂದ ಹಣಕ್ಕೆ ಸಲ್ಲುತ್ತಿರುವ ಗೌರವ, ಅದು ಮಾಡುತ್ತಿರುವ ಕೆಲಸಕ್ಕಿಂತಲೂ ಹೆಚ್ಚಾಗಿಬಿಟ್ಟಿದೆ. ಜೀವನದ ಆವಶ್ಯಕತೆಗಳನ್ನು ಸಮಾಜವು ವಿತರಣೆಯಿಂದ ಪೂರೈಸಿಕೊಟ್ಟರೆ ಹಣದ ಮೇಲಿನ ಭ್ರಾಂತಿ ಎಷ್ಟೋ ಪಾಲು ಕಡಮೆಯಾದೀತು. ಇದು ಅನ್ನದ ಪ್ರಶ್ನೆಯೇ ಮಹತ್ತರವಾದ ಪ್ರಶ್ನೆಯಾದ್ದರಿಂದ ಅದನ್ನು ಕೊಂಡುಕೊಳ್ಳಬಲ್ಲ ಹಣವು ಅತಿಯಾದ ಮರ್ಯಾದೆಯನ್ನು ಹೊಂದಿದೆ. ಈ ಪ್ರಶ್ನೆ, ಸಮನಾದ ವಿತರಣೆಯಿರುವಲ್ಲಿ, ಮಹತ್ವದ್ದಲ್ಲ ಎಂದು ರಷ್ಯಾ ನಮಗೆ ತೋರಿಸಿ ಕೊಟ್ಟಿದೆ. ಮನುಷ್ಯನ ಪ್ರಕೃತಿ ಬರಿಯ ಅನ್ನಶೀಲವಾದದ್ದಲ್ಲ. ದೇಹದ ಅಡಚಣೆ ತಪ್ಪಿದ ಮರುಕ್ಷಣ ಅವನು ಮಾನಸಿಕ ಜೀವಿಯಾಗುತ್ತಾನೆ. ಮಾನಸಿಕ ಜೀವಿಗೆ ಸಂಪತ್ತಾಗಲಿ ಸಂಪತ್ತು ಕೊಡುವ ಒಡವೆಗಳಾಗಲಿ ಮಹತ್ವದ್ದಲ್ಲ. ಮನಸ್ಸಿಗೆ ತನ್ನದೇ ಆದ ಸಂತೋಷವನ್ನು ಹುಟ್ಟಿಸಿಕೊಳ್ಳುವ ಶಕ್ತಿ ಇದೆ. ವಿವಿಧ ವಸ್ತುಗಳ ಪರಿಶೀಲನೆಯಿಂದ ಅದನ್ನು ದೊರಕಿಸಿಕೊಳ್ಳುವ ಶಕ್ತಿ ಬರುತ್ತದೆ. ಜಗತ್ತಿನ ಅನೇಕ ಶೋಧೆಗಳು ಈ ಬಗೆಯಲ್ಲಿ ಉಂಟಾದುವು. ಇದೇನು ನಡತೆ? ಇದೇತಕ್ಕೆ ಹೀಗಾಗುತ್ತದೆ? ಇಂಥ ಹಾನಿಗಳನ್ನು ನಾವು ತಪ್ಪಿಸಿಕೊಳ್ಳಬಾರದೇ? ಈ ಬಗೆಯ ಪ್ರಶ್ನೆಗಳು ಜೀವನದ ಅನೇಕ ಸಮಸ್ಯೆಗಳಿಂದ ಉಂಟಾಗುತ್ತವೆ. ಈ ಕುತೂಹಲವೇ ಮನುಷ್ಯನ ಮನಸ್ಸನ್ನು ಜಾಗೃತವಾಗಿರಿಸಿ ಅವನನ್ನು ಅನೇಕ ಕೆಲಸಗಳಿಗೆ ತೊಡಗಿಸಬಲ್ಲುದು. ಅದರಂತೆ ಕವಿ, ಶಿಲ್ಪಿಗಳಲ್ಲಿ ಕಾಣುವಂಥ, ಅನುಭವದಿಂದ ಸ್ಫೂರ್ತಿಗೊಳ್ಳುವ ಸೃಷ್ಟಿಶಕ್ತಿಯಿದೆ. ಹಣದ ಆಸೆಗಾಗಿ ಯಾವ ಉದ್ದಾಮ ಕಾವ್ಯವೂ ಮೂಲತಃ ಹುಟ್ಟಿಲ್ಲ. ಕಲೆಗಳಿಗೆ ತಮ್ಮದೇ ಆದ ಆನಂದವನ್ನು ಕೊಡತಕ್ಕ ಶಕ್ತಿಯಿದೆ. ಇನ್ನು ಕೇವಲ ಪರಿಶೀಲನೆಯಿಂದಲೋ, ನೋಟದಿಂದಲೋ, ಶ್ರವಣದಿಂದಲೋ ಹೊಂದಬಹುದಾದ ಆನಂದವಿದೆ. ಇವು ಹಣದ ಮೇಲೆ ಹೊಂದಿರಬೇಕಾಗಿಲ್ಲ.

**ಪ್ರೋತ್ಸಾಹ**

ಉದ್ಯೋಗ ಕರ್ತವ್ಯಗಳಿಗೆ ಪ್ರೇರಣೆ—ಕುತೂಹಲ, ಶೋಧನೆ, ಸೃಷ್ಟಿ, ಸಂತೋಷದ ಸಂಪಾದನೆ, ಇವುಗಳಲ್ಲಿ ವ್ಯಕ್ತಿ ಕೆಲಸ ಮಾಡುತ್ತ ಹೋದಂತೆ ಬೇರೊಂದು ಸಂಗತಿಯನ್ನು ಕಂಡುಹಿಡಿಯುತ್ತಾನೆ. ಹಿಡಿದ ಕಾರ್ಯವನ್ನು ಮುಗಿಸಲೇಬೇಕು ಎನ್ನುವವನು ಸಹ, ತನ್ನ ಕಾರ್ಯದ ಕೊನೆಯ ಗಳಿಗೆಯ ಮೇಲೆಯೋ, ತನ್ನ ಯಾವತ್ತು ಕೆಲಸಗಳ ತೂಕವನ್ನು ಮಾಡಲು ಹೋಗುವುದಿಲ್ಲ. 'ಕಾರ್ಯದ ಕೊನೆಯ ಗಳಿಗೆ' ಎಂಬುದು ಯಶಸ್ಸು, ಅಪಯಶಸ್ಸುಗಳ ವಿಚಾರ. ತೊಡಗಿದ ಕೆಲಸ ಕೈಗೂಡಬೇಕೆಂಬ ಹಂಬಲ ಎಲ್ಲರಿಗೂ ಇದೆ. ಆದರೆ ಕೈಗೂಡೀತೆಂಬ ಭರವಸೆ ಯಾರಿಗೂ ಇಲ್ಲ. ಆದರೂ ಕೈಗೂಡೀತು, ಕೈಗೂಡಲಾರದೆಂಬ ಕೊನೆಯ ತೀರ್ಮಾನವೇ ಕರ್ತವ್ಯ ಪ್ರೇರಣೆಗೆ ಕಾರಣವಾಗಬೇಕಾಗಿಲ್ಲ. ತನ್ನ ಕರ್ತವ್ಯವನ್ನು ಪ್ರೇರಿಸುವುದಾವುದು? ಶೋಧನೆ, ಕುತೂಹಲ, ಸಂತೋಷಾರ್ಜನೆ ಮೊದಲಾದ ಬಯಕೆಗಳು. ಕೆಲಸದ ಹೆಜ್ಜೆ ಹೆಜ್ಜೆಯಲ್ಲಿಯೂ

ಮನುಷ್ಯನಿಗೆ ಇವು ಅನೇಕ ಹೊಸ ಸಂಗತಿಗಳನ್ನು ಹೇಳುತ್ತ ಹೋಗುತ್ತವೆ. ಇವು ಗಳಿಂದಲೂ ಮನುಷ್ಯ ಆನಂದಿತನಾಗಬಲ್ಲ. ಯಶಸ್ಸು ತಂದುಕೊಡಬಹುದಾದಂಥ ಸಂತೋಷವನ್ನು, ಕರ್ತವ್ಯಮಾರ್ಗವೂ ತಂದುಕೊಡಬಲ್ಲುದು. ಆನಂದವೆಂಬುದು ಕೆಲಸ ಮುಗಿದ ಮೇಲೆ ಬರುವ ತೃಪ್ತಿಯೂ ಹೌದು ; ಕೆಲಸ ಮಾಡುತ್ತಿರುವಾಗ ಬರುವ ತನ್ಮಯತೆ, ಉತ್ಸಾಹಗಳೂ ಹೌದು.

**ಸೋಲು**

ಯಶಸ್ಸೇ ಜೀವನದ ಗುರಿಯಾಗಿರಬಾರದು. 'ಯಶಸ್ಸಿನಿಂದಲೇ ಆನಂದವಿದೆ. ಇಲ್ಲವಾದರೆ ಇಲ್ಲ' ಎಂಬ ನಂಬಿಕೆಯು ನಮ್ಮನ್ನು ಕಾಡಬಾರದು. ಯಶಸ್ಸು ಪೂರ್ಣತೆಯ ಲಕ್ಷಣ; ಅದರ ಮುಂದೆ ಆಗಬೇಕಾದ ಕೆಲಸವೇನಿಲ್ಲ. ನಮ್ಮ ಈ ನಿಸರ್ಗ, ಈ ಪ್ರಪಂಚಗಳು ಇನ್ನೂ ಸಾಗುತ್ತಿರುವುದನ್ನು ಕಂಡರೆ, ಅವು ತಮ್ಮ ಗುರಿಯನ್ನು ಮುಟ್ಟಿಲ್ಲ ; ಪೂರ್ಣತೆಯನ್ನು ಹೊಂದಿಲ್ಲ—ಎಂಬುದು ಸ್ಪಷ್ಟವಾಗದೆ ? ಅಂದರೆ ಈ ತನಕ ನಡೆದ ಬಾಳ್ವೆ ವ್ಯರ್ಥವಾಯಿತೇ ? ಈ ಪ್ರಶ್ನೆಗೆ ಮನಸ್ಸು ಏನು ಉತ್ತರವನ್ನು ಹೇಳುತ್ತದೆ ? ಪೂರ್ಣತೆಯ ಕಡೆಗೆ ಸಾಗುವ ಪ್ರಯತ್ನವು, ಪೂರ್ಣತೆಗಿಂತಲೂ ಸುಂದರವಾದದ್ದು ; ಅದರಷ್ಟೇ ಮುಖ್ಯವಾದದ್ದು. ಕಾರಣ—ಇಲ್ಲಿಯೇ ಅತಿ ಹೆಚ್ಚಿನ ಜೀವನದ ಚಟುವಟಿಕೆ ನಡೆಯತಕ್ಕದ್ದು. ಅತಿ ಹೆಚ್ಚಿನ ಚೇತನ ಪ್ರಕಾಶವಾಗುವುದೂ ಇಲ್ಲೇನೆ. ಹೆಚ್ಚಿನ ಸ್ಪರ್ಧೆ, ಉತ್ಸಾಹ, ಸಂಗ್ರಾಮಗಳು ಇಲ್ಲೇನೆ. ಈ ರಾಜ್ಯದಲ್ಲಿ—ಗೆದ್ದವರಷ್ಟೆ ಸೋತವರು ಮುಖ್ಯರು. ಒಂದು ಗೆಲಕ್ಕೆ ನೂರು ಸೋಲು. ಯಶಸ್ಸಿನಲ್ಲಿ ಸೋಲು ಅಡಗಿಬಿಡುತ್ತದೆ. ಕರ್ತವ್ಯಕ್ಕೆ ಎದುರಾಗುವ ಹಾನಿಗಳು ಕಾಣಿಸುವುದಿಲ್ಲ. ನಿಜವಾದ ಸಾಹಸ, ಸ್ಪರ್ಧೆಗಳು ಕಾಣಿಸುವುದು ಸೋಲಿನೊಂದಿಗೆ ಹೋಲಿಸಿದಾಗ. ಸೋತವನ ಕೆಲಸ ಗೆದ್ದವನಿಗಿಂತ ಕಡಮೆಯಾಗಬೇಕಾಗಿಲ್ಲ. ಸೋತವರ ಹಲವು ಅನುಭವಗಳ ಮೇಲಿಂದಲೇ ಒಬ್ಬನ ಗೆಲವು ನಿಲ್ಲಬೇಕು. ಗೆಲುವಿಗೆ ಸೋಲು ಸೋಪಾನವಾದರೂ, ಬಾಳ್ವೆಯಲ್ಲಿ ಚೇತನಪೂರ್ಣವಾಗಿ ಬದುಕುವುದೂ ಕರ್ತವ್ಯದಲ್ಲೇ ಸಂತೋಷವನ್ನು ಅರಸುವುದೂ ಮನಸ್ಸಿನ ಆದರ್ಶಗಳಾಗಬೇಕು. ಬದುಕಿದವನು ಸಾವನ್ನು ಒಪ್ಪಿದಂತೆಯು, ದುಡಿಯುವವನು ಸೋಲನ್ನೂ ಒಪ್ಪಬೇಕು.

# ೧೩ ಜೀವನ, ನೀತಿ

### ಅಳತೆ

ಈ ಮೊದಲು ಜೀವನಕ್ಕೆ ಸಂಬಂಧಿಸುವ ಅನೇಕ ಸಮಸ್ಯೆಗಳನ್ನು ವಿಮರ್ಶಿಸಿದಂತೆ 'ನೀತಿ'ಯನ್ನು ಕುರಿತು ಈಗ ವಿಚಾರಿಸುವ. ಪರರ ಜೀವನವನ್ನು ತುಲನೆ ಮಾಡುವಾಗ, ವ್ಯಕ್ತಿಯು ಬಳಸುವ ಅಳತೆಗೋಲು ಅವನು ಇತರರ ಕಡೆಗೆ ತೋರಿಸುವ ಮನ್ನಣೆಗೊಂದು ಸೂಚಕವಾಗಿದೆ. ಅವನು ಇತರರೊಡನೆ ವರ್ತಿಸುವ ಬಗೆಗೆ ಅವನ ಈ ಮಾನ ತುಂಬ ವರ್ಚಸ್ಸನ್ನು ಬೀರುತ್ತದೆ.

### ಭಿನ್ನ ದೃಷ್ಟಿ

'ನೀತಿ' ಎಂಬುದು ವ್ಯಕ್ತಿಯು ನಡತೆಯನ್ನು ಅಳೆಯುವ ಒಂದು ನೋಟ. ವ್ಯಕ್ತಿಯು ತನ್ನ ಸಮೀಪದ ಮತ್ತು ದೂರದ ಮನುಷ್ಯ ಕುಟುಂಬದೊಡನೆ ವರ್ತಿಸುವ ರೀತಿಯು ಹೇಗಿರಬೇಕೆನ್ನುವ ಅಳತೆ. ಕೆಲವು ಬಾರಿ ಮನುಷ್ಯ ವ್ಯಕ್ತಿಯು, ಇತರ ಮನುಷ್ಯರೊಡನೆ ವರ್ತಿಸುವ ಬಗೆಯನ್ನು ಮಾತ್ರವಲ್ಲ, ಇತರ ಜೀವಿಗಳೊಡನೆ ಇರಿಸಿಕೊಳ್ಳುವ ಸಂಬಂಧವನ್ನು ಅದು ತೂಕ ಮಾಡುತ್ತದೆ. ಈ 'ನೀತಿ' ಎಂಬುದು ಗುಂಪು ಗುಂಪುಗಳಲ್ಲಿ ಭಿನ್ನವಾಗಿದೆ. ಕಾಲಕಾಲಗಳಲ್ಲಿ ಭಿನ್ನವಾಗಿದೆ. ಒಂದೇ ಕಾಲದ ಒಂದು ಜನ ಸಮುದಾಯದಲ್ಲಿ 'ನೀತಿ' ಎಂದು ಪರಿಗಣಿಸಲ್ಪಡುವ ವರ್ತನೆಯು ಬೇರೊಂದು ಜನ ಸಮುದಾಯದಲ್ಲಿ 'ಅನೀತಿ' ಎಂದು ಎಣಿಸಲ್ಪಡಬಹುದು. ಉದಾಹರಣೆಗಾಗಿ— ದಾಂಪತ್ಯವಿಚ್ಛೇದ ಐರೋಪ್ಯರಲ್ಲಿ ಅನೀತಿಯೆನಿಸುವುದಿಲ್ಲ ; ಆದರೆ ಅದು ಪ್ರಚಲಿತ ಹಿಂದೂ ಸಮಾಜದಲ್ಲಿ ನೀತಿಬಾಹಿರವೆನಿಸಿದೆ. ಒಂದು ಕಾಲದಲ್ಲಿ ನಮ್ಮ ದೇಶದಲ್ಲಿ ಹೊಲೆಯರ ಸ್ಪರ್ಶ 'ಅನೀತಿ' ಎನಿಸಿತ್ತು ; ಈ ದಿನಗಳಲ್ಲಿ ಅವರನ್ನು ದೂರ ಇರಿಸುವುದೇ 'ಅನೀತಿ' ಎನಿಸುತ್ತಿದೆ. ಹೀಗೆಯೇ ಪ್ರಾಣಿ ಹಿಂಸೆಯ ವಿಚಾರ. ಹಿಂದೂಗಳಾದವರಿಗೆ ಗೋವಧೆ 'ಅನೀತಿ'. ಮುಸಲ್ಮಾನರಿಗೆ ಅದು 'ಅನೀತಿ'ಯೆನಿಸುವುದಿಲ್ಲ.

ಹೀಗೆ ಮನುಷ್ಯನು ಮನುಷ್ಯರೊಡನೆ ನಡೆಯಿಸುವ ಅನೇಕಾನೇಕ ವ್ಯವಹಾರಗಳು ಆಯಾಯ ಕಾಲದ ದೃಷ್ಟಿಯಿಂದ ನೀತಿ, ಅನೀತಿ—ಎಂದು ಸಾರಲ್ಪಡುತ್ತವೆ. ಅನೀತಿಗಳಲ್ಲೂ ಎಲ್ಲ ಬಗೆಯವು ಒಂದೇ ತೆರನ ಕನಿಷ್ಠತೆಯನ್ನೂ ನಿಂದ್ಯತೆಯನ್ನೂ ಪಡೆದಿಲ್ಲ. ಕಳ್ಳತನ, ಕೊಲೆ, ಮದ್ಯಪಾನ, ಅನೃತವಾದ, ಅವಿಧೇಯತೆ ಇವೆಲ್ಲ ಆಯಾಯ ಪ್ರಸಂಗ, ಜನಸಮುದಾಯಗಳನ್ನು ಹೊಂದಿ, ಬೇರೆ ಬೇರೆ ಅಳತೆಯ ನಿಂದೆಗೆ ಗುರಿಯಾಗಿವೆ.

**ಸ್ವತಂತ್ರ ಅಳತೆಯಿಲ್ಲ**

'ನೀತಿ'ಯು ಬಗೆಯು ಸ್ವತಂತ್ರವಾದೊಂದು ನೆಲಗಟ್ಟಿನ ಮೇಲೆ ನಿಂತಿಲ್ಲ. ಯಾವ ಕಾಲಕ್ಕೂ 'ಇದು ನೀತಿ, ಇದು ಅನೀತಿ' ಎನ್ನುವ ತಳಹದಿ ಅದಕ್ಕಿಲ್ಲ; ಏಕೆಂದರೆ—ಮನುಷ್ಯನ ನೀತಿ ಶಾಸ್ತ್ರ ಅವನ ಹಿನ್ನೆಲೆಯ ಮೇಲೆ ಹೊಂದಿದೆ. ಅದರಂತೆ ಆಯಾಯ ಕಾಲದ ಅವಶ್ಯಕತೆ, ಜನಾಭಿಪ್ರಾಯಗಳನ್ನೂ ಹೊಂದಿಕೊಂಡಿದೆ. ಪರಂಪರೆಯಿಂದ ಬಂದ ನಂಬಿಕೆಗಳ ಮೇಲಿಂದ, ಒಂದು ಗುಂಪಿನವರು ತಮ್ಮ ತಮ್ಮ ನಡವಳಿಕೆಯ ತುಲನೆ ಮಾಡುತ್ತಾರೆ. ಆದರೆ ಈ ಹಿಂದಿನ ನೆಲೆ ಏನೇ ಇರಲಿ, ಜನರಲ್ಲಿ ವಿಮರ್ಶೆ ಹೆಚ್ಚಾದರೆ, ಇಲ್ಲವೆ ಇನ್ನಾವುದಾದರೂ ಅವಶ್ಯ ಪ್ರಸಂಗ ಬಲವಂತ ಮಾಡಿದರೆ—ಈ ನೀತಿಯ ನೋಟವೂ ಬದಲಾಗಬಹುದು. ಅಸ್ಪೃಶ್ಯತೆಯನ್ನು ಕುರಿತಾದ ನೀತಿಯು ಜನಜಾಗೃತಿಯಿಂದ ಇಂದು ಶಿಥಿಲವಾಗುತ್ತಿದ್ದರೆ, ಪುಷ್ಪವತಿ ವಿವಾಹವು ಅನೀತಿಯಲ್ಲ ಎಂದೊಪ್ಪುವುದು ಕಾಯಿದೆಯ ಬಲ, ವರರ ಅಭಾವಗಳಿಂದ ಪ್ರಾಪ್ತವಾದ ನೋಟದ ಪರಿವರ್ತನೆಯಾಗಿದೆ.

**ನೀತಿಯ ಅಪಹಾಸ**

ನೀತಿಯ ಹೆಸರಿನಲ್ಲಿ, ನೀತಿಯ ಅಪಹಾಸವೂ ನೀತಿಯೆನಿಸಿಕೊಂಡಿರುವುದೂ ಬಹಳವಾಗಿದೆ. ಒಬ್ಬ ವ್ಯಕ್ತಿಯು ಹೊಟ್ಟೆಗಿಲ್ಲದೆ ಒಂದು ಆಣೆಯನ್ನು ಕಳವು ಮಾಡಿದರೆ 'ಅನೀತಿ'ವಂತನೆನಿಸುತ್ತಾನೆ. ನೆರಮನೆಯ ಹಿತ್ತಲಿನಿಂದ ರುಚಿಗಾಗಿ ಮಾವಿನ ಹಣ್ಣನ್ನು ತೆಗೆಯುವವನು ಅಷ್ಟು ಅನೀತಿವಂತನಲ್ಲ; ಲಾಭದಾಸೆಯಿಂದ ಒಂದಕ್ಕೆ ಹತ್ತು ಬೆಲೆಯೇರಿಸಿ ಜನರನ್ನು ಸುಲಿಯುವ ವ್ಯಾಪಾರಿಯು ಅನೀತಿವಂತನೆನಿಸಿಲ್ಲ. ಹಾಗೆಯೇ ನ್ಯಾಯವಾದ ಕಾರಣದಿಂದ ಉದ್ರಿಕ್ತನಾಗಿ, ಕೋಪದಿಂದ ಕೊಲೆ ಮಾಡಿದವನು ಅಪರಾಧಿಯೆನಿಸಿ ಸೆರೆಗೆ ಹೋಗಬಹುದು. ದೇಶ, ಧರ್ಮಗಳ ಹೆಸರಿನಲ್ಲಿ ಸಾವಿರಾರು ಕೊಲೆಗಳನ್ನು ಮಾಡಿದವನು ಶೌರ್ಯವಂತನೆಂದು ಪುರಸ್ಕೃತನಾಗಲೂ ಬಹುದು.

ಇವುಗಳನ್ನೆಲ್ಲ ನೋಡುವಾಗ—ಕ್ರಿಯೆಯಿಂದಲೇ ನೀತಿ—ಅನೀತಿಗಳ ನಿರ್ಣಯವಾಗುವುದಕ್ಕಿಂತ ಮಿಗಿಲಾಗಿ, ಅದನ್ನು ತೂಗುವ ನ್ಯಾಯಾಧೀಶರನ್ನು ಅದು ಹೊಂದಿದೆ–ಎಂಬಂತೆ ಕಾಣುತ್ತದೆ. ವ್ಯಕ್ತಿ, ವ್ಯಕ್ತಿಗಳು ಮಾಡುವ ಚರ್ಯೆಗಳನ್ನು ವಿಮರ್ಶಿಸುವಾಗ, ಬಹು ಜನರ ಕ್ರಿಯೆಗಳು 'ನೀತಿ'ಕರವೆನಿಸುತ್ತವೆ. ಅಲ್ಪ ಸಂಖ್ಯಾಕರ ಕೆಲಸ 'ಅನೀತಿ'ಯೆನಿಸಲ್ಪಡಬಹುದು. ಹಾಗಾದರೆ ನೀತಿಗೆ ಬಹುಮತ ಗಳಿಸುವುದೊಂದೇ ದಾರಿಯೆಂದಾಗದೀತು. ಇದೇತಕ್ಕೆ ಹೀಗೆ ಅಪಹಾಸ್ಯಕ್ಕೆ ಗುರಿಯಾಗುತ್ತಿದೆ—ಎಂದರೆ ನೀತಿಯನ್ನು ನಿರ್ಣಯಿಸುವವನೂ ಅಪರಾಧಿಯೂ ಒಬ್ಬನೇ ಆದಲ್ಲಿ ಹೀಗಾಗುತ್ತದೆ. ಮನುಷ್ಯನು ಸ್ವಾರ್ಥಪ್ರಿಯನು. ತನ್ನ ನಡತೆಯನ್ನು ಬಿಟ್ಟು, ಅನ್ಯರನ್ನು ತುಲನೆಮಾಡುವುದರಲ್ಲಿ ನಿಸ್ಸೀಮ. ಹೀಗಾಗಿ ಅವನ ನೀತಿಯ ಅಳತೆಯು ಅವನಿಗೆ ಬೇಕಾದಂತೆ ಹಿಗ್ಗುತ್ತದೆ. ಒಂದು ಅನೀತಿಗೆ ಸಮಾಜದ ಬೆಂಬಲ, ಅಂದರೆ ಬಹು ಸಂಖ್ಯಾಕರ ಬೆಂಬಲ ದೊರೆತಲ್ಲಿ, ಅದು ನೀತಿಯೆನಿಸಿಕೊಳ್ಳಬಹುದು. ಬಹುವಾಗಿ ಯುದ್ಧಗಳು, ವಿವಿಧ ರಾಷ್ಟ್ರಗಳ

ಜನರ ಬಹುಮತದಿಂದಲೇ ತೊಡಗುವುದರಿಂದ ನೀತಿಯೆನಿಸುವುದುಂಟು.

**ವಿಮರ್ಶಕನ ದೃಷ್ಟಿ**

ಹೀಗೆ ವಿಚಾರಿಸುವಲ್ಲಿ—ನೀತಿಯ ನಿರ್ಣಯಕ್ಕೆ, ಸ್ವಸ್ವಾರ್ಥ ಸೇರಿಕೊಂಡವರು ತಕ್ಕ ವಿಮರ್ಶಕರಾಗರು. ನ್ಯಾಯಕರ್ತನು ಬೇರೆಯೇ ಆದಲ್ಲಿ ತುಲನೆಗೆ ಒಂದು ಅಧಿಕಾರ ಏದೆ. ಅಲ್ಲದೆ ನೀತಿಯನ್ನು ತೂಗುವ ವ್ಯಕ್ತಿಗೆ, ಮೊದಲು ತಾನು ಅನುಸರಿಸುವ ನಡ ವಳಿಕೆ ಶ್ರೇಷ್ಠವೆಂಬ ಪೂರ್ವಸಿದ್ಧ ತೀರ್ಮಾನ ಇರಲೇ ಕೂಡದು. ಕೃತಿ, ನಡವಳಿಕೆ ಗಳನ್ನು ವ್ಯಕ್ತಿಗಳ ಪರಿಸ್ಥಿತಿ, ಆವರಣ, ಕ್ರಿಯೆ ನಡೆದ ಪ್ರಸಂಗ, ವ್ಯಕ್ತಿಯ ಸಂಸ್ಕಾರ—ಇವುಗಳ ಮೇಲಿಂದ ನೋಡಬೇಕು. ವ್ಯಕ್ತಿಯು ಒಂದು ಕೃಯಲ್ಲಿ ಭಾಗಿಯಾಗಲು, ಅವ ನಾಗಿ ಎಷ್ಟು ಕಾರಣ, ಅವನ ಮೇಲೆ ಹೊರೆಯಾಗಿ ಬಂದ ಆವರಣ ಎಷ್ಟು ಕಾರಣ—ಎಂದು ತೂಗಂವುದೂ ಅವಶ್ಯ.

**ನಿಸ್ವಾರ್ಥ ಜನಹಿತ**

ಸಾಮಾನ್ಯವಾಗಿ ಯಾವ ನಡವಳಿಕೆಯು ನಿಸ್ವಾರ್ಥ ಬುದ್ಧಿಯ ಒಂದು ಕೃತಿಯೋ, ಅದು ನೀತಿಯೆನಿಸಬಹುದು. ಯಾವುದರಲ್ಲಿ ತನಗೆ ವಿಶಾಲವಾದ ನೋಟವಿದೆಯೋ, ಬಹು ಜನರ ಹಿತವು ಯಾವುದರಿಂದ ಆಗುತ್ತದೋ, ಅದು ನೀತಿಯೆಂದು ಆ ಕಾಲಕ್ಕೆ ನಾವು ತಿಳಿಯಬಹುದು.

ಮನುಷ್ಯ ತನ್ನ ಬಳಗದೊಡನೆಯೂ, ಬಂಧು, ನಂಟ, ಗೆಳೆಯರೊಡನೆಯೂ ತಾವು ಇರಿಸಿಕೊಳ್ಳುವ ಸಂಬಂಧಗಳನ್ನು, ವಿಶಾಲ ಜೀವನದ ಹಿತದ ದೃಷ್ಟಿಯಿಂದಲೇ ನೋಡಿ, ಅದರ ನೀತಿಗಳನ್ನು ಅಳೆಯಬೇಕು.

ಗುರು ಶಿಷ್ಯರ ಸಂಬಂಭವಾಗಲಿ, ರಾಜ–ಪ್ರಜೆಗಳ ಸಂಬಂಧವಾಗಲಿ ಈ ರೀತಿ ಯಿಂದಲೇ ನಮ್ಮ ತುಲನೆಗೆ ಗುರಿಯಾಗಬೇಕು. ಕೇವಲ ಕಾಲ, ಪರಂಪರೆಗಳ ರೂಢಿ ಗಳಿಂದ 'ನೀತಿ'ಯ ಅಳತೆಯನ್ನು ಮಾಡುವುದರಿಂದ, ಸಮಾಜದ ಜೀವನ ಹೆಚ್ಚಿನ ಪ್ರಯೋಜನವನ್ನು ಹೊಂದಲಾರದು. ಹಿರಿಯನಾಗಿ ಹುಟ್ಟಿದುದೇ ಒಂದು ಲಾಭ; ಅರಸಾದುದೇ ಒಂದು ಲಾಭ; ಗಂಡನಾದುದೇ ಒಂದು ಲಾಭ–ಎಂದು ನಾವು ತಿಳಿಯು ವಂತಿರಬಾರದು. ಪರಂಪರೆಯಿಂದ ಬಂದ ವಿಧೇಯತೆ, ಭಕ್ತಿ, ಪ್ರೇಮ, ವಾತ್ಸಲ್ಯ–ಇವು ಗಳ ವಿಷಯದಲ್ಲಿ ಮಾಡುವ ನಿರ್ಣಯಗಳು, ಜನ ಸಮುದಾಯದ ಹಿತದ ದೃಷ್ಟಿ ಯಿಂದ ಉಂಟಾಗಬೇಕು.

**ಭಕ್ತಿಗೂ ವಾತ್ಸಲ್ಯಕ್ಕೂ ಮೇರೆ**

ರಾಜನು ಪ್ರಜೆಯಿಂದ ಬಯಸುವ ಭಕ್ತಿಗೆ, ಗುರುವು ಶಿಷ್ಯನಿಂದ ಬಯಸುವ ಭಕ್ತಿಗೆ, ತಂದೆ ಮಗನಿಂದ ಬಯಸುವ ಪ್ರೀತಿಗೆ, ಗಂಡ ಹೆಂಡತಿಯಿಂದ ಬಯಸುವ ಪ್ರೇಮಕ್ಕೆ–ಒಂದು ಅಳತೆಯಿರಬೇಕು. ಅವರವರ ಬಾಂಧವ್ಯದ ಹುಗಿನಲ್ಲಿ ನೆರೆಕರೆಯ ಜಗತ್ತು ಬಲಿಯಾಗಬಾರದು. ಉಳಿದ ಜೀವಿಗಳ ಹಕ್ಕು, ಗೌರವ ಕಡಮೆಯಾಗ ಬಾರದು. ಹೀಗಾಗಲು ಈ ಪರಸ್ಪರ ನಡವಳಿಕೆಗಳು ಬರಿಯ ಅಂಧಾನುಕರಣೆಯಾದರೆ

ಎಂದೂ ಸಾಲದು, ಅವು ವಿಚಾರಕ್ಕೆ ಗುರಿಯಾಗಬೇಕು.

ತಂದೆ ಮಕ್ಕಳೊಳಗಿನ ಸಂಬಂಧವು ಬರಿಯ ಅವರವರ ಸಂಬಂಧವೇ ? ರಾಜ ಪ್ರಜೆಗಳ ಬಾಂಧವ್ಯ ಖಾಸಗಿ ವಿಷಯವೇ ? ಗಂಡಹೆಂಡಿರ ಪ್ರೇಮ ಕೇವಲ ಎರಡು ವ್ಯಕ್ತಿಗಳ ಸಂಪೂರ್ಣ ವ್ಯವಹಾರವೇ ? ಅವರ ಈ ಸಂಬಂಧಗಳು ಅಂಥಾ ಪ್ರೇಮ, ಪ್ರಣಯ, ಭಕ್ತಿಗಳಲ್ಲಿ ಭಾಗಿಯಾಗುವ ಜನರ ದೃಷ್ಟಿಯನ್ನು ಬದಲಿಸುವ ಶಕ್ತಿಯು ಳ್ಳವು. ದೊಡ್ಡದಾದ ಸುತ್ತಲಿನ ಪ್ರಪಂಚದಲ್ಲಿ ಉಳಿದವರಿಗೂ, ಉಳಿದವರ ಸುಖ ದುಃಖಗಳಿಗೂ ತಕ್ಕ ಸ್ಥಾನ ಇರಬೇಡವೇ ? ಇತರ ಜೀವಿಗಳ ಹಿತವನ್ನು ಅಲಕ್ಷಿಸು ವಂತಹ ಹಿರಿಮೆಯು—ಯಾವ ಗುರುವಿಗೂ ಇಲ್ಲ, ಅರಸನಿಗೂ ಇಲ್ಲ, ತಂದೆಗೂ ಇಲ್ಲ, ಪತಿಗೂ ಇಲ್ಲ.

**ಪ್ರೀತಿಯ ಅಂತರಗಳು**

ವ್ಯಕ್ತಿಯ ವಿಧೇಯತೆ, ಪ್ರೀತಿ, ಪ್ರಣಯಗಳನ್ನು ಅಧಿಕರಿಸುವ ಕೆಲವೊಂದು ಸಂಬಂಧಗಳನ್ನು ನಾವು ಪರಿಶೀಲಿಸುವುದವಶ್ಯ. ಇವುಗಳಲ್ಲಿ ಕೆಲವು ಸಮೀಪದುವು ; ಕೆಲವು ದೂರದುವು. ಇವೆಲ್ಲವುಗಳಿಗೂ ಒಂದೇ ಸಮನಾದ ತೂಕವಿಲ್ಲ; ಅಲ್ಲದೆ ಅವು ಗಳು ವ್ಯಕ್ತಿಯ ಮನಸ್ಸನ್ನು ಅಧಿಕರಿಸುವ ವಿಷಯದಲ್ಲಿ ಒಂದೇ ಬಗೆಯ ಒತ್ತಡವುಳ್ಳ ವುಗಳಾಗಿಯೂ ಇಲ್ಲ. ಒಬ್ಬನು ತನ್ನ ಸಂಬಂಧಿಗಳಲ್ಲಿ ದುಡುಕಿ ವರ್ತಿಸಿದಾಗ, ರೂಢಿಗೆ ವಿರೋಧವಾಗಿ ವರ್ತಿಸಿದಾಗ, ಅವನನ್ನು ತುಲನೆ ಮಾಡುವವರು, ಈ ವಿವಿಧ ಸಂಬಂಧ ಗಳು ವ್ಯಕ್ತಿಯ ಮನಸ್ಸಿನಲ್ಲಿ ಯಾವೊಂದು ತೀವ್ರತೆಯಿಂದ ಸ್ಥಾಪಿತವಾಗಿವೆ—ಎಂಬು ದನ್ನು ಪರಿಗಣಿಸಬೇಕು. ಈಗ ರಾಜಭಕ್ತಿಯಂಥ ಒಂದು ವಿಷಯವಿದೆಯೆಂದು ತಿಳಿ ಯುವ. ಬಹುಕಾಲದಿಂದಲೂ "ರಾಜಾ ಪ್ರತ್ಯಕ್ಷ ದೇವತಾ" ಎಂದು ಪರಂಪರೆಯ ನಂಬಿಕೆಯಿಂದ, ವ್ಯಕ್ತಿಗಳಲ್ಲಿ ಇಳಿದು ಬಂದ ಪ್ರೇಮವಿದು. ಇದು ಕೇಳಿ ಬಂದ ಸಂಬಂಧ. ಅರಸನನ್ನು ಕಂಡಿರದಾತನೂ ಈ ವಿಷಯವಾದ ಒಂದು ಶ್ರದ್ಧೆಯನ್ನಿರಿಸಿಕೊಂಡಿರು ತ್ತಾನೆ. ಇಂಥ ಅದೃಶ್ಯ ಸಂಬಂಧಗಳನ್ನು ವ್ಯಕ್ತಿ ಸುಲಭದಲ್ಲಿ ಕಡಿದುಕೊಳ್ಳಬಲ್ಲ. ಹೀಗೆ ಕಡಿದು, ಹಲವಾರು ರಾಷ್ಟ್ರಗಳು ಪ್ರಜಾ ಪ್ರಭುತ್ವಕ್ಕೆ ಕಾಲಿರಿಸಿದುವು. ರಾಜದ್ರೋಹಕ್ಕೆ ಸರಕಾರದ ಶಿಕ್ಷೆಯಿದೆ—ಎಂಬ ಭೀತಿಯಿಂದ ಜನರ 'ರಾಜನೀತಿ' ಉಳಿಯಬೇಕೇ ಹೊರತು, ವ್ಯಕ್ತಿಯ ನಿಸರ್ಗಸಹಜ ವಿಧೇಯತೆಯಿಂದ ಈ ಸಂಬಂಧ ಉಳಿದುಬಂದಿಲ್ಲ. ಅಂದರೆ—ಮನಸ್ಸಿನ ಮೇಲೆ ರಾಜರ, ಅರಸನ ಪ್ರೇಮದ ಒತ್ತಡಗಳೇ ತೀರ ಕಡಮೆಯ ಶಕ್ತಿಯವು.

ಇದಕ್ಕಿಂತ ತುಸು ಭಿನ್ನವಾದದ್ದು, ಗುರು ಶಿಷ್ಯರ ಸಂಬಂಧ. ಧರ್ಮಗುರುಗಳಾ ದವರು ಪರಂಪರೆಯಿಂದ, ಈ ಸಂಬಂಧದ ಬಿಗುವನ್ನು ತಮ್ಮ ಅಧೀನತೆಯಲ್ಲಿ ಇರಿಸಿ ಕೊಂಡಿದ್ದಾರೆ. ಅಲ್ಲದೆ ಪರಲೋಕದ ಭೀತಿಯಿರುವಷ್ಟು ದಿನ, ವ್ಯಕ್ತಿಗೆ ತನಗೆ ಅಪೂರ್ವ ವಾಗಿಯಾದರೂ ಭೇಟಿಯಾಗುವ ಗುರುವಿನ ವಿಚಾರದಲ್ಲಿ ಹೆಚ್ಚಿನ ಗೌರವ, ಹೆದರಿಕೆ ಗಳಿವೆ.

**ತಾಯಿಮಕ್ಕಳು**

ಗುರುಭಕ್ತಿ ರಾಜಭಕ್ತಿಗಳೆರಡು ದೂರದ ಬಾಂಧವ್ಯಗಳೆಂದೆ. ನೇರವಾದ ಮಾನಸಿಕ ಮೈತ್ರಿ ಇವುಗಳಲ್ಲಿ ಕಡಿಮೆ. ಆದರೆ ತಂದೆಮಕ್ಕಳ, ತಾಯಿಮಕ್ಕಳ ಸಂಬಂಧ ಈ ತೆರನಾದುದಲ್ಲ. ಹಾಗೇನೆ ಗಂಡ ಹೆಂಡಿರ ಸಂಬಂಧಗಳು. ಇಲ್ಲಿ ಶಿಕ್ಷಣ ಆವರಣ ಗಳಿಂದ ಉಂಟಾಗುವ ಮಾನಸಿಕ ಸಂಬಂಧಕ್ಕಿಂತ ಮಿಗಿಲಾಗಿ, ಜೀವಿತವಾದ (Biological) ಬಾಂಧವ್ಯವಿದೆ. ಮನುಷ್ಯನೂ ಪ್ರಾಣಿಯೇ. ಪ್ರಾಣಿ ಸಹಜವಾದ ತಾಯಿ ಮಕ್ಕಳ ಪ್ರೇಮ ಜೀವಿಗಳಲ್ಲಿ ಕೇವಲ ಸ್ವಾಭಾವಿಕವಾದುದು (instinctive) ಅದು ತೀರ ಸಹಜವಾದುದು. ಜೀವನಮಾರ್ಗದಲ್ಲಿ ಇದು ಉದ್ದೇಶಪೂರಿತವಾದದ್ದು. ನಿಸರ್ಗ ಶಕ್ತಿ ಈ ಬಾಂಧವ್ಯವನ್ನು ಹೊಸೆಯುತ್ತದೆ.

ಪಶುಗಳಲ್ಲಿರುವುದಕ್ಕಿಂತ ಹೆಚ್ಚಾಗಿ, ಮನುಷ್ಯನ ಮರಿಯು ಪರಾಧೀನವಾದ ಪ್ರಾಣಿ. ಒಂದು ಮಂಗನ ಮರಿ, ಹುಲಿಮರಿ ತಾಯಬಳಿ ಒಂದು ವರ್ಷ ಕಾಲಕಳೆಯ ಬಹುದು. ಮುಂದೆ ಅವು ಸ್ವತಂತ್ರ ಜೀವನ ನಡೆಯಿಸಬಲ್ಲುವು. ಅವು ತಾಯಿತಂದೆ ಯರನ್ನು ಆ ಮೇಲೆ ಮರೆಯುವುದೂ ಸಾಧ್ಯ. ಆದರೆ ಮನುಷ್ಯನ ಕೃತಕ ಬಾಳ್ವೆಯಲ್ಲಿ, ಶಿಶು ೧೦—೧೮ ವಯಸ್ಸಿಗೂ ತನ್ನ ಜೀವನವನ್ನು ತಾನು ಸಾಗಿಸಲಾರ. ಈ ಕೆಲಸ ಸಾಧಿಸಲು ನಿಸರ್ಗ ತಾಯಿಮಕ್ಕಳ ಪ್ರೀತಿಯನ್ನು, ತಂದೆಮಕ್ಕಳ ಪ್ರೀತಿಯನ್ನು, ಬಹು ದಿನ ಉಳಿಸಿಕೊಳ್ಳುತ್ತದೆ. ಈ ಪ್ರೇಮ ಹುಟ್ಟಿದಂದಿನಿಂದ ಸಾಕಷ್ಟು ಮಾನಸಿಕವಾಗಿ ಬೆಳೆದು, ಭಾವನಾ ರಾಜ್ಯದ ಮೇಲೆ ತುಂಬ ವರ್ಚಸ್ಸನ್ನು ಬೀರುತ್ತದೆ.

ಮನುಷ್ಯನಿಗೆ ಪ್ರಾಯ ಬರುವಾಗ ೧೦–೨೦ ವರ್ಷವಾಗುತ್ತದೆ. ಅಲ್ಲಿಂದ ಆತ ಸ್ವತಂತ್ರ ಜೀವನ ಮಾಡಬಹುದಾದರೂ, ಈ ಧೀರ್ಘಕಾಲ ಅವನ ಭಾವನೆಯಲ್ಲಿ ತುಂಬಿಬಂದ ಪ್ರೀತಿಗಳು ಅಳಿಯುವುದಿಲ್ಲ. ಅವನು ಸಹಜವಾಗಿ ತನ್ನ ತಂದೆತಾಯಿ ಗಳನ್ನು ಅನುಸರಿಸಿಯೇ ನಡೆಯುತ್ತಾನೆ. ಆದರ ಮುಂದೆ ಅವನದೇ ತಿಳುವಳಿಕೆ, ಸ್ವಾರ್ಥ ಬೆಳೆಯುವಾಗ, ಬೆಳೆಯುವ ಆವರಣ ಬೇರೆಯಾದರೆ, ಅವನಲ್ಲಿ ಸ್ವತಂತ್ರವಾದ ಭಿನ್ನ ಭಾವನೆಗಳು ಬಲವಾಗುತ್ತ ಬಂದು ಈ ಪ್ರೀತಿ ಕಡಮೆಯಾಗಬಹುದು.

**ಗಂಡಹೆಂಡಿರಲ್ಲಿ**

ತಾಯಿ–ಮಕ್ಕಳಲ್ಲೋ, ತಂದೆ–ಮಕ್ಕಳಲ್ಲೋ ಇರುವ ಸಂಬಂಧವನ್ನು ಮೀರಿ ಸುವ ಸಂಬಂಧ ಗಂಡು ಹೆಣ್ಣಿನಲ್ಲಿ ಒದಗುತ್ತದೆ. ಈ ಸಂಬಂಧ ಅವರ ಎಳೆತನ, ಹುಡುಗ ತನದಲ್ಲಿ ಕಾಣಿಸದಿದ್ದರೂ, ಒಮ್ಮಿಂದೊಮ್ಮೆಗೇನೆ ಯೌವನದಲ್ಲಿ ಮೊಳೆತುಬಿಡುತ್ತದೆ. ಯೌವನದ ಭಾವನಾರಾಜ್ಯದ ಮೇಲೆಲ್ಲ ಅದು ಅಧಿಕಾರ ನಡೆಯಿಸಿಬಿಡುತ್ತದೆ. ತಾಯಿ ಮಕ್ಕಳ ದೀರ್ಘ ಮಮತೆಯನ್ನು ಮೀರಿಸುವ ಭರ, ಒಮ್ಮೆಗೇ ಜೀವನದಲ್ಲಿ ಮೂಡುವ ಈ "ಅನುರಾಗ," ಪ್ರಣಯಗಳಿಗಿವೆ. ಇಲ್ಲಿ ಮನುಷ್ಯ ಬಹುಮಟ್ಟಿಗೆ ಪ್ರಾಣಿ ಸಹಜವಾದ ವಾಸನೆಗಳಿಗೆ ಬಲಿಯಾಗುತ್ತಾನೆ. ಈ ತೆರನ ವಾಸನೆಗಳ ಆವೇಗ ಅವನಲ್ಲಿ ಸ್ವಾಭಾವಿಕ ವಾಗಿ ಬರುವ ಶಕ್ತಿ. ಇಂಥ ಆವೇಗವನ್ನು ಕಲ್ಪಿಸಿ ಮನಸ್ಸನ್ನು ಕೆರಳಿಸುವುದು ನಿಸರ್ಗದ್ದೇ

ಆಟ. ಸೃಷ್ಟಿಯ ಒಂದು ಉದ್ದೇಶ ಸಾಧನೆಗಾಗಿ ಇದು ನಡೆಯಬೇಕು—ಸಂತಾನ ಪ್ರತಿಕ್ರಿಯೆಯು ಗಂಡುಹೆಣ್ಣುಗಳ ಗಾಢ ಮೈತ್ರಿಯಿಂದ ಸಾಧ್ಯವೆಂಬುದರಿಂದ.

ಈ ಸಂಬಂಧವು ನಮ್ಮ ಮಾನವನ ನೀತಿಕೋಶದಲ್ಲಿ, ಬಹು ಮಹತ್ವವನ್ನು ಪಡೆದಿದೆಯಾದರೂ, ಆ ನೀತಿಯ ವಿಮರ್ಶೆಯಲ್ಲಿ ಸಮನಾದ ಆಳತೆಯಾಗಲೀ, ನಿರ್ದಿಷ್ಟವಾದ ನಿಯಮಗಳಾಗಲಿ ಸಾಧ್ಯವಿರುವಂತೆ ಕಾಣಿಸದು. ಏಕೆಂದರೆ ಗಂಡು ಹೆಣ್ಣುಗಳು, ಎಷ್ಟೋ ಬಾರಿ ತಮ್ಮ ಆಳತೆಗೂ ಮೀರಿದ ನಿಸರ್ಗದ ಒತ್ತಡದಿಂದ. ಓಲಾಡುತ್ತವೆ,

**ಕಾಮವು ಮೀರುವ ಶಕ್ತಿ**

ದಾಂಪತ್ಯದಲ್ಲಿ ಭಾವನೆಯ ಒತ್ತಡ, ಅನುರಾಗದ ಒತ್ತಡ, ಲೈಂಗಿಕ ಕ್ರಿಯೆಯಿಂದ ತೃಪ್ತವಾಗವೇ ?—ಎಂಬೊಂದು ಪ್ರಶ್ನೆಯಿದೆ. ಪಶುಪ್ರಾಣಿಗಳ ಜೀವನದಲ್ಲಿ ಒಂದೊಂದು ಗುಂಪು ಒಂದೊಂದು ಉತ್ತರ ಹೇಳುತ್ತದೆ. ಕೂಟದಿಂದ ತೃಪ್ತಿಯಾದ ಗಂಡು ತಿರುಗಿ ಹೆಣ್ಣಿನ ಮೋರೆಯನ್ನು ಇನ್ನೊಂದು ಋತುಕಾಲದ ತನಕ ನೋಡದಿರುವುದುಂಟು. ಕೂಟದ ಬಳಿಕವೂ ಪ್ರೇಮ ಉಳಿದು, ಗಂಡು ಹೆಣ್ಣಿನ ಸ್ನೇಹ ದೀರ್ಘಕಾಲ ಉಳಿಯುವ ಜೀವಿಗಳ ಬಳಗವೂ ಉಂಟು. ಎಲ್ಲಿ—ಮುಂದಿನ ಸಂತಾನ ಹೆಚ್ಚು ಹೆಚ್ಚು ನಿಸ್ಸಹಾಯಕವಾಗಬಹುದೋ—ಅಂಥಲ್ಲಿ ಗಂಡುಹೆಣ್ಣುಗಳ ಸ್ನೇಹ, ಸಂತಾನ ಉತ್ಪತ್ತಿಯ ಕಾಲಕ್ಕಿಂತಲೂ ಮುಂದೆ ಸಾಗುತ್ತದೆ. ಮನುಷ್ಯ ಪ್ರಾಣಿಯು ಬಾಲ್ಯದಲ್ಲಿ ತೀರ ನಿಸ್ಸಹಾಯನೆಂಬುದರಿಂದ, ಅವನ ಹಿರಿಯರು ಅವನ ಜತೆಯಲ್ಲಿ ದೀರ್ಘಕಾಲ ಇರುವ ಅವಶ್ಯವಿದೆ. ಇತ್ತ ಗರ್ಭಿಣಿ ತಾಯಿಯೂ ಸಾಕಷ್ಟು ನಿಸ್ಸಹಾಯಳೇ—ಎಂಬುದರಿಂದ ಗಂಡು ಹೆಣ್ಣಿಂದ ಬಹುಕಾಲ ದೂರ ಇರುವಂತಿಲ್ಲ. ಆದರೆ ಈ ಬಾಂಧವ್ಯ ಸಮನಾಗಿ ಉಳಿಯಲು, ಕೂಟಕ್ಕೆ ಕಾರಣವಾದ ಮೂಲ ಪ್ರಣಯವು ತನ್ನ ಒತ್ತಡವನ್ನು ಇರಿಸಿಕೊಳ್ಳಬೇಕು. ಗಂಡು-ಹೆಣ್ಣುಗಳ ಸ್ನೇಹಕ್ಕೆ ಅದು ಮುಖ್ಯ ಕಾರಣ. ಭೋಗಕ್ರಿಯೆ ಕಳೆದ ಬಳಿಕವೂ, ಮನಸ್ಸಿನ ಭಾವನೆಯ ಒತ್ತಡವು ಉಳಿಯುತ್ತದೆ. ಪ್ರಣಯವು ಕ್ರಮೇಣ ಗೆಳೆತನದಲ್ಲಿ ಪರಿಣಮಿಸುತ್ತದೆ. ಇದರಿಂದ ಸಂತಾನಕ್ಕೆ ಎರಡೆರಡು ಜೀವಿಗಳ ಪೋಷಣೆ, ಪ್ರೀತಿಗಳು ಎಳೆತನದಲ್ಲಿ ದೊರೆಯುತ್ತದೆ.

**ಪ್ರಣಯದಿಂದ ಪ್ರೇಮಕ್ಕೆ**

ಮನುಷ್ಯನಲ್ಲಿಯೇ ದಾಂಪತ್ಯದ ವಿಚಾರವಾದ ಅನೇಕ ಭಾವನೆಗಳು ಬೆಳೆದಿವೆ. ಅಂಥವುಗಳಲ್ಲಿ ನೈಸರ್ಗಿಕವಾದ, ಜೀವ ಸಹಜವಾದ (Biological) ಕಾಮ, ಶೃಂಗಾರಗಳು ಮುಖ್ಯ. ಅವುಗಳಿಂದ ಅವನು 'ಕುರುಡ'ನೇ ಎಂದರೂ ಸಲ್ಲುತ್ತದೆ. ಅಂತೂ ಈ ಕುರುಡುತನ ಸಂತಾನ ಪ್ರತಿಕ್ರಿಯೆಯ ಮಟ್ಟಿಗೆ ಅವಶ್ಯಕ. ಮುಂದೆ ಒಲುಮೆ—ಪ್ರಣಯಗಳ ಭರ ಕಡಿಮೆಯಾಗಲು, ಗಂಡು ಹೆಣ್ಣುಗಳು ಜೀವನದ ಬೇರೆಯೇ ಅವಶ್ಯಕತೆಗಳಿಗಾಗಿ ಜತೆ ಸೇರಿ ಜೀವಿಸಬೇಕು. ಆಗ ಅದರ ಗೆಳೆತನಕ್ಕೆ ಬೇಕಾಗುವ ಲಕ್ಷಣಗಳು ಉಭಯತರಲ್ಲಿರಬೇಕು. ಪರಸ್ಪರ ಮನ್ನಣೆಗೆ ಕಾರಣವಾಗುವ ಗುಣಗಳು ಇರಬೇಕು. ಇವು ಮೊದಲಿಗೇನೆ ಇದೆಯೋ ಇಲ್ಲವೋ—ಎಂದು ಪ್ರಣಯ ಭರದಲ್ಲಿ ತಿಳಿಯು

ವಂತೆಯೂ ಇಲ್ಲ. ತಿಳಿಯಲು ಸಾಧ್ಯವಾಗದಿರಬಹುದು. ಗಂಡು ಹೆಣ್ಣಿನ ಮಿಲನಕ್ಕೆ ಕೇವಲ ರೂಢಿಯ ವಿವಾಹಪದ್ಧತಿ ಕಾರಣವಾಗಿರಲಿ, ಒಲುಮೆಯ ಗಾಂಧರ್ವ ರೀತಿಯೂ ಕಾರಣವಾಗಿರಲಿ, ನಿತ್ಯ ದಾಂಪತ್ಯದ ನೆಲೆಯು ಪರಸ್ಪರ ಪರಿಚಯ ಸ್ನೇಹಗಳನ್ನು ಹೊಂದಿಕೊಂಡಿದೆ. ನೈಸರ್ಗಿಕವಾದ ಆಕರ್ಷಣೆಯ ಜತೆಗೆ, ಸ್ನೇಹಕ್ಕೆ ಅವಶ್ಯವಾದ ಗುಣಗಳು ಗಂಡು ಹೆಣ್ಣಿನಲ್ಲಿರಬೇಕು. ಇವು ಇವೆಯೊ ಇಲ್ಲವೋ ಎಂಬುದು ಅನುಭವದಿಂದ ಗೊತ್ತಾಗಬೇಕಷ್ಟೆ. ಇದ್ದರಾಯಿತು, ಇಲ್ಲವಾದರೆ ಗಂಡು ಹೆಣ್ಣುಗಳ ಮನಸ್ಸು ಹರಿದಾಡುತ್ತದೆ.

**ನೀತಿ ನಿರ್ಧರಿಸಲು**

ಹೀಗಿರಲು ದಾಂಪತ್ಯ ನೀತಿಯನ್ನು ತರ್ಕಿಸುವಾಗ, ನಾವು ಕಟ್ಟಲೆಯ ಹಗ್ಗ, ತೋರಿಕೆಯ ಆದರ್ಶಗಳ ಮೇಲಿಂದ ವಿಮರ್ಶಿಸಲು ಬರುವಂತಿಲ್ಲ. ಆಗ ನಿಸರ್ಗದ ಭರವನ್ನು ನಾವು ಗಮನಿಸುವುದಿಲ್ಲ. ಅದರ ಅಧಿಕಾರ ಬಹಳ; ಇದರ ಜತೆಗೆ ವ್ಯಕ್ತಿಯ ಸಂಸ್ಕಾರ, ನಡವಳಿಕೆಗಳು ಕೆಲಸ ಮಾಡುತ್ತವೆ. ಹೀಗಿರುತ್ತ ನೀತಿಯ ತುಲನೆ—ಕೆಲಸ ಮಾಡುವ ಇಂಥವುಗಳನ್ನೆಲ್ಲ ಗಮನಿಸಬೇಕು.

ನಮ್ಮ ಸಮಾಜವು ದಾಂಪತ್ಯ ನೀತಿಯ ವಿಮರ್ಶೆಯನ್ನು ಮಾಡುವಾಗ ಎಡವಿ ಬಿದ್ದಷ್ಟು ಇನ್ನೆಲ್ಲೂ ಎಡವಿ ಬಿದ್ದಿಲ್ಲ. ಅದರಲ್ಲೂ ನೀತಿಕರ್ತರು ಆಚಂದ್ರಾರ್ಕವಾದ ಅಳತೆಯನ್ನು ಹೊಲಿಸಲು ಯತ್ನಿಸುವಂತೆ ಕಾಣುತ್ತದೆ. ನೀತಿಯೆಂಬುದು ಮನುಷ್ಯ ಸ್ವಭಾವದ ಮಿತಿಯನ್ನರಿತು, ಅವನು ಭಾಗಿಯಾಗಿರುವ ಸಮಾಜಕ್ಕೆ ಹೊಂದಿಸಿಕೊಳ್ಳಬೇಕಾದ ನಿಯಮ. ಅದು ನಡೆಯಬೇಕು—ಎಂಬುದು ನಮ್ಮ ಮುಖ್ಯ ಉದ್ದೇಶವಾದರೆ, ನಡವಳಿಕೆಗೆ ಬರಲು ಇರುವ ತಡೆಗಳೆಲ್ಲವುಗಳ ಗಮನ ನಮಗೆ ಇರಬೇಕು. ಆದರೆ ಸಮಾಜ ಪ್ರಕೃತದ ಅಳತೆಗಳು, ಮನುಷ್ಯನನ್ನು ಈ ವಿಷಯದಲ್ಲಿ ಕುಣಿಸುವ ಶಕ್ತಿಗಳ ತೀವ್ರತೆಯನ್ನಾಗಲಿ, ಸಹಜತೆಯನ್ನಾಗಲಿ ಮರೆತುಬಿಟ್ಟೇ, ತಮ್ಮ ಆದರ್ಶಗಳನ್ನು ಇರಿಸಿಕೊಂಡು ರಚಿಸಿದಂತಿವೆ.

**ತನ್ನನ್ನು ತಾನು ಅಳೆದರೆ**

ಈ ಲೈಂಗಿಕ ನೀತಿಗಳನ್ನು ಸಹಜವಾದ ತುಲನೆಗೆ ಗುರಿಪಡಿಸಲು, ಪ್ರತಿ ವ್ಯಕ್ತಿ ಮೊದಲು ತನ್ನನ್ನು ಅಳೆಯತೊಡಗಬೇಕು. ಕಾರಣ—ವ್ಯಕ್ತಿ ಉಳಿದವರ ವಿಚಾರದಲ್ಲಿ ನೀತಿಯ ವಿಮರ್ಶೆಗೆ ಸಿದ್ಧನು. ಅದರಲ್ಲಂತೂ ಲೈಂಗಿಕ ನೀತಿಯ ವಿಮರ್ಶೆಯಲ್ಲಿ ಅವನು ನಿಸ್ಸೀಮ. ತನ್ನ ವಿಷಯದಲ್ಲಿ ಅವನು 'ಗುಪ್ತ ಭಾವವುಳ್ಳವನು'. ಆದರ್ಶ ಎಷ್ಟು ತನಗಿಂತ ದೂರವಾಗಿದೆಯೋ, ಅಷ್ಟಷ್ಟು ಅವನ ನಡತೆಯು ಗುಪ್ತಗಾಮಿತ್ವ ಸಾಗಿದೆ. ಈ ಮರೆಯೊಳಗಣ ವ್ಯಕ್ತಿಯು ಇನ್ನೂ ಜೀವಶೀಲಕ್ಕೆ (Biological charecterstics) ಬಲಿಯಾದ ಪ್ರಾಣಿಯೇ ಆಗಿದ್ದಾನೆ. ಬಾಹ್ಯ ನೀತಿಯಲ್ಲಿ ಅವನು ಆದರ್ಶವಾದಿ. ಇದರಿಂದ ವ್ಯಕ್ತಿಗೆ ಎರಡು ಮುಖ ಬರುತ್ತದೆ. ಎದುರೊಂದು ಬಗೆ—ಹಿಂದೊಂದು ಬಗೆ. ಯಾವ ನೀತಿಯೇ ಇರಲಿ, ಅದು ಫಲಕಾರಿಯಾಗಲು, ಅದು ತನ್ನ ಸಮಾಜಕ್ಕೆ ಹಿತ

ವನ್ನು ಮಾಡಲು, ಈ ಬಗೆಯ 'ಎರಡು' ಮುಖಗಳನ್ನು ತೋರಿಸುವ ಆವಶ್ಯಕತೆ ಇಲ್ಲದಂತೆ ಆಗಬೇಕು. ತನ್ನನ್ನು ತಾನು ವಂಚಿಸಿಕೊಳ್ಳುವ ಪರಿಸ್ಥಿತಿಯು, ಮನುಷ್ಯನ ಉನ್ನತಿಗೆ ಹಿತಕರವಲ್ಲವೆಂದು ನನ್ನ ಅಭಿಪ್ರಾಯ.

ಈ ವಿಚಾರದಲ್ಲಿ ಸಮಾಜ ನಿಜವಾದ ಪರಿಸ್ಥಿತಿಯನ್ನು ತಿಳಿಯಲು ಪ್ರಯತ್ನಿಸಬೇಕು. ಲೈಂಗಿಕ ಸಂಬಂಧಗಳ ಕಡೆಗೆ ಸಮಾಜವು ಸಮತೋಲವಾದ ದೃಷ್ಟಿಯನ್ನು ಇಟ್ಟುಕೊಂಡಿಲ್ಲ. ಒಂದೆಡೆ ಲೌಕಿಕ ಜೀವನ ಅದಕ್ಕೆ ಇಲ್ಲದ ಮಿರುಗು ಕೊಡುತ್ತಿದೆ. ಅದೇ ಯೌವನದ ೮೦% ಅಂಶವನ್ನು ಆವರಿಸುವ ದೇವತೆಯಾಗಿ ಪರಿಣಮಿಸಿದೆ; ಆದರೆ ನಾವು ನಿರ್ಮಿಸಿದ ನೀತಿಶಾಸ್ತ್ರದಲ್ಲಿ, ಅದು ಸೇಕಡ ೮೦ ರಷ್ಟನ್ನು ಆವರಿಸುವ ದೆವ್ವವಾಗಿ ನಿಂತಿದೆ. ವಸ್ತುಸ್ಥಿತಿಯ ನಿಜವಾದ ಪರಿಚಯವಿಲ್ಲದೆ ಇರಿಸುವ ಆದರ್ಶಗಳ ಪರಿಣಾಮವೇ ಹಾಗೆ. ಅವು ಮನಸ್ಸಿನ ಭಾವನೆಗಳ ಮೇಲೆ ಅತಿಯಾದ ಹತೋಟಿಯನ್ನು ನಡೆಸಲೆತ್ನಿಸುತ್ತವೆ. ಹಾಗೆ ಮಾಡಿದಂತೆ, ಸಾಮಾನ್ಯವಾದ ಒಂದು ವಿಷಯ, ತೀರ ಮಹತ್ವದ್ದೆನಿಸಿ ಬಿಡುತ್ತದೆ. ದೇಶ ವಿದೇಶಗಳ ಮನುಷ್ಯ ಕುಟುಂಬಗಳಲ್ಲಿ ಲೈಂಗಿಕ ಸಮಸ್ಯೆಯು ಈ ತೆರನ ದ್ವಂದ್ವಕ್ಕೆ ಗುರಿಯಾಗಿದೆ. ಬದಲು ಅನಾಗರಿಕರೆನಿಸುವ ಅನೇಕ ಬಳಗಗಳಲ್ಲಿ, ಕೂಟ ಸಂಬಂಧವಾದ ಅತಿ-ನಿಯಮಗಳೂ ಇಲ್ಲ; ನಾಗರಿಕರಲ್ಲಿನ ಅತ್ಯಾಚಾರಗಳೂ ಇಲ್ಲ.

**ಅತಿ ನೀತಿಯಿಂದ ಕೆಡುಕು**

ಮನುಷ್ಯನ ಭಾವನೆಗಳನ್ನು ಅತಿ ನೀತಿಯು ಆವರಿಸಿ ಸಹಜವಾದ ನೈಸರ್ಗಿಕ ಪ್ರವಾಹಗಳಿಗೆ ಇಲ್ಲದ ಆವೇಗವನ್ನು ಕಲ್ಪಿಸುವುದಕ್ಕೆ ಕಾರಣವಾಗಿದೆ. ಈಗಿನ ಚಲಚ್ಚಿತ್ರ ಪ್ರಪಂಚವನ್ನು ನೋಡಹೋದರೆ ಜೀವನವೇ 'ಶೃಂಗಾರ'ಕ್ಕಾಗಿ ಮೀಸಲಾಗಿದೆ ಎಂಬಂತೆ ಕಾಣುತ್ತದೆ.

ಹೆವಲಾಕ್ ಎಲ್ಲಿಸ್, ಮೆಲಿನೊವಸ್ಕಿ ಮೊದಲಾದವರು, ವಸ್ತುಸ್ಥಿತಿಯ ಚಿತ್ರವನ್ನು ಬಹುವಾಗಿ ತಿಳಿಸಿದ್ದಾರೆ. ಅವರು ಹಿಂದೂದೇಶವನ್ನು ಆಕ್ಷೇಪವಾಗಿ ಇರಿಸಿಕೊಂಡಿಲ್ಲ. ನನ್ನ ತಿಳುವಳಿಕೆಯು ಅದನ್ನೊಪ್ಪುತ್ತದೆ. ನಮ್ಮ ಸಮಾಜದಲ್ಲಿ ಚಿಕ್ಕವರಿಂದ ಹಿಡಿದು ಹಿರಿಯರ ತನಕ ವ್ಯಕ್ತವಾಗುತ್ತಿರುವ ನಡತೆಗಳ ಹಿನ್ನೆಲೆಯನ್ನು ನಾನೂ ಪರಿಶೀಲಿಸಿದ್ದೇನೆ. ಅದರಿಂದ ನನ್ನ ತೀರ್ಮಾನವೂ ಇದೇ ತೆರನಾಗಿದೆ. ಸಂತಾನ ಪ್ರಕ್ರಿಯೆಗಾಗಿ ನಿರ್ಮಿತವಾದ ನೈಸರ್ಗಿಕ ಶಕ್ತಿಗಳು—ಯುರೋಪಿನ ಮನುಷ್ಯರನ್ನು ಕೆರಳುತ್ತಿರುವಂತೆ ನಮ್ಮನ್ನು ಕೆರಳುತ್ತಿವೆಯೆಂದೂ ನಮ್ಮ ನೀತಿಯು ಆದರ್ಶಗಳು, ಕಾಮದ ಒತ್ತಡವನ್ನು ಜೀವನದಿಂದ ಏನೂ ಕಡಿಮೆ ಮಾಡಿಲ್ಲವೆಂದೂ ನನ್ನ ತಿಳಿವು.

**ಆದರ್ಶ**

ಜೀವನದ ಸೊಗಸನ್ನು ಕಾಪಾಡಬೇಕು: ಹೆಚ್ಚಿಸಬೇಕೆಂಬ ನೀತಿಯು ಯಾವ ನಿರ್ಣಯಗಳೂ, ವಸ್ತುಸ್ಥಿತಿಯಿಂದ ಬಲು ದೂರವಾಗಿರಬಾರದು. ಆದರ್ಶ ಉನ್ನತವಾಗಿರುವುದರಿಂದಲೇ ಬಾಳ್ವೆ ಹಿರಿದಾಗದು. ಆದರ್ಶವನ್ನು ಎಟುಕುವ ವ್ಯಕ್ತಿಗೂ

ಅವನ ಮಿತಿಗೂ, ಅವನನ್ನು ನಡೆಯಿಸುವ ಸಾಂಸ್ಕೃತಿಕ, ನೈಸರ್ಗಿಕ ಸೆಳೆತಗಳಿಗೂ, ಆದರಲ್ಲಿ ಯೋಗ್ಯ ಸ್ಥಾನವಿರಬೇಕು. ಆದರ್ಶವು, ಇವುಗಳನ್ನು ಅಲಕ್ಷಿಸಿ ದೂರಸರಿದಂತೆ, ಅದರ ಉಪಯೋಗ ಸಮಾಜಕ್ಕೆ ಇಲ್ಲದಾಗುತ್ತದೆ. .

ಇಂದಿನ ಲೈಂಗಿಕ ನೀತಿಯು ಆ ತೆರನಾಗಿದೆ. ನಮ್ಮ ದೇಶವೂ, ಇದರಂತೆ ನಾಗರಿಕರೆನಿಸುವ ಪಾಶ್ಚಾತ್ಯ ದೇಶಗಳೂ, ಒಂದೇ ಹಾದಿಯಲ್ಲಿವೆ. ಆಯಾ ದೇಶಗಳ ನೀತಿಶಾಸ್ತ್ರಗಳು 'ಅತಿ'ಯನ್ನು ವ್ಯಕ್ತಿಯಿಂದ ಬಯಸಿ ಸಾಧ್ಯವಿರುವ ಸಂಯಮವನ್ನು ಕಳೆದುಕೊಂಡಿವೆ. ಈ ಅತಿಯ ಪರಿಣಾಮವೇ ಶೃಂಗಾರಭೂತಕ್ಕೆ ಬಲಿಯಾಗುವ ಮನೋವೃತ್ತಿ.

ಹೀಗಿರುತ್ತ ವ್ಯಕ್ತಿ 'ಆದರ್ಶ' ಲೈಂಗಿಕ ನೀತಿಯ ತುಲನೆಗೆ ಎದೆಯೊಡ್ಡಬಲ್ಲನೇ ? ಆ ನೀತಿಯ ಒರೆಗಲ್ಲನ್ನು ಹಿಡಿಯುವ ಆಚಾರ್ಯರೂ, ಹಿರಿಯರೂ ತಂತಮ್ಮನ್ನು ಮೊದಲಿಗೆ ತೂಕಮಾಡಿಕೊಂಡಲ್ಲಿ, ತಾವು ನ್ಯಾಯ ವಿಮರ್ಶಕರಾಗಲು ಎಷ್ಟು ಅರ್ಹತೆಯುಳ್ಳವರೆಂದು ಸ್ಪಷ್ಟವಾಗಬಹುದು. ಈ ಸಾಹಸವಿಲ್ಲದವರು ಇಬ್ಬಾಯ ಜೀವನ ಛಡಿಸುತ್ತಾರೆ. ತೋರಿಕೆಯ ಕವಚ ಬೇರೆ, ಅಂತರಂಗದ ಲಾಲಸೆಗಳ ರಾಜ್ಯ ಬೇರೆ. ಈ ತೆರನ ಕಪಟದ ಜೀವನ, ಅದರ ಸೊಗಸನ್ನು ಎಂದೂ ಹೆಚ್ಚಿಸಲಾರದು.

**ಹಿಂದೆ ನೋಡಿದಲ್ಲಿ**

ಮನುಷ್ಯ ಈ ವಿಷಯದಲ್ಲಿ, ತಾನು ಯಾವ ಪ್ರಾಣಿಜೀವನದಿಂದ ಪರಿಣಾಮಗೊಂಡಿರುತ್ತಾನೆಯೋ, ಅದರ ಕಡೆಗೆ ಗಮನಿಸುವುದು ಮುಖ್ಯ ವಿಷಯ. ಅವನ ಜೀವನದ ಅಧಿಕಾರವನ್ನು ಇನ್ನೂ ಅದೇ ನಿಸರ್ಗದ ನಿಯಮಗಳನು ಬಹು ಮಟ್ಟಿಗೆ ಮಾಡುತ್ತಿವೆ.

ಆದರೆ ದಾಂಪತ್ಯ ನೀತಿಯಲ್ಲಿ ಮನುಷ್ಯ ಗಮನಿಸಬೇಕಾದ ಹೆಚ್ಚಿನ ಅಂಶಗಳಿವೆ. ಈ ನೀತಿಯ ಹೇತು ಸಂತಾನ. ಪ್ರಕ್ರಿಯೆಗೊಂಡ ಸಂತಾನದ ಕಡೆಗೆ ಗಂಡು ಹೆಣ್ಣುಗಳು ಹೊಣೆಗಾರರು. ಮಗು ಸ್ವತಂತ್ರ ಜೀವನಕ್ಕೆ ಸಿದ್ಧವಾಗುವ ತನಕ, ಅದರ ಬಳಿಯಲ್ಲಿರುವ ತಾಯಿತಂದೆಯರ ಜೀವನ, ಜಿಗುಪ್ಸೆ ತರುವಂತಿರಬಾರದು. ಈ ಬಗೆಯ ಹೊಂದಿಕೆಯು ಗಂಡು ಹೆಣ್ಣುಗಳಲ್ಲಿ ಇರದಿದ್ದರೆ, ಮಗುವಿನ ಮೇಲೆ ಮಮತೆಯಿರುವ ಗಂಡೋ, ಹೆಣ್ಣೋ, ಒಂದೇನೆ ಶಿಶುವಿನ ಆರೈಕೆ ಮಾಡುವುದು ಉಚಿತ.

**ಘರ್ಷಣೆ ಬಾರದಂತೆ**

ಪುರುಷ ತನ್ನ ಪ್ರಣಯದ ಭರದಲ್ಲಿ ಸ್ತ್ರೀಯನ್ನು ಗಳಿಸಬಹುದಾದರೂ ಮುಂದೆ ದಾಂಪತ್ಯದಲ್ಲಿ ಅವಳನ್ನು ಉಳಿಸಿಕೊಳ್ಳಬೇಕು. ಇದು, ಭರದಿಲ್ಲದಾಗಲೂ ಉದ್ವೇಗ ತಣಿದಾಗಲೂ ನಡೆಯಬೇಕಾದ ಸ್ನೇಹಜೀವನ. ಪರಸ್ಪರ ಪರಿಚಯವಾಗಬೇಕು ಉಭಯತರಲ್ಲಿ. ಒಬ್ಬರಿಗೆ ಇನ್ನೊಬ್ಬರ ಅರಿವು ಬಂದು ಅವರು ಕೂಡುವಂತಿರಬೇಕು. ಇಲ್ಲವಾದರೆ ಅವರಲ್ಲಿ ನಿತ್ಯವೂ ಮಾನಸಿಕ ಘರ್ಷಣೆಗಳಾಗುತ್ತವೆ. ಇದರ ಫಲಿತವೇ ಪಾಶ್ಚಾತ್ಯರಲ್ಲಿ ಕಾಣುವ "ದಾಂಪತ್ಯ ವಿಚ್ಛೇದ"ಗಳು.

ಆದರೆ ದಾಂಪತ್ಯ ವಿಚ್ಛೇದವಿಲ್ಲದ ಸಮಾಜಗಳು, ಇರುವುವುಗಳಿಗಿಂತ ಉತ್ತಮವೇ ? ವಿಚ್ಛೇದಕ್ಕೆ ಅವಕಾಶವಿಲ್ಲ--ಎಂಬುದರಿಂದಲೇ ಸ್ನೇಹ ಉಂಟಾದೀತೆ ? ಆಮರಣಪರಿಯಂತ ಕಡಿದಾಡುವ ದಾಂಪತ್ಯಕ್ಕಿಂತ, ವಿಚ್ಛೇದ ಒಳಿತಲ್ಲವೇ ? ಅಂಥ ಗಂಡಹೆಂಡಿರು ತಮ್ಮ ಗೆಳೆತನದ ಸೋಲನ್ನಾದರೂ ಒಪ್ಪುತ್ತಾರೆ—ಎಂಬ ಪ್ರಶ್ನೆಗಳೂ ಇವೆ.

ಆಚರಣೆಗೆ ಬಾರದ ಆದರ್ಶವಾಗಲಿ, ಕಾಮಭರದ ಏಕ ಮಾತ್ರ ಪರ್ಜನ್ಸ್ಯಾಗಲಿ ದಾಂಪತ್ಯ ನೀತಿಯನ್ನು ನಿರ್ಣಯಿಸಬಾರದು. ದಾಂಪತ್ಯ ಕ್ಷೇತ್ರದಲ್ಲಿ ಕ್ರಮಗತವಾಗಿ ಫಲಿಸುವ ಸಂತತಿಯ ಕ್ಷೇಮಕ್ಕೂ ಮುಖ್ಯ ಸ್ಥಾನವಿರಬೇಕು. ಈ ವಿಷಯದಲ್ಲಿ ಕಟ್ಟು ನಿಟ್ಟಾದ ನಿಯಮಗಳು ನಡೆದಾವು, ಅವು ಸಾಧ್ಯ—ಎಂದು ನಾನು ನಂಬುವದಿಲ್ಲ. ಕಾಲ ಮಾನ, ಗುಂಪು, ವ್ಯಕ್ತಿಯ ಮನೋವೃತ್ತಿ ಇವೆಲ್ಲವುಗಳೂ ತಂತಮ್ಮ ಪ್ರಭಾವಗಳನ್ನು ಬೀರುವ ಸಂಗತಿ ಇದಾದುದರಿಂದ ಏಕತ್ರವಾದ ನಿಯಮವನ್ನು ಈ ವಿಚಾರದಲ್ಲಿ ಹೇಳುವುದು. ಅಸಾಧ್ಯ.

## ೧೪ ಉಪಸಂಹಾರ

**ಕಾಣಿಕೆ**

ತನ್ನ ಬಾಳ್ವೆಯ ವ್ಯಾಪ್ತಿಯನ್ನು ತಾನು ತಾನೇ ನೋಡಬೇಕು. ಎಲ್ಲರೂ ಹಾಗೆ ಮಾಡುತ್ತಾರೆಂದಲ್ಲ. ಬಹು ಜೀವಿಗಳ ಬಾಳ್ವೆ, ಸುಮ್ಮನೆ ಪ್ರವಾಹದಲ್ಲಿ ತೇಲುವ ಕಟ್ಟಿಗೆಯ ಚೂರುಗಳಂತೆ ಸಾಗುತ್ತದೆ. ಆದರೆ ಉಪಯುಕ್ತ ಬಾಳ್ವೆ ಮಾಡಲು ಬಯಸುವವನು, ತನ್ನ ತಿಳಿವಿನ ಎಟುಕನ್ನು ಜೀವನದ ಎಲ್ಲೆಡೆಗೂ ವಿಸ್ತರಿಸಬೇಕು. ಅದರ ಪ್ರಭಾವಕ್ಕೆ ಮೈಮನಗಳನ್ನೊಡ್ಡಿ, ಅದಕ್ಕೆ ಅನುಕೂಲನಾಗಿ ವರ್ತಿಸಬೇಕು, ಮೇಲೆ ತನ್ನ ವ್ಯಕ್ತಿತ್ವದಿಂದ ಸಮಾಜ ಪ್ರವಾಹಕ್ಕೇನಾದರೂ ಹೆಚ್ಚಿಗೆ ಸಲ್ಲಿಸಲು ಬಂದರೆ, ಸಲ್ಲಿಸುವುದಕ್ಕೂ ಪ್ರಯತ್ನಿಸಬೇಕು.

ಇಂದು ಎಲ್ಲರಿಂದಲೂ ಸಾಧ್ಯವೇ ?—ಎಂದರೆ ಸಾಧ್ಯವಿಲ್ಲದಿರಬಹುದು. ಎಲ್ಲರಿಂದ ಸಾಧ್ಯವಾಗುವುದು ಯಾವುದೂ ಇಲ್ಲ. ಬದುಕಲು ಬಯಸುವ ಮನುಷ್ಯ ತನ್ನ ಪಾಲಿನ ಪ್ರಯತ್ನ ಮಾಡುತ್ತಾನೆ. ಎಲ್ಲರ ಮನೆಗಳಲ್ಲಿ ಅಡುಗೆ ಮಾಡುತ್ತಿದ್ದಾರೆ ಎಂದು ಕೇಳಿ ತಿಳಿದು, ತನ್ನ ಮನೆಯ ಅಡುಗೆ ಬೇಯಿಸುವುದಿಲ್ಲ. ನಮ್ಮ ಹಸಿವಿಗೆ ನಮ್ಮ ಅಡುಗೆ. ಯಾರಿಗೆ ಜೀವನದಿಂದ ಪ್ರಯೋಜನ ಪಡೆಯಲು ಬಯಕೆ ಇರುತ್ತದೆಯೋ ಅವರೆಲ್ಲರೂ ವಿಚಾರ ಮಾಡುತ್ತಾರೆ. ತಂತಮ್ಮ ಆವರಣ, ಮಿತಿಗಳಿಗೆ ಸಮನಾಗಿ ಯೋಚಿಸುತ್ತಾರೆ. ಇಲ್ಲಿ ನಿರೂಪಿಸಿದ ನಂಬಿಕೆ–ನನ್ನ ವಿಚಾರ, ಅನುಭವಗಳ ಫಲಿತ—ಅಷ್ಟೇನೆ.

ಇಲ್ಲಿ ಸೂಚಿತವಾದ ಆದರ್ಶಗಳೂ ಎಲ್ಲರಿಗೆ ಹೇಳಿದುವುಗಳಲ್ಲ. ಪ್ರತಿಯೊಂದು ಆದರ್ಶದಂತೆಯೇ ಇದು. ಯಾರ ಪಾಲಿಗೆ ಇದು ತೀರ ದೂರದ ಬೆಟ್ಟವಾಗುವುದೋ, ಅವರಿಗೆ ಇದು ರಮ್ಯವೆನಿಸಬಹುದು. ಅದು ಪ್ರಯೋಜನಕಾರಿಯಾಗಲು, ಅವರು ತುಸುವಾದರೂ ಸಮೀಪವಾಗಿರಬೇಕು.

**ಆಗಿನ ಮಾತು ಆಗ**

ವ್ಯಕ್ತಿಗಳೆಲ್ಲ ಅಪೂರ್ಣರು, ಜೀವಿಗಳೆಲ್ಲ ಅಪೂರ್ಣರು, ಏಕೆ–ವಿಶ್ವ ಯಾತ್ರೆಯೇ ಅಪೂರ್ಣವಾದುದೆಂದು ಹಿಂದೆ ಹೇಳಿದ್ದೇನೆ. ನಮ್ಮ ಮುಂದಿನ ಹೆಜ್ಜೆಯಷ್ಟೆ, ನಮಗೆ ಆದರ್ಶ. ಇಂದಿನ ದಿನಕ್ಕೆ ಯುಗದಾಚೆನ ನೋಟ ಆದರ್ಶವಾಗದು ; ಆ ನೋಟ ನೋಡಲೂ ಸಿಗಲಾರದು. ಇವತ್ತಿನ ಮಿತಿಯಿಂದ ಒಂದು ಹೆಜ್ಜೆ ಮುಂದಕ್ಕಿರಿಸುವ. ಈಗಿನ ಅಭಾವಗಳನ್ನು ನಿವಾರಿಸುವ. ನಿವಾರಿಸಿದ ಬಳಿಕ ಇನ್ನೂ ಏನೇನೋ ಕಾಣಿಸೀತು—ಆಗಿನ ಮಾತು ಆಗ.

ಈ ವಿಸ್ತೃತ ಜೀವನಕ್ಕಾಗಿ ದುಡಿಯುವಾಗ ನಾವೊಬ್ಬರೇ ಸಮಾಜದಲ್ಲಿಲ್ಲ—ನಮಗಿಂತ ಭಿನ್ನಪ್ರಕೃತಿಯುಳ್ಳವರೂ ಇದ್ದಾರೆ—ಅವರ ಲಾಭ ನಷ್ಟಗಳೂ ನಮ್ಮ ಲಾಭ ನಷ್ಟಗಳಲ್ಲಿ ಸೇರಿವೆ—ಎಂದು ತಿಳಿಯಬೇಕು. ಎಷ್ಟೋ ನಮ್ಮ ಆಶಯಗಳು ಕೈಗೂಡು ವುದಿಲ್ಲವಾದರೆ, ಅವು ಇತರರ ಲಾಭಕ್ಕೆ ವಿರೋಧವಾಗುವುದರಿಂದ ಹಾಗಾಗುತ್ತವೆ. ಅನ್ಯರ ಲಾಭಗಳು, ಒಬ್ಬೊಬ್ಬರಾದ ನಮ್ಮ ಬಯಕೆಗಳನ್ನು ಮುರಿಯುವಷ್ಟು ಬಲ ವತ್ತರವಾಗಿರುವುದುಂಟು. ಹೀಗಿರಲು ನಮ್ಮ ಪ್ರಯತ್ನಗಳು ವ್ಯರ್ಥವಾದರೆ ಅಳ ಬೇಕಿಲ್ಲ. ಪ್ರಪಂಚದಲ್ಲಿ ನೂರಾರು ಸೋಲುಗಳಿಗೆ ಒಂದೆರಡು ಯಶಸ್ಸುಗಳಿದ್ದಾವೆಯೋ ಏನೋ. ಬಾಳ್ವೆಯ ಹೋರಾಟದಲ್ಲಿ ಸೋಲುಗಳಿಗೆ ಗೆಲುವುಗಳಷ್ಟೇ ಬೆಲೆ. ಸೋಲುಗಳ ತಿಳಿವಿನಿಂದಲೇ ಗೆಲುವಿಕೆ ಸಾಧ್ಯವಾಯಿತೆಂದು ಹೇಳಿದೆ. ಹೀಗಿರಲು ನಮ್ಮ ವಿಸ್ತೃತ ಬಾಳ್ವೆಯ ಕಲ್ಪನೆಗಳು, ಕೃತಿಗಳು ಎಂದೂ ನಿರರ್ಥಕ ಅನಿಸಲಾರವು. ಅವುಗಳು ನಮ್ಮ ಬಾಳ್ವೆಯನ್ನು ಬೆಳಗುತ್ತವೆ. ನಾನು ಬದುಕಲು ಶ್ರಮಿಸಿದ್ದೇನೆ; ನನ್ನಿಂದಾಗುವ ಎಲ್ಲ ವನ್ನೂ ಮಾಡಿದ್ದೇನೆ—ಎಂಬ ತೃಪ್ತಿಯನ್ನು ನಮಗೆ ಜೀವನ ಕೊಡಬೇಕು.

ಈ ನಿಬಂಧದಲ್ಲಿ ಸೂಚಿಸಿದ ಅಭಿಪ್ರಾಯಗಳೇ ಜೀವನವನ್ನು ಕುರಿತಾದ ನನ್ನ ಕೊನೆಯ ತೀರ್ಮಾನಗಳೆಂದು ತಿಳಿಯಬಾರದು. ಈ ತನಕ ನಡೆದ ನನ್ನ ಜೀವನದ ಅನುಭವಗಳ ಫಲಿತಾಂಶವಿದು. ಇನ್ನು ಮುಂದಿನ ಬಾಳ್ವೆ ಈ ಅಭಿಪ್ರಾಯಗಳನ್ನು ಸಂಸ್ಕರಿಸಬಹುದು; ಏಕೆ? ಬದಲಿಸಲುಬಹುದು. ಜೀವನ ಎಲ್ಲಿಯ ತನಕ ಸತ್ಯದ ಶಾಶ್ವತವಾದ ಅನ್ವೇಷಣೆಯೊ ಅಲ್ಲಿಯ ತನಕವೂ ಈ ಅಭಿಪ್ರಾಯಗಳು ವ್ಯರ್ಥವಲ್ಲ. 'ಸತ್ಯ'ವೂ ಕೂಡ ಆಯಾಯ ಕಾಲಮಾನದ ತಿಳುವಳಿಕೆಯಿಂದ ಬದಲಾಗುವಂಥ ಜೀವನದ ತಿಳಿವು.

